ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ—೧೫

ಶ್ರೀ ವ್ಯಾಸಮಹರ್ಷಿಪ್ರಣೀತಂ

# ಶ್ರೀ ವಿಷ್ಣುಧರ್ಮೋತ್ತರ ಮಹಾಪುರಾಣಂ

(ಸಂಸ್ಕೃತದಲ್ಲಿ ಮೂಲ, ಕನ್ನಡ ಅರ್ಥಾನುವಾದವಿವರಣೆಗಳೊಡನೆ)

## ದ್ವಿತೀಯಖಂಡ—ಒಂದನೆಯ ಭಾಗ

ಅನುವಾದಕ :

**ಚಾಮರಾಜನಗರದ ವೆಂಕಟರಮಣಶಾಸ್ತ್ರೀ**

ಮೈಸೂರು

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್

೧೯೪೫

*

# ಪ್ರಸ್ತಾವನೆ

---

" ಅದ್ಯಕಥಾಸಂದರ್ಭೆ ಪೂರ್ವಕಥಾನುವಾದಃ " ಎಂದು ಆರಂಭಿಸಿ ಪುರಾಣಿಕರು ಪುರಾಣವನ್ನು ಪ್ರಾರಂಭಿಸುವುದಕ್ಕಿಂತ ಮುಂಚೆ ಹಿಂದಿನ ದಿವಸ ಹೇಳಿದ್ದ ಪುರಾಣ ಭಾಗವನ್ನು ಸಂಗ್ರಹವಾಗಿ ಹೇಳುವ ಪದ್ಧತಿಯಂತೆ ಈ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದ ಆರಂಭಭಾಗದಲ್ಲಿ ಪ್ರಥಮಖಂಡದ ವೃತ್ತಾಂತವನ್ನೆಲ್ಲಾ ಮೊದಲನೆಯ ಅಧ್ಯಾಯದಲ್ಲಿ ಸಂಗ್ರಹವಾಗಿ ಹೇಳಿಬಿಟ್ಟಿದ್ದಾರೆ.

ಅನಂತರ ರಾಜಧರ್ಮಗಳನ್ನು ಹೇಳಬೇಕೆಂದು ಪರಶುರಾಮನು ಪುಷ್ಕರನನ್ನು ಪ್ರಶ್ನೆಮಾಡುವ ಸಂದರ್ಭವು ಸೂಚಿತವಾಗಿ ಪುರಾಣಸರಣಿಯು ಧಾರಾವಾಹಿನಿಯಾಗಿ ಮುಂದಕ್ಕೆ ಹೋಗಿದೆ.

ಈ ಖಂಡವೆಲ್ಲಾ ರಾಜಧರ್ಮವನ್ನು ವಿಶೇಷವಾಗಿ ತಿಳಿಸುತ್ತಾ ಬಂದಿದೆ. ಈ ರಾಜಧರ್ಮಶಾಸ್ತ್ರವನ್ನು ದೇವಲೋಕದ ರಾಜನಾದ ದೇವೇಂದ್ರನು ಪುಷ್ಕರನಿಗೆ ಮೊದಲು ಉಪದೇಶಮಾಡಿದನೆಂದೂ ಅನಂತರ, ವರುಣನ ಮಗನಾದ ಪುಷ್ಕರನು ತನ್ನ ತಂದೆಯ ಆಜ್ಞಾನುಸಾರವಾಗಿ ತನ್ನಲ್ಲಿ ವಿದ್ಯಾವ್ಯಾಸಂಗಕ್ಕಾಗಿ ಬಂದ ಪರಶುರಾಮನಿಗೆ ಈ ರಾಜಧರ್ಮಗಳನ್ನುಪದೇಶಮಾಡಿದನೆಂದೂ, ತಿಳಿಸುವ ಈ ದ್ವಿತೀಯ ಖಂಡವು ಬಹಳ ಸ್ವಾರಸ್ಯವಾಗಿದೆ.

ಅಮರಸಿಂಹನೆಂಬ ಮಹಾಕವಿಯಿಂದ ವಿರಚಿತವಾದ ನಾಮಲಿಂಗಾನುಶಾಸನವೆಂಬ ಗ್ರಂಥದ ದ್ವಿತೀಯಕಾಂಡದಲ್ಲಿ ಕ್ಷತ್ರಿಯವರ್ಗವೆಂಬ ಒಂದು ವರ್ಗವಿದೆ. ಆ ವರ್ಗದ ವ್ಯಾಖ್ಯಾನವೇ ಈ ದ್ವಿತೀಯಖಂಡದ ವಿಷಯವಾಗಿರಬಹುದೋ, ಎಂಬ ಭ್ರಮೆಯು ಈ ಖಂಡವನ್ನೋದುವ ವಾಚಕವರ್ಗದಲ್ಲಿ ಅಂಕುರಿಸುವಂತಿದೆ.

ಮಹಾರಾಜನು ರಾಜ್ಯಸಪ್ತಾಂಗವನ್ನೂ (ರಾಜ, ಮಂತ್ರಿ, ಸ್ನೇಹಿತ, ಖಜಾನಿ, ದುರ್ಗ, ಸೇನ, ಬಲ,) ಚತುರ್ವಿಧ ಸೇನಾಂಗವನ್ನೂ ಹೇಗೆಇಟ್ಟಿರಬೇಕೆಂಬುದೂ, ಈ ಸಪ್ತಾಂಗಚತುರಂಗಬಲಗಳ ಲಕ್ಷಣವೆಂತಿರಬೇಕೆಂಬುದೂ ಪ್ರಸಕ್ತಭಾಗದಲ್ಲಿ ವಿವೃತವಾಗಿದೆ.

ಅರಮನೆಯಲ್ಲಿರಬೇಕಾದ ದೊಡ್ಡ ದೊಡ್ಡ ನೌಕರರು, ಅಂಗರಕ್ಷಕರು, ಪುರೋಹಿತರು, ಜೋಯಿಸರು, ಧರ್ಮಾಧಿಕಾರಿಗಳು, ವಿದ್ವಾಂಸರು, ಲೇಖಕರು, ದ್ವಾರಪಾಲಕರು, ಕಟ್ಟಿಗೆಯವರು, ಹೊಗಳಭಟರು, ದೇವರಮನೆಯ ಯಜಮಾನರು, ಅಡಿಗೆಯವರೇ ಮುಂತಾದ ಸಮಸ್ತ ವಿಧವಾದ ನೌಕರರ ಲಕ್ಷಣವೂ ಇದರಲ್ಲಿ ಬಂದಿರುವುದರಿಂದ ಇದನ್ನು ಅರಮನೆಯ ಕೈಪಿಡಿಯೆಂಬ ಹೆಸರಿನಿಂದ ಬೇಕಾದರೂ ಕರೆಯಬಹುದು. ರತ್ನಪರೀಕ್ಷೆ, ಗಜಾಶ್ವಗಳ ಲಕ್ಷಣಗಳು, ಬ್ರಾಹ್ಮಣ, ಪತಿವ್ರತೆಯರ ಮಹಾತ್ಮೆಗಳೂ ಇದರಲ್ಲಿ ನಿರೂಪವಾಗಿ ಸಾವಿತ್ರೀ ಚರಿತ್ರೆಯೊಡನೆ ಈ ಭಾಗವು ಕೊನೆಗೊಂಡಿದೆ.

ಈ ಭಾಗದಲ್ಲಿ ಕಥಾನಕಗಳು ವಿಶೇಷವಾಗಿ ಬರದೇ ಹೋದಾಗ್ಯೂ ರಾಜಧರ್ಮ, ರಾಜನೀತಿ, ಲೋಕಧರ್ಮ, ಲೋಕನೀತಿ, ಸ್ತ್ರೀಪುರುಷ ಲಕ್ಷಣಗಳೇ ಮುಂತಾದ ಮುಖ್ಯ ಮುಖ್ಯ ವಿಷಯಗಳು ವಿವರಿಸಲ್ಪಟ್ಟಿವೆ.

೨೮ ನೇ ಅಧ್ಯಾಯದಲ್ಲಿರುವ ವಿಷವೈದ್ಯವೂ, ಅದಕ್ಕಿಂತ ಮುಂದೆ ಬರೆದಿರುವ ವಾಸ್ತು ಶಿಲ್ಪವಿದ್ಯೆಯೂ, ಗಿಡಗಳಲ್ಲಿ ಹಣ್ಣು ಹೂವುಗಳು ಯಥೇಚ್ಛವಾಗಿ ಬಿಡುವಂತೆ ಮಾಡುವ ವೃಕ್ಷಾಯುರ್ವೇದ ಶಾಸ್ತ್ರ ಪ್ರಕ್ರಿಯೆಗಳೂ, ಅವಶ್ಯವಾಗಿ ನೋಡಲ್ಪಡ ಬೇಕು.

ರಾಜ್ಯಪಟ್ಟಾಭಿಷೇಕವಿಧಿ, ಪುರಂದರಶಾಂತಿಕ್ರಮ, ಅಗ್ನಿಹೋಮವೇ ಮುಂತಾದ ವೈದಿಕ ಸಂಬಂಧವಾದ ಅಪೂರ್ವಸಂಗತಿಗಳನ್ನು ಇದರಲ್ಲಿ ಓದಬಹುದು.

ಇಂತಹ ಧಾರ್ಮಿಕ ಗ್ರಂಥಗಳನ್ನು ದುರವಗಾಹವಾದ ಗೀರ್ವಾಣಭಾಷೆಯಿಂದ ಕನ್ನಡಕ್ಕೆ ತರ್ಜುಮೆಮಾಡಿಸಿ ಕರ್ಣಾಟಕ ಸಾಹಿತ್ಯ ಭಂಡಾರವನ್ನು ಇಂತಹ ಶ್ರೇಷ್ಠವಾದ ಗ್ರಂಥರತ್ನಗಳಿಂದ ತುಂಬುತ್ತಿರುವ, ನಮನ್ನಾಳುವ, **ಶ್ರೀಮನ್ ಮಹಾರಾಜ, ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ.** ಮಹಾಸ್ವಾಮಿಯವರಿಗೆ ಭಗವಂತನು ಇತೋಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯ ಸಂಪತ್ತನ್ನು ಕೊಟ್ಟು ಕಾಪಾಡಲೆಂದು ಅನನ್ಯ ಮನಸ್ಸಿನಿಂದ ಭಗವಂತನನ್ನು ಪ್ರಾರ್ಥಿಸುತ್ತೇನೆ.

ಪಾರ್ಥಿವ ಪ್ರಥಮೈಕಾದಶೀ,
೨೦-೭-೧೯೪೫.
ಅಧ್ಯಾತ್ಮರಾಮಾಶ್ರಮ ಮೈಸೂರು.

**ಚಾ. ವೆಂಕಟರಮಣಶಾಸ್ತ್ರಿ,**
ಅನುವಾದಕ.

*

# ವಿಷಯಾನುಕ್ರಮಣಿಕೆ



ಅಧ್ಯಾಯ ಮತ್ತು ವಿಷಯಗಳು ಪುಟಗಳು

ಅಧ್ಯಾಯ ಮತ್ತು ವಿಷಯಗಳು ಪುಟಗಳು

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಮಹಾಪುರಾಣದ ದ್ವಿತೀಯಖಂಡದಲ್ಲಿ ಪ್ರಥಮ ಭಾಗದ ವಿಷಯಾನುಕ್ರಮಣಿಕೆ ಪರಿಸಮಾಪ್ತವಾಯಿತು.

॥ ಶ್ರೀ ॥

ಶ್ರೀ ಗಣೇಶ ಶಾರದಾ ಗುರುಭ್ಯೋನಮಃ
ಶ್ರೀ ಸೀತಾರಾಮಾಭ್ಯಾಂನಮಃ

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಪ್ರಥಮೋಽಧ್ಯಾಯಃ

**ವಜ್ರ ಉವಾಚ**

**ಆದೌ ಭಗವತಾ ಪ್ರೋಕ್ತೋ ವಿಜಯೋ ಭರತಸ್ಯಮೇ ।**
**ಯಚ್ಛ್ರುತ್ವಾ ವೇದ್ಮಿ ಚಾತ್ಮಾನಂ ಬ್ರಹ್ಮನ್ವಿಗತಕಲ್ಮಷಂ ॥ ೧ ॥**

**ಸುಖಶ್ರಾವ್ಯಶ್ಚ ಹೃದ್ಯಶ್ಚ ಕಥಾಸಾರಸ್ತು ಭಾರ್ಗವ ।**
**ಕಥಾಶ್ಚ ವಿವಿಧಾಃ ಪ್ರೋಕ್ತಾಸ್ತತ್ಪ್ರಸಙ್ಗಾತ್ತ್ವಯಾಽನಘ ॥ ೨ ॥**

---

## ಮೊದಲನೆಯ ಅಧ್ಯಾಯವು

೧. ವಜ್ರಮಹಾರಾಜನು ಮಾರ್ಕಂಡೇಯಮುನಿ ಪ್ರವರನನ್ನು ಕುರಿತು ಇದರ ಮುಂದೆ ವಿವರಿಸಿದಂತೆ ಏನೇನು ಹೇಳಿದನೆಂಬುದನ್ನು ವಾಚಕರು ನಿಯಮದಿಂದ ಶ್ರವಣಮಾಡಬೇಕು:—ಓ ! ಭಗವಾನ್ ಮಾರ್ಕಂಡೇಯ ಮಹಾ ಮುನಿಯೆ ! ನೀನು ಈಗ ಈ ವಿಷ್ಣುಧರ್ಮೋತ್ತರ ಮಹಾಪುರಾಣದ ಮೊದಲನೆಯ ಖಂಡವನ್ನು ವಿವರಿಸಿದಂತೆ ಭರತನ ವಿಜಯವೃತ್ತಾಂತವನ್ನೂ ನಿನ್ನ ಮುಖದಿಂದ ತಿಳಿದಿರುತ್ತೇನೆ. ಇದನ್ನು ಕೇಳಿದ ಮೇಲೆ ನಾನು ನನ್ನ ಸಕಲಪಾಪದೋಷಗಳನ್ನೂ ಕಳೆದುಕೊಂಡು ಪುಣ್ಯವಂತನಾದೆನೆಂದು ನನಗೆ ನಂಬಿಕೆಯುಂಟಾಯಿತು.

೨. ಎಲೈ ಮಾರ್ಕಂಡೇಯನೇ ! ನೀನು ಈ ಪುರಾಣವನ್ನು ಹೇಳುವ ಸಂದರ್ಭದಲ್ಲಿ ಕಿವಿಗಿಂಪಾದ, ಮನೋಹರವಾದ, ವಿವಿಧವಾದ ಅನೇಕ ಕಥೆಗಳನ್ನು ನನಗೆ ಹೇಳಿರುತ್ತೀಯೆ !

ರಸವತ್ಯಶ್ಚ ಧರ್ಮಜ್ಞ ಸರ್ವಪಾಪಕ್ಷಯಂಕರಾಃ ।
ಯಾಸ್ತಾ ಬ್ರಹ್ಮನ್ಪ್ರಸಂಗೇನ ಮಯ್ಯಾಃಪಹೃತ ಚೇತಸಾ ॥ ೩ ॥

ಪ್ರಸ್ತುತಾ ಸ್ತಾಃ ಕಥಾಸ್ತ್ಯಕ್ತಾಸ್ತಾ ಏವ ಕಥಯಸ್ವಮೇ ।
ಭಗವನ್ಸರ್ವಧರ್ಮಜ್ಞ ಪ್ರತ್ಯಕ್ಷಾಮಲದರ್ಶನ ।
ಕಥಾನಾಂ ತು ಪ್ರಸಂಗೇನ ಪ್ರಸ್ತುತಾಯಾಃ ಕಥಾಃ ಪುರಾ ॥ ೪ ॥

ಸುದೂರಮನ್ತರೀ ಭೂತ್ವಾ ರಾಮಸ್ಯ ವಿದಿತಾತ್ಮನಃ ।
ತಾ ಏವ ಶ್ರೋತು ಮಿಚ್ಛಾಮಿ ತ್ವತ್ತೋ ಭೃಗುಕುಲೋದ್ವಹ ॥ ೫ ॥

---

೩. ಎಲೈ ಧರ್ಮಜ್ಞನಾದ ಮಹರ್ಷಿಯೇ! ಪ್ರಸಂಗಾನುಪ್ರಸಂಗಕ್ರಮದಿಂದ ನೀನಿದುವರಿವಿಗೆ ಯಾವಯಾವ ಇತಿಹಾಸಗಳನ್ನು ನನಗೆ ಹೇಳಿರುವಿಯೋ, ಅವೆಲ್ಲವೂ ನವರಸಭರಿತವಾಗಿವೆ. ಸರ್ವಪಾಪಗಳನ್ನೂ ನಾಶಮಾಡುವ ಶಕ್ತಿಯನ್ನು ಹೊಂದಿವೆ. ಈ ಕಥೆಗಳು ನನ್ನ ಮನಸ್ಸನ್ನು ತಮ್ಮಕಡೆಗೆ ಅಪಹಾರಮಾಡಿಬಿಟ್ಟಿವೆ.

೪. ಪ್ರಸ್ತುತವಾದ ಕಥೆಯನ್ನು ಹೇಳುತ್ತಿರುವಾಗ ನೀನು ಮುಖ್ಯವಾದ ಅನೇಕ ಭಾಗಗಳನ್ನು ಬಿಟ್ಟು ಬಿಟ್ಟು ಬೇರೆದಾರಿಯಲ್ಲಿ ತಿರುಗಿ ಬಹುದೂರ ಹೊರಟುಹೋದೆ. ಯಾವ ಯಾವ ಭಾಗಗಳನ್ನು ಅವಶ್ಯಕವಾಗಿ ಹೇಳದೆ, ಮಧ್ಯೆ ಮಧ್ಯೆ ಕಥೆಗಳನ್ನು ಬಿಟ್ಟು ಬಹುದೂರ ಓಡಿಹೋದೆಯೋ, ಆ ರೀತಿ ಹಿಂದೆ ಬಿಟ್ಟುಹೊಗಿರುವ ಕಥೆಗಳನ್ನೆಲ್ಲಾ ನನಗೆ ನೀನು ಈಗಲೇ ಹೇಳಬೇಕು. ಎಲೈ ಪವಿತ್ರಮೂರ್ತಿಯೇ! ನೀನು ಸಕಲಧರ್ಮಗಳನ್ನೂ ಬಲ್ಲವನು. ಷಡ್ಗುಣೈಶ್ವರ್ಯಸಂಪನ್ನನಾದ ಭಗವಂತನೂ ಆಗಿದ್ದೀಯೆ! (ಭಗವಾನ್ ಅಂದರೆ ಉತ್ಪತ್ತಿವಿನಾಶಗಳು. ಪ್ರಾಣಿಗಳ ಗತ್ಯಾಗತಿಗಳು. ವಿದ್ಯಾಽವಿದ್ಯೆಗಳನ್ನು ಸಹ ತಿಳಿದ ಮಹಾಪುರುಷನು. ಈ ಆರನ್ನು ಷಡ್ಗುಣೈಶ್ವರ್ಯಗಳೆಂದು ಹೇಳುವರು.) ಈ ಕಥಾ ಪ್ರಸಂಗದಲ್ಲಿ ಈಗ ನೀನು ಯಾವ ಭಾಗವನ್ನು ಮುಂಬರಿಸಬೇಕೆಂಬುದನ್ನು ಕೇಳು.

೫. ನೀನು ಮೊದಲುಮೊದಲು ಪರಶುರಾಮನ ಕಥೆಗೆ ಆರಂಭಮಾಡಿದೆ. ಆ ಕಥೆಯನ್ನು ಮಧ್ಯೆ ನಿಲ್ಲಿಸಿ ಎಲ್ಲೆಲ್ಲೋ ದೂರವಾಗಿ ಹೊರಟುಹೋದೆ. ಪರಶುರಾಮನ ಕಥೆಯನ್ನೇ ಈಗ ನಾನು ಕೇಳಬೇಕೆಂದಿದೇನೆ.

ಲೋಕಂ ವಾರುಣಮಾಸಾದ್ಯ ರಾಮೋ ಭೃಗುಕುಲೋದ್ವಹಃ ।
ಶ್ರುತವಾನ್ದೇವದೇವೇಶಾತ್ಕಿನ್ನು ಭೂಯಃ ಪ್ರಚೇತಸಃ ॥ ೬ ॥

ಏತನ್ಮೇ ಸರ್ವಮಾಚಕ್ಷ್ವ ತತ್ರ ಮೇ ಸಂಶಯೋ ಮಹಾನ್ ।

ಮಾರ್ಕಂಡೇಯ ಉವಾಚ

ಕಾಲಸ್ಯ ಸಂಖ್ಯಾಂ ತಾಂ ಶ್ರುತ್ವಾ ರಾಮಪ್ರೋಕ್ತಾಂ ಪ್ರಚೇತಸಾ ॥ ೭ ॥

ಪಪ್ರಚ್ಛ ವರುಣಂ ದೇವಂ ರಾಜಧರ್ಮಾನತಃ ಪರಂ ।
ಪೃಷ್ಟಸ್ತು ಜಾಮದಗ್ನ್ಯೇನ ರಾಮಂ ಪ್ರಾಹ ಜಲೇಶ್ವರಃ ॥ ೮ ॥

ರಾಜಧರ್ಮಾನ್ಶೃಣುಷ್ವಾರ್ಯ ಪುಷ್ಕರಾತ್ತನಯಾನ್ಮಮ ।
ರಾಜಧರ್ಮಾಃ ಶ್ರುತಾಸ್ತೇನ ದೇವಾದ್ದಶಶತೇಕ್ಷಣಾತ್ ॥ ೯ ॥

---

೬. ಪರಶುರಾಮನು ವರುಣಲೋಕಕ್ಕೆ ಹೋದ ಸಂಗತಿಯನ್ನೂ, ಅವನಿಂದ ಜ್ಯೋತಿಶ್ಶಾಸ್ತ್ರಾಧ್ಯಯನ ಮಾಡಿದ ಸಂಗತಿಯನ್ನೂ ನೀನು ಹೇಳುವುದಕ್ಕೆ ಆರಂಭಿಸಿದೆಯಷ್ಟೆ? ಮುಂದಕ್ಕೆ ವರುಣನಿಂದ ಪರಶುರಾಮನು ಏನೇನನ್ನು ಕಲಿತುಕೊಂಡನೋ, ಏನೇನನ್ನು ಪ್ರಶ್ನೆಮಾಡಿ ತಿಳಿದುಕೊಂಡನೋ, ಅದನ್ನು ಮುಂಬರಿಸಿ ಹೇಳು. ಆ ವಿಷಯದಲ್ಲಿ ನನಗೆ ಸಂಶಯಬಂದಿದೆ.

೭. ಮಾರ್ಕಂಡೇಯನು, ವಜ್ರರಾಜನು ಹೇಳಿದ ಈ ಮಾತನ್ನು ಕೇಳಿ ಹೇಳಿದುದೇನೆಂದರೆ :—ಕಾಲಾವಯವಗಳ ಸಂಜ್ಞೆಯನ್ನು—(ಜ್ಯೋತಿಶ್ಶಾಸ್ತ್ರವನ್ನು) ಕೇಳಿ ತಿಳಿದುಕೊಂಡ ಬಳಿಕ ಪರಶುರಾಮನು ಇಂತು ಪ್ರಶ್ನೆಮಾಡಿದನು.

೮. ಎಲೈ ವರುಣನೇ! ನೀನು ಹೇಳಿದ ಜ್ಯೌತಿಷಿಕ ವಿಷಯಗಳನ್ನು ಕೇಳಿ ಸಂತೋಷವಾಯಿತು. ಇನ್ನುಮುಂದೆ ನೀನು ರಾಜಧರ್ಮಗಳನ್ನು ನನ್ನಮೇಲೆ ಕೃಪೆಮಾಡಿ ತಿಳಿಸಬೇಕು. ಈರೀತಿ ಪ್ರಶ್ನೆಮಾಡಿದ ಪರಶುರಾಮನನ್ನು ಕುರಿತು ವರುಣನು ಹೇಳುತ್ತಾನೆ;—

೯. ಹಾಗಾದರೆ ನಿನ್ನ ಇಷ್ಟಪ್ರಕಾರವಾಗಿ ನಿನಗೆ ರಾಜಧರ್ಮಗಳನ್ನು ತಿಳಿಸುತ್ತೇನೆ. ಕೇಳಯ್ಯ! ಪರಶುರಾಮ!! ಈಗ ನೀನು ಯಾವ ರಾಜಧರ್ಮವನ್ನು ಕೇಳಬೇಕೆಂದಿರುವಿಯೋ, ಆ ರಾಜಧರ್ಮಗಳೆಲ್ಲವೂ ಸಹಸ್ರಾಕ್ಷನಾದ ಮಹೇಂದ್ರನಿಂದ ನನ್ನ ಮಗನಾದ ಪುಷ್ಕರನಿಗೆ ಉಪದೇಶಮಾಡಲ್ಪಟ್ಟವುಗಳು. ಆದುದರಿಂದ ಈ ರಾಜಧರ್ಮಶಾಸ್ತ್ರಕ್ಕೆ ವಿಶೇಷ ಮಹತ್ವವುಂಟು.

**ಸ ಯಥಾವದ್ದ್ವಿಜಾನಾತಿ ರಾಜಧರ್ಮಾನ್ದ್ವಿಜೋತ್ತಮ ।**
**ಏವಮುಕ್ತ್ವಾ ತದಾ ರಾಮಮಾನಾಯ್ಯ ಚ ತಥಾ ಸುತಂ ॥ ೧೦ ॥**

**ಉವಾಚ ಭಾರ್ಗವಸ್ಯಾಸ್ಯ ಧರ್ಮಾನ್ಕಥಯ ಪುತ್ರಕ ।**
**ಯತ್ರ ಯತ್ರಾಸ್ಯ ಸಂದೇಹೋ ಭವಿಷ್ಯತಿ ಮಹಾತ್ಮನಃ ॥ ೧೧ ॥**

**ತದುಪಾನುದ ಭದ್ರಂ ತೇ ಮಮ ವಾಕ್ಯೇನ ಪುತ್ರಕ ।**
**ಏವಮುಕ್ತಸ್ತಥೇತ್ಯುಕ್ತ್ವಾ ಗೃಹಾನ್ನಿನ್ಯೇ ಭೃಗೂತ್ತಮಂ ॥ ೧೨ ॥**

**ರಾಮೇಣ ಪೃಷ್ಟೋ ವರುಣಸ್ಯ ಪುತ್ರೋ ।**
**ಜಗಾದ ಧರ್ಮಾನ್ನೃಪಸತ್ತಮಾನಾಂ ।**

---

೧೦. ನನ್ನ ಮಗನು ಇಂದ್ರನಿಂದ ಈ ರಾಜಧರ್ಮವನ್ನು ಚೆನ್ನಾಗಿ ಕಲಿತಿರುವನಾದ್ದರಿಂದ, ಅವನಿಂದ ನಿನಗೆ ಈ ಸಂಗತಿಯನ್ನು ಹೇಳಿಸುತ್ತೇನೆಂದು ಹೇಳಿ, ತನ್ನ ಮಗನಾದ ಪುಷ್ಕರನನ್ನು ಪರಶುರಾಮನ ಬಳಿಗೆ ಕರೆಯಿಸಿದನು.

೧೧. ತಮ್ಮ ಅಪ್ಪಣೆಯಂತೆ ಪರಶುರಾಮನ ಬಳಿಗೆ ಬಂದು ನಿಂತುಕೊಂಡ ತನ್ನ ಮಗನನ್ನು ಕುರಿತು ವರುಣನು, ಮಗು! ಈ ಪರಶುರಾಮನು ನಿನ್ನನ್ನು ಕುರಿತು ರಾಜಧರ್ಮಗಳ ವಿಚಾರವಾಗಿ ಪ್ರಶ್ನೆಮಾಡುತ್ತಾನೆ. ಈತನಿಗೆ ಎಲ್ಲೆಲ್ಲಿ ಸಂದೇಹವಿದೆಯೆಂಬುದನ್ನು ಕೇಳಿ ಮೊದಲು ತಿಳಿದುಕೋ.

೧೨. ಆ ಬಳಿಕ ಆತನ ಸಂದೇಹಗಳಿಗೆಲ್ಲಾ ಸಮಂಜಸವಾದ ಉತ್ತರವನ್ನು ಹೇಳು. ನಿನಗೆ ಶ್ರೇಯಸ್ಸುಂಟಾಗಲಿ. ನೀನಿನ್ನು ಮನೆಗೆ ಹೋಗು. ಈರೀತಿಯಾಗಿ ತನ್ನ ತಂದೆಯು ಅಪ್ಪಣೆಕೊಟ್ಟ ಮಾತನ್ನು ಕೇಳಿ ಪುಷ್ಕರನು, ಆ ಪರಶುರಾಮನನ್ನು ತನ್ನ ಮನೆಗೇ ಕರೆದುಕೊಂಡು ಹೋಗಿ ಅತ್ಯಂತ ಮಹಿಮಾಯುಕ್ತಗಳಾದ ರಾಜಧರ್ಮಗಳೆಲ್ಲವನ್ನೂ ನಿರೂಪಿಸಿದನು.

೧೩. ಶ್ರೀಮತ್ಪರಶುರಾಮದೇವರು, ವರುಣದೇವರ ಮಗನಾದ ಪುಷ್ಕರನನ್ನು ಕುರಿತು ಯಾವಯಾವ ರಾಜಧರ್ಮಗಳನ್ನು ಪ್ರಶ್ನೆಮಾಡಿದರೋ, ಅದಕ್ಕೆಲ್ಲಾ

ದ್ರವ್ಯಾನ್ಮಹಾರ್ಘಾನ್ಭುವಿ ಪಾಲನಾಯ ।
ಲೋಕಸ್ಯ ಸರ್ವಸ್ಯ ನರೇಂದ್ರಚಂದ್ರ　　　　॥ ೧೩ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಸ್ಯ ಪುಷ್ಕರಗೃಹಗಮನಂ ನಾಮ
ಪ್ರಥಮೋಽಧ್ಯಾಯಃ

---

ಪುಷ್ಕರನು ಲೋಕೋಪಕಾರದೃಷ್ಟಿಯಿಂದ, ಮಹಾರ್ಘದ್ರವ್ಯದ್ಯೋತಕಗಳಾದ ರಾಜಧರ್ಮಗಳನ್ನು ವಿವರವಾಗಿ ನಿರೂಪಿಸಿದನೆಂಬಲ್ಲಿಗೆ,

ಶ್ರೀ ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪದಲ್ಲಿ ಪರಶುರಾಮನು ರಾಜಧರ್ಮ ಶ್ರವಣಕ್ಕಾಗಿ
ಪುಷ್ಕರನ ಮನೆಗೆ ತೆರಳಿದನೆಂಬ ಹೆಸರಿನ ಒಂದನೆಯ
ಅಧ್ಯಾಯವು ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ದ್ವಿತೀಯೋಽಧ್ಯಾಯಃ

**ಮಾರ್ಕಂಡೇಯ ಉವಾಚ**

**ಸುಖಾಸೀನೋ ನರಶ್ರೇಷ್ಠ ಪುಷ್ಕರಸ್ಯ ನಿವೇಶನೇ ।**
**ಪಪ್ರಚ್ಛ ಪುಷ್ಕರಂ ರಾಮೋ ಧರ್ಮನಿತ್ಯೋ ಜಿತೇಂದ್ರಿಯಃ ॥ ೧ ॥**

**ರಾಮ ಉವಾಚ**

**ರಾಷ್ಟ್ರಸ್ಯ ಕಿಂ ಕೃತ್ಯತಮಂ ತನ್ಮಮಾಚಕ್ಷ್ವ ಪೃಚ್ಛತಃ ।**
**ಆದಾವೇವ ಮಹಾಭಾಗ ಯಾದೋಗಣ ನೃಪಾತ್ಮಜ ॥ ೨ ॥**

**ಪುಷ್ಕರ ಉವಾಚ**

**ರಾಷ್ಟ್ರಸ್ಯ ಕೃತ್ಯಂ ಧರ್ಮಜ್ಞ ರಾಜ್ಞ ಏವಾಭಿಷೇಚನಂ ।**
**ಅನಿಂದ್ರಮಬಲಂ ರಾಷ್ಟ್ರಂ ದಸ್ಯವೋಽಭಿಭವನ್ತ್ಯುತ ॥ ೩ ॥**

---

## ಎರಡನೆಯ ಅಧ್ಯಾಯವು.

೧. ಮಾರ್ಕಂಡೇಯನು ಹೇಳುತ್ತಾನೆ.—ಕೇಳೈ, ವಜ್ರರಾಜೇಂದ್ರ! ಧರ್ಮನಿತ್ಯನೂ ಜಿತೇಂದ್ರಿಯನೂ ಆದ ಆ ಪರಶುರಾಮನು ವರುಣನ ಮಗನಾದ ಪುಷ್ಕರನ ಮನೆಯಲ್ಲಿ ಸುಖಾಸನದಲ್ಲಿ ಕುಳಿತುಕೊಂಡು ಮುಂದೆ ವಿವರಿಸುವಂತೆ ಪ್ರಶ್ನೆ ಮಾಡುತ್ತಾನೆ.

೨. ಪರಶುರಾಮನ ಮೊದಲನೆಯ ಪ್ರಶ್ನೆ :—ಎಲೈ, ಸಮುದ್ರೇಶ್ವರನಾದ ವರುಣನ ಸತ್ಪುತ್ರನೇ! ರಾಜ್ಯದಲ್ಲಿ ಮೊದಲು ಮಾಡಬೇಕಾದ ಮುಖ್ಯವಾದ ಕೆಲಸವೇನು? ನನ್ನೀ ಮೊದಲನೆಯ ಈ ಪ್ರಶ್ನೆಗೆ ಉತ್ತರವನ್ನು ತಿಳಿಸಬೇಕು.

೩. ಪುಷ್ಕರನು ಅದಕ್ಕೆ ಉತ್ತರವನ್ನು ಹೇಳುತ್ತಾನೆ;—ಎಲೈ ಪರಶುರಾಮನೇ! ಕೇಳು. ಯಾವ ರಾಜ್ಯದಲ್ಲಿಯೇ ಆಗಲಿ, ಮೊದಲು ರಾಜನನ್ನು ಗೊತ್ತುಮಾಡಿಕೊಳ್ಳುವ ಮೊದಲು ಆ ಮಹಾರಾಜನಿಗೆ ಪಟ್ಟಾಭಿಷೇಕವನ್ನು ನೆರವೇರಿಸಬೇಕು. ರಾಜನಿಲ್ಲದ ದೇಶವು ನಿರ್ಬಲವಾಗುವುದಲ್ಲದೆ, ಆ ರಾಜ್ಯದಲ್ಲಿ ಮೊದಲು ಕಳ್ಳರು ಹೆಚ್ಚಿಕೊಳ್ಳುತ್ತಾರೆ.

**ಅರಾಜಕೇಷು ರಾಷ್ಟ್ರೇಷು ಧರ್ಮಾವಸ್ಥಾ ನವಿದ್ಯತೇ ।**
**ವರ್ಣಾನಾಮಾಶ್ರಮಾಣಾಂ ಚ ವ್ಯವಸ್ಥಾನಂ ಚ ಭಾರ್ಗವ ॥ ೪ ॥**

**ಅರಾಜಕೇಷು ರಾಷ್ಟ್ರೇಷು ನೈವ ಕನ್ಯಾ ಪ್ರದೀಯತೇ ।**
**ವಿದ್ಯತೇ ಮಮತಾ ನೈವ ತಥಾ ವಿತ್ತೇಷು ಕಸ್ಯಚಿತ್ ॥ ೫ ॥**

**ಸ್ವಾತ್ಮೋಕ್ತೇ ನ್ಯಾಯಃ ಪ್ರವರ್ತೇತ ವಿಶ್ವಲೋಪಸ್ತಥೈವ ಚ ।**
**ಲೋಕೇ ನ ಕಶ್ಚಿದ್ವಿದ್ಯೇತ ಗುರೋರ್ವಚನಕಾರಕಃ ॥ ೬ ॥**

**ನಾಧೀಯೀರಂ ಸ್ತ್ರಯೀಂ ವಿದ್ಯಾಂ ತ್ರಯೋ ವರ್ಣಾ ದ್ವಿಜಾತಯಃ ।**
**ದೇವಾನಾಂ ಯಜನಂ ನ ಸ್ಯಾದನಾವೃಷ್ಟಿಸ್ತತೋ ಭವೇತ್ ॥ ೭ ॥**

---

೪. ಅಂತಹ ಅರಾಜಕವಾದ ದೇಶದಲ್ಲಿ ಧರ್ಮಾವಸ್ಥೆಯೆಂಬುದು ಇರುವುದೇ ಇಲ್ಲ. ಮತ್ತೂ ಕೇಳು, ಭಾರ್ಗವ! ಅಂತಹ ರಾಜ್ಯದಲ್ಲಿ ವರ್ಣಾಶ್ರಮಧರ್ಮಗಳ ವ್ಯವಸ್ಥೆಯಂತೂ ಹೇಳಹೆಸರಿಲ್ಲದಂತಾಗುವುದು.

೫. ಅರಾಜಕವಾದಾ ರಾಜ್ಯದಲ್ಲಿ ಕನ್ಯಾದಾನದ ಪದ್ಧತಿಯೇ ತಪ್ಪಿಹೋಗುತ್ತದೆ. ಯಾರಿಗೂ ಸಹ, ಇದು ನಮ್ಮ ದುಡ್ಡು, ಇದು ತಮ್ಮ ದುಡ್ಡು, ಎನ್ನುವ ಮಮತೆಯೇ ಇರುವುದಿಲ್ಲ.

೬. ಜನರು ತಾವು ಮಾಡಿದ್ದೇ ಸರಿ, ಹೇಳಿದ್ದೇ ರಾಗವೆಂದು ತಿಳಿದುಕೊಂಡು ತಮ್ಮ ಮುಖನೇರಕ್ಕೆ ಮಾತನಾಡುತ್ತಾರೆಯೇ ಹೊರತು, ಬುದ್ಧಿಶಾಲಿಗಳ ಮಾತಿಗೆ ಕಿವಿಗೊಡುವುದೇ ಇಲ್ಲ. ಇಂತಹ ಲೋಪಗಳು ಪ್ರಪಂಚದಲ್ಲೆಲ್ಲಾ ಹರಡಿ ಹೋಗುತ್ತದೆ. ಇವನು ನಮಗಿಂತ ದೊಡ್ಡವನು; ಇಂತಹ ಗುರುವಿನ ಮಾತಿನ ಮೇಲೆ ಗೌರವವಿಟ್ಟು ನಡೆಯಬೇಕೆಂಬ ಜ್ಞಾನವೇ ಯಾರಿಗೂ ಇರುವುದಿಲ್ಲ.

೭. ದ್ವಿಜರೆನಿಸಿಕೊಳ್ಳಲರ್ಹರಾದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರೆಂಬ ಮೂರು ವರ್ಣಾಶ್ರಮದ ಜನರೂ ನ್ಯಾಯವಾಗಿ ಅಧ್ಯಯನಮಾಡಬೇಕಾದ ಋಗ್ವೇದ, ಯಜುರ್ವೇದ, ಸಾಮವೇದಗಳೆಂಬ ಮೂರು ವೇದಗಳನ್ನೂ ಅಧ್ಯಯನಮಾಡುವುದಿಲ್ಲ. ಯಾರೂ ದೇವರಪೂಜೆಯನ್ನು ಮಾಡುವುದಿಲ್ಲ. ಇದರಿಂದ ಲೋಕದಲ್ಲಿ ಕ್ಷಾಮವು ತಲೆದೋರುತ್ತದೆ.

ನೃಲೋಕಸುರಲೋಕೌ ಚ ಸ್ಯಾತಾಂ ಸಂಶಯಿತಾವುಭೌ ।
ಜನಮಾರೀ ಭವೇದ್ಘೋರಾ ಯದಿ ರಾಜಾ ನ ಪಾಲಯೇತ್ ॥ ೮ ॥

ಪ್ರಜಾನಾಂ ರಕ್ಷಣಾರ್ಥಾಯ ವಿಷ್ಣುತೇಜೋಪಬೃಂಹಿತಃ ।
ಮಾನುಷ್ಯೇ ಜಾಯತೇ ರಾಜಾ ದೇವಸತ್ತ್ವವಪುರ್ಧರಃ ॥ ೯ ॥

ಯಸ್ಮಿನ್ಪ್ರಸನ್ನೇ ದೇವಸ್ಯ ಪ್ರಸಾದಸ್ತೂಪಜಾಯತೆ ।
ಯಸ್ಮಿನ್ಕ್ರುದ್ಧೇ ಜನಸ್ಯಾಸ್ಯ ಕ್ರೋಧಃ ಸಮುಪಜಾಯತೆ ॥ ೧೦ ॥

ಮಹದ್ಭಿಃ ಪುಣ್ಯಸಂಭಾರೈಃ ಪಾರ್ಥಿವೋ ರಾಮ ಜಾಯತೇ ।
ಯಸ್ಯೈಕಸ್ಯ ಜಗತ್ಸರ್ವಂ ವಚನೇ ರಾಮ ತಿಷ್ಠತಿ ॥ ೧೧ ॥

---

೮. ಭೂಲೋಕದ ಜನರೂ, ಸುರಲೋಕದ ಸುರರೂ ಪರಸ್ಪರರ ವಿಷಯದಲ್ಲಿ ಸಂಶಯಪಡುವ ಸ್ಥಿತಿಯು ಪ್ರಾಪ್ತವಾಗುತ್ತದೆ. ಧೊರೆಯೇ ಇಲ್ಲದ ರಾಜ್ಯದಲ್ಲಿ ಪ್ಲೇಗು, ಕಾಲರಾ, ಮುಂತಾದ ಮಾರಿಕೋಪದ್ರವಗಳು ಪ್ರಾಪ್ತವಾಗುತ್ತವೆ.

೯. ಅಂತಹ ದುರವಸ್ಥೆಯನ್ನು ಹೊಂದಿದ ಅರಾಜಕವಾದ ರಾಜ್ಯದಲ್ಲಿ, ಮಹಾವಿಷ್ಣುವೇ ತನ್ನ ಅಂಶದಿಂದ ಪ್ರಜೆಗಳನ್ನು ಪರಿಪಾಲಿಸಿ ಧರ್ಮರಕ್ಷಣೆಯನ್ನು ಮಾಡುವುದಕ್ಕೋಸ್ಕರವಾಗಿ, ದೇವತಾಶಕ್ತಿಯಿಂದ ಕೂಡಿದವನಾಗಿ ಮನುಷ್ಯಜನ್ಮದಲ್ಲಿ ಹುಟ್ಟುತ್ತಾನೆ.

೧೦. ಯಾವನ ವಿಷಯದಲ್ಲಿ ರಾಜನು ಪ್ರಸನ್ನನಾಗಿರುವನೋ, ಅಂತಹ ಮನುಷ್ಯನಿಗೆ ದೇವರ ಅನುಗ್ರಹವೂ ಅನುಕೂಲವಾಗಿ ಒದಗುತ್ತದೆ. ಯಾವನ ವಿಷಯದಲ್ಲಿ ರಾಜನು ಕೋಪಮಾಡುವನೋ, ಅಂತಹ ಅದೃಷ್ಟಹೀನ ನರನು ದೇವತೆಗಳ ಕೋಪಕ್ಕೂ ಪಾತ್ರನಾಗುತ್ತಾನೆ.

೧೧. ಎಲೈ ಪರಶುರಾಮನೇ! ಕೇಳು. ಆಯಾದೇಶದ ಜನರ ಪುಣ್ಯ ಕರ್ಮಗಳಿಗನುಸಾರವಾಗಿಯೇ ಮಹಾತ್ಮನಾದ ಮಹಾರಾಜನು ದೊರಕಬೇಕೇ ಹೊರತು, ಪಾಪಪೂರಿತ ದೇಶಕ್ಕೆ ಅಂತಹ ಮಹಾರಾಜನನ್ನು ಪಡೆಯುವ ಭಾಗ್ಯ ವೆಲ್ಲಿಂದ ಬಂದೀತು ? ಅಂತಹ ಮಹಾತ್ಮನಾದ ಮಹಾರಾಜನ ಆಜ್ಞೆಗೆ ಅಧೀನವಾಗಿ ಈ ಪ್ರಪಂಚವೆಲ್ಲವೂ ನಿಂತಿರುತ್ತದೆ.

**ಚಾತುರ್ವರ್ಣ್ಯಂ ಸ್ವಧರ್ಮಸ್ಥಂ ತೇಷು ದೇಶೇಷು ಜಾಯತೇ ।**
**ಯೇಷು ದೇಶೇಷು ರಾಜೇಂದ್ರ ರಾಜಾ ಭವತಿ ಧಾರ್ಮಿಕಃ ॥ ೧೨ ॥**

**ಮಾರಕಂ ನ ಚ ದುರ್ಭಿಕ್ಷಂ ನಾಗ್ನಿಚೌರಭಯಂ ತಥಾ ।**
**ನ ಚ ವ್ಯಾಲಭಯಂ ತೇಷಾಂ ಯೇಷಾಂ ಧರ್ಮಪರೋ ನೃಪಃ ॥ ೧೩ ॥**

**ಆದೌ ವಿಂದೇತ ನೃಪತಿಂ ತತೋ ಭಾರ್ಯಾಂ ತತೋ ಧನಂ ।**
**ಕುರಾಜನಿ ಜನಸ್ಯಾಸ್ಯ ಕುತೋ ಭಾರ್ಯಾ ಕುತೋ ಧನಂ ॥ ೧೪ ॥**

---

೧೨. ನಾಲ್ಕು ವರ್ಣಾಶ್ರಮದ (ಬ್ರಾಹ್ಮಣ-ಕ್ಷತ್ರಿಯ-ವೈಶ್ಯ-ಶೂದ್ರ) ಜನರೂ ಪುಣ್ಯವಂತನಾದ, ಧಾರ್ಮಿಕನಾದ ಮಹಾರಾಜನಿರುವ ರಾಜ್ಯದಲ್ಲಿ ತಮ್ಮತಮ್ಮ ವರ್ಣಾಶ್ರಮೋಚಿತಗಳಾದ, ಪೂರ್ವಜರಿಂದನುಸರಿಸಿಕೊಂಡು ಬಂದಿರುವ ಸನಾತನ ಧರ್ಮಗಳನ್ನು ಪರಿಪಾಲಿಸಿಕೊಂಡು ಬರುತ್ತಾರೆ.

೧೩. ಯಾವ ಪರಮಪವಿತ್ರವಾದ ರಾಜ್ಯದಲ್ಲಿ ಧರ್ಮಮಾರ್ಗನಿರತನಾದ ಮಹಾರಾಜನು ಧರ್ಮದಿಂದ ರಾಜ್ಯವನ್ನು ಪರಿಪಾಲಿಸುತ್ತಿರುವನೋ, ಅಂತಹ ಉತ್ತಮವಾದ ರಾಜ್ಯದಲ್ಲಿ ಅಪಮೃತ್ಯುವಿನಿಂದಾರೂ ಮರಣಹೊಂದುವುದಿಲ್ಲ. ಆ ರಾಜ್ಯದಲ್ಲಿ ಕ್ಷಾಮದ ಭಯವಿಲ್ಲ. ಬೆಂಕಿಯ ಭಯವಾಗಲೀ, ಕಳ್ಳರ ಭಯವಾಗಲೀ, ಸರ್ಪಗಳ ಭಯವಾಗಲೀ ಸುತರಾಂ ಇರುವುದಿಲ್ಲ.

[ಪ್ರಪಂಚದಲ್ಲೆಲ್ಲಾ ಪರಮಪವಿತ್ರವಾದ ರಾಜ್ಯವೆನಿಸಿದ ಪುಣ್ಯಭೂಮಿಯಾದ, ಪ್ರಪಂಚಕ್ಕೆಲ್ಲಾ ಮಾದರಿಯೆನಿಸಿದ, ನಿಜವಾದ ಮಾದರೀರಾಜ್ಯವೇ ಆಗಿರುವ, ಧರ್ಮಾತ್ಮರಾದ ರಾಜರ್ಷಿಪ್ರವರರಾಜರಿಂದ ಬಹುಕಾಲದಿಂದಲೂ ಪರಿಪಾಲಿಸಿಕೊಂಡು ಬರುತ್ತಿರುವ, ರಾಮರಾಜ್ಯವೆನಿಸಿರುವ ಈ ನಮ್ಮ ಮೈಸೂರು ರಾಜ್ಯವನ್ನು ಈ ಶ್ಲೋಕಕ್ಕೆ ಹೋಲಿಸಬೇಕೆಂದು ನನ್ನ ಮನಸ್ಸು ಉಕ್ಕಿಯುಕ್ಕಿಬರುತಲಿದೆ. ಭಗವಂತನು ನಮ್ಮ ಮೈಸೂರುದೇಶವನ್ನು ಹೀಗೆಯೇ ಕಾಪಾಡಿಕೊಂಡು ಬರಲೆಂದು ಭರತವಾಕ್ಯವನ್ನು (ಶುಭಾಶಂಸನೆಯನ್ನು) ನುಡಿದು, ಇಲ್ಲೊಂದು ಸಣ್ಣ ಮಂಗಳವನ್ನು ಮಾಡುವುದರಿಂದ ತಪ್ಪೇನೂ ಇಲ್ಲವಷ್ಟೆ! ತಥಾಽಸ್ತು !!

೧೪. ಎಲೈ ಪರಶುರಾಮನೇ! ಕೇಳು. ಮೊದಲು, ದೇಶದಲ್ಲಿ ಜನರು ಒಳ್ಳೇಯೋಗ್ಯನಾದ ರಾಜನನ್ನು ಗೊತ್ತುಮಾಡಿಕೊಳ್ಳಬೇಕು. ರಾಜನು ಗೊತ್ತಾದ ಮೇಲೆಯೇ ಜನರು ಮದುವೆಮಾಡಿಕೊಂಡು ಧನವನ್ನು ಧರ್ಮದಿಂದ ಸಂಪಾದಿಸಬೇಕು. ಅತ್ಯಾಶಾಪರನಾದ, ನಾಸ್ತಿಕನಾದ ಕೆಟ್ಟ ರಾಜನಿರುವ ದೇಶದಲ್ಲಿರುವ ಜನರಿಗೆ ಹೆಂಡತಿಯಿಂದಾಗಲಿ, ಕೋಟಿಗಟ್ಟಲೆ ಸಂಪಾದಿಸಿದ ಧನಧಾನ್ಯಗಳಿಂದಾಗಲಿ ಏನೇನೂ ಪ್ರಯೋಜನವಿಲ್ಲ.

**ತಸ್ಮಾತ್ಸರ್ವಪ್ರಯತ್ನೇನ ರಾಷ್ಟ್ರಮುಖ್ಯೇ ನರೇಶ್ವರಃ ।**
**ಪರೀಕ್ಷ್ಯ ಪೂರ್ವೈಃ ಕರ್ತವ್ಯೋ ಧಾರ್ಮಿಕಃ ಸತ್ಯಸಂಗರಃ ॥ ೧೫ ॥**

**ಯೇಷಾಂ ಹಿ ರಾಜಾ ಭುವಿ ಧರ್ಮನಿತ್ಯ**
**ಸ್ತೇಷಾಂನ ಲೋಕೇ ಭಯಮಸ್ತಿ ಕಿಂಚಿತ್ ।**
**ತಸ್ಮಾತ್ಪ್ರಯತ್ನೇನ ನರೇಂದ್ರ ಕಾರ್ಯೋ**
**ರಾಷ್ಟ್ರಪ್ರಧಾನೈರ್ನೃಪತಿರ್ವಿನೀತಃ ॥ ೧೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ರಾಮಂ ಪ್ರತಿ ಪುಷ್ಕರವಾಕ್ಯೇ**
**ರಾಜಪ್ರಶಂಸಾ ನಾಮ**
**ದ್ವಿತೀಯೋಽಧ್ಯಾಯಃ**

---

೧೫. ಆದ್ದರಿಂದ ಜನರು ರಾಜನನ್ನು ತಮ್ಮ ರಾಜ್ಯಕ್ಕೆ ಗೊತ್ತುಮಾಡಿಕೊಳ್ಳುವ ಕಾಲದಲ್ಲಿ ದೊಡ್ಡವರನ್ನೂ, ಮುಖ್ಯಸ್ಥರನ್ನೂ, ಸಂಪ್ರದಾಯಸ್ಥರಾದ ಪೂರ್ವಿಕರನ್ನೂ ಕೇಳಿ ಧರ್ಮಾತ್ಮನೂ ಸತ್ಯಸಂಗರನೂ ಆದ ರಾಜನನ್ನೇ ಗೊತ್ತು ಮಾಡಿಕೊಳ್ಳಬೇಕು.

೧೬. ಎಲೈ ಪರಶುರಾಮನೇ! ಕೇಳು. ಯಾವ ಜನಪದದ ಜನರ ಅದೃಷ್ಟ ವಿಶೇಷದಿಂದ ಧರ್ಮಪರನಾದ ರಾಜನು ದೊರೆಯುವನೋ, ಅಂತಹ ರಾಜನ ದೇಶದಲ್ಲಿ ವಾಸಮಾಡುವ ಜನರಿಗೆ ಎಂತಹ ಭಯವೂ ಇರುವುದಿಲ್ಲ. ಆದುದರಿಂದಲೇ ದೇಶದಲ್ಲಿ ಮುಖ್ಯಮುಖ್ಯರಾದ ಮಹಾಜನರೆಲ್ಲರೂ ಐಕಮತ್ಯದಿಂದ ಸೇರಿ, ಬಹಳ ಪ್ರಯತ್ನದಿಂದ ವಿನೀತನಾದ ಸರಿಯಾದ ಯೋಗ್ಯನನ್ನೇ ರಾಜ್ಯಾಧಿಕಾರಿಯನ್ನಾಗಿ ನೇಮಿಸಿಕೊಳ್ಳಬೇಕು.

ಇಲ್ಲಿಗೆ ಶ್ರೀ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಪರಶುರಾಮನನ್ನು ಕುರಿತು ಪುಷ್ಕರನು
ಹೇಳುವ ಮಾತುಗಳಲ್ಲಿ ರಾಜಪ್ರಶಂಸೆಯೆಂಬ ಹೆಸರಿನ
ಎರಡನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ತೃತೀಯೋಽಧ್ಯಾಯಃ

**ಪುಷ್ಕರ ಉವಾಚ**

**ಸರ್ವಲಕ್ಷಣಲಕ್ಷಣ್ಯೋ ವಿನೀತಃ ಪ್ರಿಯದರ್ಶನಃ ।**
**ಅದೀರ್ಘಸೂತ್ರೀ ಧರ್ಮಾತ್ಮಾ ಜಿತಕ್ರೋಧೋ ಜಿತೇಂದ್ರಿಯಃ ॥ ೧ ॥**

**ಸ್ಥೂಲಲಕ್ಷೋ ಮಹೋತ್ಸಾಹಃ ಸ್ಮಿತಪೂರ್ವಾಭಿಭಾಷಕಃ ।**
**ಸುರೂಪಃ ಕುಲಸಂಪನ್ನಃ ಕ್ಷಿಪ್ರಕಾರೀ ಮಹಾಬಲಃ ॥ ೨ ॥**

---

### ಮೂರನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ ;—ಅಯ್ಯಾ ! ಪರಶುರಾಮ ! ರಾಜನ ಲಕ್ಷಣವನ್ನು ಇನ್ನೂ ಹೇಳುತ್ತೇನೆ, ಕೇಳು. ಮಹಾರಾಜನು ಸಮಸ್ತ ಸಲ್ಲಕ್ಷಣಗಳಿಂದ ಕೂಡಿದವನಾಗಿರಬೇಕು. ವಿನಯಸಂಪತ್ತಿನಿಂದ ಪ್ರಕಾಶಿಸುತ್ತಿರಬೇಕು. ನೋಡುವುದಕ್ಕೆ ಬಹಳ ಪ್ರಿಯ (ಇಷ್ಟ) ನಾಗಿರುವಂತೆ ಇರಬೇಕು, ಬಹು ಜಾಗ್ರತೆಯಾಗಿ ಮತ್ತೊಬ್ಬರ ಇಂಗಿತವನ್ನು ಕಂಡುಹಿಡಿಯುವ ಶಕ್ತಿಯನ್ನು ಹೊಂದಿರಬೇಕು. ಕೋಪವನ್ನು ಬಿಟ್ಟು ಶಾಂತಾತ್ಮನಾಗಿರಬೇಕು. ಜಿತೇಂದ್ರಿಯನಾಗಿರಬೇಕು.

೨. ಸ್ಥೂಲಲಕ್ಷ್ಯವುಳ್ಳವನಾಗಿಯೂ, ಉತ್ಸಾಹಶಾಲಿಯಾಗಿಯೂ ಇರಬೇಕು. ಬಹು ಸುಂದರನಾಗಿರಬೇಕು. ಒಳ್ಳೇ ಕುಲೀನ-(ಸತ್ಕುಲ ರಾಜಪ್ರಸೂತ)-ನಾಗಿ ಇರಬೇಕು. ಇನ್ನೊಬ್ಬರ ಕೆಲಸವನ್ನು ಬಹು ಜಾಗ್ರತೆಯಾಗಿ ಮಾಡಿಕೊಡಬೇಕು. ಮಹಾಬಲಿಷ್ಠನಾಗಿರಬೇಕು.

ಬ್ರಹ್ಮಣ್ಯಶ್ಚಾವಿಸಂವಾದೀ ದೃಢಭಕ್ತಿಃ ಪ್ರಿಯಂವದಃ ।
ಅಲೋಲುಪಸ್ಸಂಯತವಾಕ್ ಗಂಭೀರಃ ಪ್ರಿಯದರ್ಶನಃ　॥ ೩ ॥

ನಾತಿದಂಡೋ ನ ನಿರ್ದಂಡಃ ಚಾರಚಕ್ಷುರಜಿಹ್ಮಗಃ ।
ವ್ಯವಹಾರೇ ಸಮಃ ಪ್ರಾಪ್ತೇ ಪುತ್ರಸ್ಯ ರಿಪುಣಾ ಸಹ　॥ ೪ ॥

ರಥೇ ಗಜೇಶ್ವೇ ಧನುಷಿ ವ್ಯಾಯಾಮೇ ಚ ಕೃತಶ್ರಮಃ ।
ಉಪವಾಸತಪಃಶೀಲೋ ಯಜ್ಞಯಾಜೀ ಗುರುಪ್ರಿಯಃ　॥ ೫ ॥

ಮಂತ್ರಿಸಾಂವತ್ಸರಾಧೀನಃ ಸಮರೇಷ್ವನಿವರ್ತಕಃ ।
ಕಾಲಜ್ಞಶ್ಚ ಕೃತಜ್ಞಶ್ಚ ನೃವಿಶೇಷಜ್ಞ ಏವ ಚ　॥ ೬ ॥

---

೩. ಬ್ರಹ್ಮನಿಷ್ಠನಾಗಿರಬೇಕು. ಯಾರೊಡನೆಯೂ ವೃಥಾಮಾತನಾಡಬಾರದು. ಭಗವಂತನಲ್ಲಿ ದೃಢಭಕ್ತಿಯುಳ್ಳವನಾಗಿರಬೇಕು. ಜನರೊಡನೆ ಪ್ರಿಯವಾದ ಮಾತುಗಳನ್ನೇ ಆಡುತಲಿರಬೇಕು. ಯಾವ ವಿಷಯದಲ್ಲೂ ಅತ್ಯಂತ ಲೋಲನಾಗಿರಬಾರದು. ಗಂಭೀರವಾಗಿಯೂ ವಿನಯವಾಗಿಯೂ ಮಾತನಾಡಬೇಕು.

೪. ತಪ್ಪಿತಸ್ಥರಿಗೆ ಬಹು ಹೆಚ್ಚಾದ ಶಿಕ್ಷೆಯನ್ನು ಕೊಡಬಾರದು. ಶಿಕ್ಷೆಯನ್ನು ಸುತರಾಂ ಕೊಡದೆ ಇರಲೂಕೂಡದು. ಗೂಢಚಾರರ ಮುಖದಿಂದ ರಾಜ್ಯದ ಪರಿಸ್ಥಿತಿಯನ್ನು ವಿಚಾರಿಸಿಕೊಳ್ಳುತ್ತಿರಬೇಕು. ವ್ಯವಹಾರ ವಿಷಯಪ್ರಸಕ್ತವಾದಾಗ ಮಗನ ವಿಷಯದಲ್ಲೂ, ಶತ್ರುವಿನ ವಿಷಯದಲ್ಲೂ ಸಮಸಮವಾಗಿ ವರ್ತಿಸಬೇಕು.

೫. ರಥ (ಮೋಟಾರ್) ನಡೆಸುವುದನ್ನು ಕಲಿತಿರಬೇಕು. ಆನೆ, ಕುದುರೆ ಸವಾರಿಗಳನ್ನು ಅಭ್ಯಾಸಮಾಡಿರಬೇಕು. ಧನುರ್ವಿದ್ಯೆಯನ್ನೂ ವ್ಯಾಯಾಮವನ್ನೂ ಚೆನ್ನಾಗಿ ಅರಿತವನಾಗಿರಬೇಕು. ಉಪವಾಸದಿಂದ ಇರಲು (ಹೊಟ್ಟೆ ಹಸಿವನ್ನು ತಡೆಯಲು) ಕಲಿತಿರಬೇಕು. ತಪಸ್ಸುಮಾಡುವಕ್ರಮವನ್ನು ಗುರುಮುಖದಿಂದ ತಿಳಿದುಕೊಂಡಿರಬೇಕು. ಯಜ್ಞಯಾಗಾದಿಗಳನ್ನು ಮಾಡಬೇಕು. ಗುರುಗಳಲ್ಲಿ ಬಹಳ ಭಕ್ತಿಯಿಂದಿರಬೇಕು.

೬. ಮಂತ್ರಿ ಮತ್ತು ಜೋಯಿಸನ ಅಧೀನನಾಗಿದ್ದುಕೊಂಡು ಅವರು ಹೇಳಿದ ಮಾತಿಗೆ ಗೌರವಕೊಡಬೇಕು. ಯುದ್ಧದಲ್ಲಿ ಎಂದಿಗೂ ಹಿಂತಿರುಗಬಾರದು. ಜ್ಯೋತಿಶ್ಶಾಸ್ತ್ರವನ್ನು ಕಲಿತಿರಬೇಕು. ಉಪಕಾರಮಾಡಿದವರನ್ನು ಸ್ಮರಿಸಬೇಕು; ಅವರಿಗೆ ಪ್ರತ್ಯುಪಕಾರವನ್ನು ಮಾಡಬೇಕು. ಇತರ ನರಪತಿಗಳಿಗಿಂತ ವಿಶೇಷ ತಿಳುವಳಿಕೆ ಹೊಂದಿದವನಾಗಿರಬೇಕು.

ಪೂಜ್ಯಂ ಪೂಜಯಿತಾ ನಿತ್ಯಂ ದಂಡ್ಯಂ ದಂಡಯಿತಾ ತಥಾ ।
ಷಾಡ್ಗುಣ್ಯಸ್ಯ ಪ್ರಯೋಕ್ತಾ ಚ ಶಕ್ತ್ಯುಪೇತಸ್ತಥೈವ ಚ ॥ ೭ ॥

ಉಕ್ತೈರನುಕ್ತೈಸ್ತು ಗುಣೈರನೇಕೈಃ
ಅಲಂಕೃತೋ ಭೂಮಿಪತಿಶ್ಚ ಕಾರ್ಯಃ ।
ಸಂಭೂಯ ರಾಷ್ಟ್ರಪ್ರವರೈರ್ಯಥಾವತ್
ರಾಷ್ಟ್ರಸ್ಯ ರಕ್ಷಾರ್ಥಮದೀನಸತ್ವಃ ॥ ೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರವಾಕ್ಯೇ
ರಾಜಲಕ್ಷಣಂ ನಾಮ
ತೃತೀಯೋಽಧ್ಯಾಯಃ

---

೭. ನಿತ್ಯವೂ ಪೂಜಾರ್ಹರಾದವರನ್ನು ಪೂಜೆಮಾಡುತಲಿರಬೇಕು. ಅಪರಾಧಿಗಳಿಗೆ ದಂಡವನ್ನು ವಿಧಿಸುತ್ತಿರಬೇಕು. ಷಡ್ಗುಣಗಳನ್ನು ಪ್ರಯೋಗಮಾಡುತ್ತಿರಬೇಕು. ಮಹಾಶಕ್ತಿವಂತನಾಗಿರಬೇಕು.

೮. ಈಗ ಕೆಲವು ಲಕ್ಷಣಗಳನ್ನು ನಾನು ಸ್ವಲ್ಪವಾಗಿ ಹೇಳಿದೇನೆ. ಹೇಳದೆ ಇರುವ ಎಷ್ಟೋ ಸುಗುಣಗಳಿವೆ. ಅವುಗಳೆಲ್ಲವನ್ನೂ ವ್ಯಾಸಂಗದಿಂದಲೂ, ಸ್ವಬುದ್ಧಿಯಿಂದಾಲೋಚಿಸಿಯೂ, ಗುರುಮುಖದಿಂದಲೂ ತಿಳಿದುಕೊಳ್ಳುತ್ತ ಇರಬೇಕು. ರಾಜ್ಯವು ಪ್ರಗತಿ (ಅಭಿವೃದ್ಧಿ) ಹೊಂದಲು ಮಾಡಬೇಕಾದ ಕೆಲಸಗಳನ್ನು ದೇಶದ ಮುಖ್ಯಸ್ಥರಿಂದಲೂ, (ಪ್ರಜಾಪ್ರತಿನಿಧಿಗಳಿಂದಲೂ) ಮಂತ್ರಿಗಳಿಂದಲೂ ಸಹ ಆಲೋಚಿಸಿ ಧೈರ್ಯವಾಗಿ ಅವುಗಳನ್ನು ಜಾರಿಗೆ ತರಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಪುಷ್ಕರವಾಕ್ಯ ಸಂದರ್ಭದಲ್ಲಿ ರಾಜಲಕ್ಷಣ
ವೆಂಬ ಹೆಸರಿನ ಮೂರನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಚತುರ್ಥೋಽಧ್ಯಾಯಃ

---

**ಪುಷ್ಕರ ಉವಾಚ**

**ಏವಂ ಗುಣಗಣಾಕೀರ್ಣಂ ವರಯೇಯುರ್ನರಾಧಿಪಂ ।**
**ಸಂಭೂಯ ರಾಷ್ಟ್ರಪ್ರವರಾಃ ಕ್ಷತ್ರಿಯಂ ತು ಕುಲೋದ್ಗತಂ ॥ ೧ ॥**

**ವೃತಶ್ಚ ತೈರ್ವ್ರತಂ ರಾಜಾ ಗೃಹ್ಣೀಯಾ ದ್ವಿಜಿತೇಂದ್ರಿಯಃ ।**
**ಪಾಲಯಿಷ್ಯಾಮಿ ವಃ ಸರ್ವಾನ್ ಧರ್ಮಸ್ಥಾನ್ನಾತ್ರ ಸಂಶಯಃ ॥ ೨ ॥**

---

## ನಾಲ್ಕನೆಯ ಅಧ್ಯಾಯವು.

೧. ಪುಷ್ಕರನು ಹೇಳುತ್ತಾನೆ.—-ಮೇಲೆ ವಿವರಿಸಿದ ಲಕ್ಷಣಗಳನ್ನುಳ್ಳ ಮಹಾರಾಜನು ಕ್ಷತ್ರಿಯಕುಲೋದ್ಗತನಾಗಿ, ಪರಂಪರಾಗತ ರಾಜವಂಶದಲ್ಲಿ ಹುಟ್ಟಿರುವನೆಂಬುದನ್ನು ತಿಳಿದ, ದೇಶದ ಮೇಲಿರುವ ಮುಖ್ಯಸ್ಥರೆಲ್ಲರೂ ಸೇರಿ ಸಭೆಮಾಡಿ, ಅಂತಹ ರಾಜಕುಮಾರನನ್ನು ರಾಷ್ಟ್ರಾಧಿಪತಿಯನ್ನಾಗಿ ನೇಮಿಸಬೇಕು.

೨. ಹೀಗೆ ರಾಜ್ಯಾಧಿಪತಿಯನ್ನು ಗೊತ್ತುಮಾಡಿಕೊಂಡ ಕೂಡಲೇ, ಮುಂದೆ ಮಹಾರಾಜಪಟ್ಟದಲ್ಲಿ ಕುಳ್ಳಿರಲರ್ಹನಾದ ಆ ಭಾವೀ (ಮುಂದಿನ) ನರೇಂದ್ರನು ಪಟ್ಟಾಭಿಷೇಕಾರ್ಥವಾದ ವ್ರತವನ್ನು ಕೈಗೊಳ್ಳಬೇಕು. ಆರೀತಿ ನಿಯಮವ್ರತಧಾರಿಯಾದ ರಾಜಶ್ರೇಷ್ಠನು ಜಿತೇಂದ್ರಿಯನಾಗಿ;—ನಿಮ್ಮನ್ನೆಲ್ಲಾ ಧರ್ಮದಿಂದ ಪರಿಪಾಲನೆಮಾಡಿಕೊಂಡು ಬರುತ್ತೇನೆಂದೂ, ಈ ನನ್ನ ಮಾತಿನಲ್ಲಿ ಸಂಶಯಪಡಬಾರದೆಂದೂ ಪ್ರಜೆಗಳಿಗೆ ಅಭಯದಾನಮಾಡಬೇಕು.

**ವ್ರತಂ ಗೃಹೀತ್ವಾ ರಾಜ್ಯಾರ್ಥೀ ವೃಣುಯಾ ದ್ಬ್ರಾಹ್ಮಣೋತ್ತಮಂ ।**
**ಸಾಂವತ್ಸರಂ ಸುಖಾಯಾಸ್ಯ ಸರ್ವಸ್ಯ ಜಗತೋ ನೃಪಃ ॥ ೩ ॥**

**ಸರ್ವಲಕ್ಷಣಲಕ್ಷಣ್ಯಂ ವಿನೀತಂ ಪ್ರಿಯದರ್ಶನಂ ।**
**ಸುರೂಪಂ ವೇಷಸಂಪನ್ನಂ ನಿತ್ಯಮೂರ್ಜಿತದರ್ಶನಂ ॥ ೪ ॥**

**ಅದೀನವಾದಿನಂ ಧೀರಂ ಧರ್ಮನಿತ್ಯಂ ಜಿತೇಂದ್ರಿಯಂ ।**
**ಅವ್ಯಂಗಂ ನಾಧಿಕಾಂಗಂ ಚ ವೇದವೇದಾಂಗಪಾರಗಂ ॥ ೫ ॥**

**ಚತುಃ ಷಷ್ಟ್ಯಂಗತತ್ವಜ್ಞಂ ಊಹಾಪೋಹವಿಶಾರದಂ ।**

---

೩. ಈರೀತಿ ಪಟ್ಟಾಭಿಷೇಕಾರ್ಥವಾದ ವ್ರತವನ್ನು ನಿಯಮದಿಂದ ಆರಂಭ ಮಾಡಿದೊಡನೆಯೇ ರಾಜ್ಯಾರ್ಥಿಯಾದಾ ನರೇಶ್ವರನು ಸಕಲಲೋಕಹಿತಾರ್ಥವಾಗಿ, ಜ್ಯೋತಿಶ್ಶಾಸ್ತ್ರವನ್ನು ಚೆನ್ನಾಗಿ-ಬಲ್ಲ ಒಬ್ಬ ಬ್ರಾಹ್ಮಣನನ್ನು ಕರೆಯಿಸಿ ಅವನಿಗೆ ಪಟ್ಟಾಭಿಷೇಕ ಕರ್ಮದಲ್ಲಿ ನೀನು ಆಚಾರ್ಯನಾಗಿರಬೇಕೆಂದು, ವರಣವನ್ನು ಕೊಟ್ಟು ಪ್ರಾರ್ಥಿಸಬೇಕು. (ವರಣವೆಂದರೆ ಎರಡು ದರ್ಭೆಯನ್ನು ಕೈಗೆ ಪವಿತ್ರಾರ್ಥವಾಗಿ ಕೊಟ್ಟು ತಲೆಯಮೇಲೆ ಮಂತ್ರಾಕ್ಷತೆಕಾಳುಗಳನ್ನು ಹಾಕಿ ಕೈಮುಗಿದು ಕೇಳಿ ಕೊಳ್ಳುವುದು.)

೪. ಆ ಜ್ಯೋತಿಷ್ಕನ ಲಕ್ಷಣವನ್ನು ಹೇಳುತ್ತೇನೆ, ಕೇಳು. ಆ ಜ್ಯೋತಿಷಿಯು ಸರ್ವಲಕ್ಷಣಗಳಿಂದ ಸಂಪನ್ನನಾಗಿರಬೇಕು. ವಿನೀತನಾಗಿಯೂ ಪ್ರಿಯದರ್ಶಕ ನಾಗಿಯೂ ಇರಬೇಕು. ಒಳ್ಳೇ ಸುಂದರನಾಗಿಯೂ, ಒಳ್ಳೆಯ ಉಡುಪುಗಳಿಂದ ಅಲಂಕೃತನಾಗಿಯೂ, ಪ್ರತಿದಿನವೂ ಇಂತಹ ಮಹಾತ್ಮನನ್ನು ನೋಡುತಲಿರಬೇಕೆಂದು ಜನರು ಆಶೆಪಡುವಂತಹ ಸ್ಥಿತಿಯಲ್ಲಿರತಕ್ಕವನಾಗಿಯೂ ಇರಬೇಕು.

೫. ಧೀರನಾಗಿಯೂ, ಯಾರೊಡನೆಯೂ ಹೆದರದೆ ಧೈರ್ಯದಿಂದ ಮಾತ ನಾಡತಕ್ಕವನಾಗಿಯೂ, ಜಿತೇಂದ್ರಿಯನಾಗಿಯೂ, ಧರ್ಮಾತ್ಮನಾಗಿಯೂ, ಅಂಗ ಸೌಷ್ಠವವುಳ್ಳವನಾಗಿಯೂ, ಅಧಿಕಾಂಗನಲ್ಲದೆಯೂ, ವೇದವೇದಾಂಗಪಾರಂಗತ ನಾಗಿಯೂ ಇರುವವನಾಗಿ ಆ ಜೋಯಿಸನು ಪ್ರಕಾಶಮಾನನಾಗಿರಬೇಕು.

೬. ಆ ಜೋಯಿಸನು ಅರುವತ್ತುನಾಲ್ಕು ವಿದ್ಯೆಗಳನ್ನೂ ತಿಳಿದವನಾಗಿಯೂ, ಊಹಾಪೋಹವಿಶಾರದನಾಗಿಯೂ, ತತ್ವಜ್ಞಾನಸಂಪನ್ನನಾಗಿಯೂ, ಭೂತಭವಿಷ್ಯ

**ಭೂತಭವ್ಯಭವಿಷ್ಯಜ್ಞಂ ಗಣಿತಜ್ಞಂ ವಿಶೇಷತಃ ॥ ೬ ॥**

**ವಿಚಂದ್ರಾ ಶರ್ವರೀ ಯದ್ವತ್ ಮುಕುಟಂಚ ಚ್ಯುತೋಪಲಂ ।**
**ಗಣಿತೇನ ತಥಾಹೀನಂ ಜ್ಯೋತಿಷಂ ನೃಪಸತ್ತಮ ॥ ೭ ॥**

**ಆಸ್ತಿಕಂ ಶ್ರದ್ದಧಾನಂ ಚ ಅನುಕೂಲಂ ಮಹೀಪತೇಃ ।**
**ಸಾಂವತ್ಸರಂ ನೃಪೋ ಮತ್ವಾ ವರಯೇತ್ಪ್ರಯತಃ ಶುಚಿಃ ॥ ೮ ॥**

**ಯೇನಾಭಿಷಿಕ್ತೋ ನೃಪತಿಃ ವಿನಷ್ಟಸ್ತು ನರಾಧಿಪ ।**
**ಸಾಂವತ್ಸರಂ ನ ತಂ ವಿದ್ವಾನ್ವರಯೇನ್ನೃಪಸತ್ತಮ ॥ ೯ ॥**

---

ದ್ವರ್ತಮಾನಸ್ಥಿತಿಗಳನ್ನರಿತವನಾಗಿಯೂ, ಅದರಲ್ಲೂ ವಿಶೇಷವಾಗಿ ಗಣಿತಶಾಸ್ತ್ರವನ್ನು ಚೆನ್ನಾಗಿ ಅಭ್ಯಾಸಮಾಡಿದವನಾಗಿಯೂ ಇರಬೇಕು.

೭. ಎಲೈ ಪರಶುರಾಮನೇ! ಕೇಳು. ಎಷ್ಟೇ ವಿದ್ಯೆಯನ್ನೋದಿರಲಿ; ಗಣಿತಶಾಸ್ತ್ರವನ್ನಾವನು ಅಭ್ಯಾಸಮಾಡಿರುವುದಿಲ್ಲವೋ, ಅಂತಹ ಬ್ರಾಹ್ಮಣನು ಚಂದ್ರನಿಲ್ಲದ(ರಾತ್ರಿಯಂತೆಯೂ, ರತ್ನಗಳೆಲ್ಲಾ ಕಳಚಿಹೋಗಿರುವ ಕಿರೀಟದಂತೆಯೂ, ಪ್ರಕಾಶಿಸಲಾರನು. ಆದ್ದರಿಂದ ಗಣಿತಶಾಸ್ತ್ರವೇ ಗೊತ್ತಿಲ್ಲದ ಜೋಯಿಸನನ್ನು ಅರಮನೆಯ ಜ್ಯೋತಿಷ್ಕನನ್ನಾಗಿ ಇಟ್ಟುಕೊಳ್ಳಕೂಡದು.

೮. ಗಣಿತವಿದ್ಯೆಯನ್ನು ಬಲ್ಲ ಅಂತಹ ಜ್ಯೌತಿಷಿಕನು ಆಸ್ತಿಕನಾಗಿರಬೇಕಲ್ಲದೆ ಮಹಾರಾಜರ ಕೆಲಸದಲ್ಲಿ ವಿಶೇಷಶ್ರದ್ಧೆಯುಳ್ಳವನಾಗಿಯೂ, ರಾಜರ ಕಾರ್ಯಕ್ಕನ, ಕೂಲನಾಗಿಯೂ ಇರಬೇಕು. ಇಂತಹ ಅತ್ಯುತ್ತಮವಾದ ಗುಣಗಳಿಂದಲಂಕೃತನಾದ ಜೋಯಿಸನನ್ನು ಮೊದಲೇ ಗೊತ್ತುಮಾಡಿಕೊಂಡಿದ್ದು, ಅಂತಹ ಮಹಾನುಭಾವನಾದ ಬ್ರಾಹ್ಮಣಶ್ರೇಷ್ಠನನ್ನು ಪಟ್ಟಾಭಿಷೇಕಕಾಲದಲ್ಲಿ ಅರಮನೆಗೆ ಕರೆಯಿಸಿ ಅವನಿಗೆ, ರಾಜನು ಸ್ನಾನಮಾಡಿ ಪರಿಶುದ್ಧನಾಗಿ ವರಣವನ್ನು ಕೊಡಬೇಕು.

೯. ಈರೀತಿ ಮಾಡದೆ ಕೆಲಸಕ್ಕೆಬಾರದ, ಆಶೆಬುರುಕನಾದ ಯಾವನೋ ಒಬ್ಬ ಅನಾಮಧೇಯನಾದ ಜೋಯಿಸನನ್ನು ಕರೆಯಿಸಿ, ಪಟ್ಟಾಭಿಷೇಕಮಾಡಿಸಿದರೆ ರಾಜ್ಯವೇ ನಾಶವಾಗುವ ಸ್ಥಿತಿ ಬಂದುಬಿಟ್ಟೀತು. ಆದ್ದರಿಂದ ಜೋಯಿಸರನ್ನಾರಿಸು ವುದರಲ್ಲಿ ಬಹಳ ಎಚ್ಚರಿಕೆಯಿಂದಿರಬೇಕು.

**ನಹೀನಾಂಗಂ ನ ವಾಚಾಲಂ ನ ಚ ನಿಷ್ಪ್ರತಿಭಂ ನೃಪಃ ।**
**ಕುವೇಶಮಲಿನಂ ಮುಂಡಂ ನಾಸ್ತಿಕಂ ಪಾಪನಿಶ್ಚಯಂ ॥ ೧೦ ॥**

**ಭಿನ್ನವೃತ್ತಿಂ ಚ ವರಯೇತ್ ವರಯೇತ್ಸದ್ಗುಣಂ ಸದಾ ।**
**ವರಯಿತ್ವಾ ತು ವಕ್ತವ್ಯಾಃ ಸ್ವಯಮೇವ ಮಹೀಭುಜಾ ॥ ೧೧ ॥**

**ಯಥೈವಾಗ್ನಿಮುಖಾ ದೇವಾಃ ತಥಾ ರಾಜಮುಖಾಃ ಪ್ರಜಾಃ ।**
**ಯಥೈವಾಗ್ನಿಮುಖಾ ಮನ್ತ್ರಾಃ ರಾಜ್ಞಾಂ ಸಾಂವತ್ಸರಾಸ್ತಥಾ ॥ ೧೨ ॥**

---

೧೦. ಅರಮನೆಯಲ್ಲಿ ಮಹಾರಾಜರ ಸಾನ್ನಿಧ್ಯದಲ್ಲಿರಬೇಕಾದ ಜ್ಯೋತಿಷ್ಕನು ಹೀನಾಂಗನಾಗಿರಬಾರದು. ತಲೆಹರಟೆ ಮಾತನಾಡುವವನಾಗಿರಬಾರದು. ಅಪ್ರತಿಭನಾಗಿರಬಾರದು. ಕೊಳೇಬಟ್ಟೆಯನ್ನು ಹಾಕಿಕೊಂಡು ಬಲು ಕೊಳಕನಾಗಿರಬಾರದು. ತಲೆಯನ್ನು ಪೂರ್ತಾ ಬೋಳಿಸಿಕೊಂಡಿರುವವನಾಗಕೂಡದು. ಪಾಪಭೀತನಲ್ಲದ ನಾಸ್ತಿಕನಾಗಿರಕೂಡದು.

೧೧. ಅರಮನೆ ಕೆಲಸವಲ್ಲದೆ ಅಲ್ಲಿ ಇಲ್ಲಿ ಹೋಗಿ ಬೇರೆವೃತ್ತಿಯನ್ನು ಮಾಡುವವನಾಗಿರಬಾರದು. ಇಂತಹ ಹೀನಲಕ್ಷಣಗಳುಳ್ಳವನಲ್ಲದ, ಸದ್ಗುಣಗಳಿಂದಲಂಕೃತನಾದ, ಈ ಅಧ್ಯಾಯದ ಪ್ರಾರಂಭದಲ್ಲಿ ಹೇಳಿರುವ ಲಕ್ಷಣವುಳ್ಳ ದೈವಜ್ಞಶ್ರೇಷ್ಠನನ್ನು ಮೊದಲೇ ಗೊತ್ತುಮಾಡಿಕೊಂಡಿದ್ದು, ಪಟ್ಟಾಭಿಷೇಕ ಸಮಯದಲ್ಲಿ ಮಹಾರಾಜನು ಆ ಜ್ಯೋತಿಷ್ಕನ ಮುಂದೆ ತಾನೇ ಹೋಗಿ ನಿಂತುಕೊಂಡು, ವರಣ ಕೊಟ್ಟು ಈ ಮುಂದೆ ಹೇಳುವಂತೆ ಪ್ರಾರ್ಥಿಸಿಕೊಳ್ಳಬೇಕು.

೧೨. ಸ್ವಾಮೀ! ಜೋಯಿಸರೇ! ದೇವತೆಗಳು ಅಗ್ನಿಮುಖದಿಂದ ಹೇಗೆ ತೃಪ್ತಿಹೊಂದುತ್ತಿರುವರೋ, ಪ್ರಜೆಗಳು ರಾಜಮುಖದಿಂದ ಅದೆಂತು ತೃಪ್ತರಾಗುತ್ತಿರುವರೋ, ಸಕಲ ವೇದಮಂತ್ರಗಳೂ ಅಗ್ನಿಮುಖದಿಂದಲೇ ಹೇಗೆ ವಿನಿಯೋಗಿಸಲ್ಪಡುತ್ತಿವೆಯೋ, ಅದೇಮೇರೆ ರಾಜರೆಲ್ಲರೂ ಜ್ಯೋತಿಷ್ಕರಿಂದಲೇ ಅಭಿವೃದ್ಧಿಮಾರ್ಗವನ್ನು ಹೊಂದಬೇಕಾಗಿದೆ.

ತ್ವಂ ಮೇ ಮಾತಾ ಪಿತಾ ಚೈವ ದೇಶಿಕಶ್ಚ ಗುರುಸ್ತಥಾ ।
ದೈವಂ ಪುರುಷಕಾರಶ್ಚ ಜ್ಞಾತವ್ಯೌ ಸತತಂ ತ್ವಯಾ ॥ ೧೩ ॥

ಸಾಮಥರ್ಮಜ್ಞ ಭದ್ರಂ ತೇ ರಾಜ್ಯಂ ಸಾಧಾರಣಂ ಹಿನೌ ।
ಸಮಾನೇಯಃ ಶುಭೋ ದೇವಃ ತ್ವಯ್ಯೈವ ಮಮ ಸತ್ತಮ ॥ ೧೪ ॥

ಪೌರುಷೇಣ ಪದಂ ಕಾರ್ಯಂ ಸಮರಂ ಚ ತಥಾ ಮಯಾ ।
ಸಚೇತ್ತದಭಿಮನ್ಯೇತ ಪಾರ್ಥಿವಸ್ಯ ಮಹಾಗುಣಂ ॥ ೧೫ ॥

ಅಥವಾ ಗುಣದೋಷೇಣ ಪ್ರಜ್ಞಯಾ ಚಾಶು ಯೋ ನೃಣಾಂ ।
ದೈವೋಪಘಾತಸಮರೇ ವಿಜ್ಞಾನಂ ಪೌರುಷಸ್ಯ ಚ ॥ ೧೬ ॥

---

೧೩. ಆದುದರಿಂದೆಲೈ ಮೌಹೂರ್ತಿಕರೇ! ನೀವೇ ನನಗೆ ತಾಯಿತಂದೆಗಳೂ, ಆಚಾರ್ಯರೂ ಗುರುಗಳೂ ಆಗಿರುತ್ತೀರಿ. ದೈವಿಕವಾದ ವೃತ್ತಾಂತಗಳೂ, ಪೌರುಷದಿಂದಾಗಬೇಕಾದ ವೃತ್ತಾಂತಗಳೆಲ್ಲವೂ ಯಾವಾಗಲೂ ನಿಮಗೆ ತಿಳಿದೇ ಇರುತ್ತದೆ. (ಅಂದರೆ ನೀವು ಭೂತ-ಭವಿಷ್ಯದ್ವರ್ತಮಾನಗಳನ್ನು ತಿಳಿದವರೆಂದು ತಾತ್ಪರ್ಯ.)

೧೪. ಓ! ಸಮಧರ್ಮಜ್ಞರಾದ ದೈವಜ್ಞರೇ! ನಿಮಗೆ ಮಂಗಳವಾಗಲಿ. ಈ ರಾಜ್ಯವು ನನಗೂ ನಿಮಗೂ ಸಾಧಾರಣವಾಗಿ ಒಂದೇ ಆಗಿದೆ. ದೇವರು ನಿಮ್ಮ ಮೂಲಕ ನನಗೆ ಒಳ್ಳೆಯ ಶುಭಸಂತತಿಯನ್ನುಂಟುಮಾಡುವಂತೆ ಅನುಗ್ರಹ ಮಾಡಬೇಕು.

೧೫. ನಾನು ಅದೆಂತು ರಾಜ್ಯವನ್ನಾಳಬೇಕೆಂಬುದನ್ನೂ, ಅಸಾಧಾರಣವಾದ ಪೌರುಷ (ಶಕ್ತಿ-ಬಲ) ದಿಂದ ಸಮರಾಂಗಣದಲ್ಲಿ ಅದೆಂತು ನಿಂತು ಶತ್ರುವಿನೊಡನೆ ಯುದ್ಧಮಾಡಬೇಕೆಂಬುದನ್ನು ಒಳ್ಳೇ ಮಹಾರಾಜನಾಗಿರಬೇಕಾದರೆ ಎಂತಹ ಮಹಾಗುಣಗಳನ್ನು ಹೊಂದಬೇಕೆಂಬುದನ್ನೂ ದಯಮಾಡಿ ಉಪದೇಶಿಸಿ ನನ್ನನ್ನು ಅನುಗ್ರಹಿಸಿರಿ.

೧೬. ಮತ್ತು (ಅಥವಾ) ಗುಣದೋಷವಿವೇಚನಾಸಾಮರ್ಥ್ಯವುಳ್ಳ ಪ್ರಜ್ಞೆಯಿಂದ ಯಾವ ಮನುಷ್ಯನಿಗೆ ಯಾವ ಸಹಾಯವನ್ನು ಮಾಡಬೇಕೋ, ದೈವವಶದಿಂದ ಆಗಬಹುದಾದ ಯುದ್ಧಸಂದರ್ಭದಲ್ಲಿ ಪೌರುಷದಿಂದುಂಟಾದ ವಿಜ್ಞಾನದ ಪರಮಾವಧಿಯೆಂತುಂಟಾಗುವುದೋ ಅದನ್ನೆಲ್ಲಾ ನನಗನುಗ್ರಹಿಸಿ ತಿಳಿಸಬೇಕೈ! ಜೋಯಿಸರೇ!

ವಾಡವಂ ನ ಚ ಪ್ರಾಜ್ಞಸ್ತು ತಸ್ಯೈವಾನುಮತೇ ತದಾ ।
ತೇನೋದ್ದಿಷ್ಟೌ ತು ವರಯೇತ್ ರಾಜಾ ಮಂತ್ರಿಪುರೋಹಿತೌ ॥ ೧೭ ॥

ತೇನೋದ್ದಿಷ್ಟಾಂ ಚ ವರಯೇತ್ ಮಹಿಷೀಂ ನೃಪಸತ್ತಮಃ ।
ತತೋಽಭಿಷೇಕಸಂಭಾರಾನ್ ತಸ್ಯ ಕುರ್ಯಾತ್ಸ ದೈವವಿತ್ ॥ ೧೮ ॥

ಕುಂಜರಂ ತುರಗಂ ಕುರ್ಯಾತ್ ತಸ್ಯರಾಜ್ಞಃ ಪರೀಕ್ಷಿತೌ ।
ಭದ್ರಾಸನಂ ಚ ಛತ್ರಂ ಚ ವಾಲವ್ಯಜನಮೇವ ಚ ॥ ೧೯ ॥

ಖಡ್ಗರತ್ನಂ ತಥಾ ಚಾಪಂ ರತ್ನಾನಿ ವಿವಿಧಾನಿ ಚ ।
ರಾಜ್ಞೋ ಮೃತಸ್ಯ ಯೇ ತ್ವಾಸನ್ ಸರ್ವಾಣಿ ತು ನರಾಧಿಪ ॥ ೨೦ ॥

ತೇನ ಕಾರ್ಯಾ ನರೇಂದ್ರಸ್ಯ ತೇನ ದೈವವಿದಾ ತಥಾ ।
ಕಾಮಂ ಸಂವತ್ಸರಂ ಕಾರ್ಯಾ ಅಲಾಭೇಽನ್ಯಸ್ಯ ಭೂಭುಜಾ ॥ ೨೧ ॥

---

೧೭. ಈರೀತಿ ಪ್ರಾರ್ಥನೆಮಾಡಿಕೊಂಡ ಬಳಿಕ ಬುದ್ಧಿಶಾಲಿಯಾದ ಮಹಾರಾಜನು ಪ್ರಾಜ್ಞನಾದಾದೈವಜ್ಞನ ಅನುಮತಿಯನ್ನು ಪಡೆದು ಅವನು ಯಾರನ್ನು ಚುನಾಯಿಸುತ್ತಾನೋ ಅಂತಹ ಲಕ್ಷಣಗಳನ್ನುಳ್ಳ ಮಂತ್ರಿಯನ್ನೂ, ಪುರೋಹಿತನನ್ನೂ ತನ್ನ ಆಸ್ಥಾನ (ರಾಜನ ಸಮೀಪ) ದಲ್ಲಿರಲು ನಿಯಮಿಸಿಕೊಳ್ಳಬೇಕು.

೧೮. ಮತ್ತು ಜೋಯಿಸರು ಹೇಳಿದ ಮಹಾರಾಣೀ ಲಕ್ಷಣಗಳನ್ನುಳ್ಳ ಧರ್ಮಪತ್ನಿಯನ್ನೇ ವಿವಾಹಮಾಡಿಕೊಳ್ಳಬೇಕು. ಈ ಕ್ರಮದಿಂದ ಸಾಂವತ್ಸರ (ಜೋಯಿಸ)ನೂ, ಮಂತ್ರಿಪುರೋಹಿತರೂ, ಭಾರ್ಯೆಯೂ ದೊರೆತ ಬಳಿಕ ಜೋಯಿಸನು ಪಟ್ಟಾಭಿಷೇಕಕ್ಕಾಗಿ ಆಗಬೇಕಾದ ಸಕಲ ಸಂಭಾರಗಳನ್ನೂ ಅಧಿಕಾರಿಗಳಮೂಲಕ ತರಿಸಿಕೊಳ್ಳಬೇಕು.

೧೯-೨೦. ಪಟ್ಟದ ಆನೆ, ಪಟ್ಟದ ಕುದುರೆ, ಸಿಂಹಾಸನ, ಶ್ವೇತಚ್ಛತ್ರಿ, ಚಾಮರ, ವ್ಯಜನ, ಖಡ್ಗ-ರತ್ನ, ಧನುಸ್ಸು, ರತ್ನಗಳು, ನಾನಾವಿಧವಾದ ವಜ್ರಾದ್ಯಾಭರಣಗಳು, ಹಿಂದೆ ಬದುಕಿದ್ದ ಮಹಾರಾಜರವರ ಹತ್ತಿರ ಏನೇನು ಪದಾರ್ಥಗಳು ಬಳಕೆಯಲ್ಲಿದ್ದುವೋ ಅವುಗಳೆಲ್ಲವನ್ನೂ ತರಿಸಿ ಸಭೆಯಲ್ಲಿಡಬೇಕು.

೨೧. ಇವೆಲ್ಲವನ್ನೂ ಮುಂದಿಟ್ಟು ಕುಶಲನಾದಾ ಜೋಯಿಸನಿಂದ ಪಟ್ಟಾಭಿಷೇಕಕ್ರಮವು ನೆರವೇರಿಸಲ್ಪಡಬೇಕು. ಹಿಂದಿನ ರಾಜನು ಮೃತನಾದ ಒಂದು

ಗುಣಾಧಿಕಸ್ಯ ನೋ ಕಾರ್ಯಾ ಯೋಽನ್ಯತ್ರಾಭಿಹಿತಾ ಮಯಾ ॥ ೨೨ ॥

ನ ತತ್ರ ನಾಗಾಃ ಸುಭೃತಾ ನ ಯೋಧಾ
ರಾಜ್ಞೋಽನ ಮಾತಾ ನ ಪಿತಾ ನ ಬಂಧುಃ ।
ಯತ್ರಾಸ್ಯ ಸಾಧ್ಯಂ ಭವತೀಹ ವಿದ್ವಾನ್
ಸಾಂವತ್ಸರೋ ಧರ್ಮವಿದಃ ಪ್ರಮತ್ತಃ ॥ ೨೩ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರಕಥಾಸು
ಸಾಂವತ್ಸರಿಕ ಲಕ್ಷಣಂ ನಾಮ
ಚತುರ್ಥೋಽಧ್ಯಾಯಃ

---

ವರ್ಷದೊಳಗಾಗಿ ಹೊಸ ಮಹಾರಾಜನಿಗೆ ಪಟ್ಟಾಭಿಷೇಕವಾಗಿ ಬಿಡಬೇಕು. ನಿಜವಾದ ಹಕ್ಕುದಾರನಲ್ಲದವನು ಎಷ್ಟೇ ಗುಣಾಢ್ಯನಾಗಿರಲಿ ಅವನನ್ನು ಪಟ್ಟಕ್ಕೆ ತರಕೂಡದು.

೨೨-೨೩. ನಾನು ಮೇಲೆ ಹೇಳಿದ ಲಕ್ಷಣಗಳುಳ್ಳ ಜ್ಯೋತಿಷ್ಕನು ದೊರಕದಿದ್ದರೆ ಆ ರಾಜ್ಯದಲ್ಲಿ ಯಾವುದೂ ಸಾಧ್ಯವಾಗುವುದಿಲ್ಲ. ಅಲ್ಲಿ ಆನೆಗಳಿರುವುದಿಲ್ಲ. ಒಳ್ಳೇ ತಯಾರಾದ ಸೈನಿಕರಿರುವುದಿಲ್ಲ. ತಂದೆತಾಯಿಬಂಧುಬಳಗಳೊಬ್ಬರೂ ಇರುವುದಿಲ್ಲ. ಒಟ್ಟಿನಮೇಲೆ ಸರಿಯಾದ ಜೋಯಿಸನಿಲ್ಲದ ರಾಜ್ಯಕ್ಕೆ ಕ್ಷೇಮವುಂಟಾಗುವುದು ಬಲುಕಷ್ಟವೆಂದು ತಿಳಿದುಕೊಳ್ಳಯ್ಯಾ! ಪರಶುರಾಮ! ಹೀಗೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಮಹಾಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಪುಷ್ಕರನ ಕಥೆಗಳಲ್ಲಿ ಜೋಯಿಸನ ಲಕ್ಷಣ
ವೆಂಬ ಹೆಸರಿನ ನಾಲ್ಕನೆಯ ಅಧ್ಯಾಯ ಮುಗಿಯಿತು.

॥ ಶ್ರೀ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಪಂಚಮೋಽಧ್ಯಾಯಃ

### ರಾಮ ಉವಾಚ

ರಾಜ್ಞಾ ಪುರೋಹಿತಃ ಕಾರ್ಯಃ ತಥಾ ಮಂತ್ರೀ ಚ ಕೀದೃಶಃ ।
ಮಹಿಷೀ ಚ ತಥಾ ಜ್ಯೇಷ್ಠಾ ತನ್ಮಮಾಚಕ್ಷ್ವ ಪೃಚ್ಛತಃ ॥ ೧ ॥

### ಪುಷ್ಕರ ಉವಾಚ

ಅವ್ಯಂಗಂ ಲಕ್ಷಣೋಪೇತಂ ಅನುಕೂಲಂ ಪ್ರಿಯಂವದಂ ।
ಅಥರ್ವವೇದವಿದ್ವಾಂಸಂ ಯಜುರ್ವೇದವಿಶಾರದಂ ॥ ೨ ॥

---

### ಐದನೆಯ ಅಧ್ಯಾಯವು.

೧. ಪರಶುರಾಮನು ಪುಷ್ಕರನನ್ನು ಕುರಿತು ಪ್ರಶ್ನೆ ಮಾಡುತ್ತಾನೆ ;—ಎಲೈ ಪುಷ್ಕರನೇ! ಮಹಾರಾಜನಾದವನಿಂದ ಮಂತ್ರಿ ಪುರೋಹಿತರು ನಿಷ್ಕರ್ಷಿಸಲ್ಪಡಬೇಕೆಂದು ಹೇಳಿದೆಯಷ್ಟೆ ? ಅವರು ಎಂತಹ ಲಕ್ಷಣವುಳ್ಳವರಾಗಿರಬೇಕೆಂಬುದನ್ನೂ, ಮಹಾರಾಜನು ಮದುವೆಯಾಗಲರ್ಹಳಾದ ಮಹಾರಾಣಿಯ ಲಕ್ಷಣವೆಂತಿರಬೇಕೆಂಬುದನ್ನೂ ದಯವಿಟ್ಟು ತಿಳಿಸಬೇಕು

೨. ಪುಷ್ಕರನು ಅದಕ್ಕೆ ಉತ್ತರವನ್ನು ಹೇಳುತ್ತಾನೆ :—ದೃಢಾಂಗನಾದ, ಒಳ್ಳೇ ಸುಲಕ್ಷಣಸಹಿತನಾದ, ಸರ್ವದಾ ತನಗೆ ಅನುಕೂಲವಾಗಿ ವರ್ತಿಸುತ್ತಾ, ಪ್ರಿಯವಾದ ಮಾತುಗಳನ್ನಾಡುವ, ಅಥರ್ವಣ ಮತ್ತು ಯಜುರ್ವೇದಗಳನ್ನೋದಿಕೊಂಡಿರುವ ಪುರೋಹಿತನನ್ನು ಪೌರೋಹಿತ್ಯಕ್ಕೆ ನೇಮಿಸಿಕೊಳ್ಳಬೇಕು.

ದ್ವಿವೇದಂ ಬ್ರಾಹ್ಮಣಂ ರಾಜಾ ಪುರೋಹಿತಮಥರ್ವಣಂ ।
ಪಂಚಕಲ್ಪವಿಧಾನಜ್ಞಂ ವರಯೇತ ಸುದರ್ಶನಂ ॥ ೩ ॥

ನಕ್ಷತ್ರಕಲ್ಪೋ ವೈತಾನಃ ತೃತೀಯಃ ಸಂಹಿತಾವಿಧಿಃ ।
ಚತುರ್ಥೋಽಂಗಿರಸಾಂ ಕಲ್ಪಃ ಶಾಂತಿಕಲ್ಪಸ್ತು ಪಂಚಮಃ ॥ ೪ ॥

ಪಂಚಕಲ್ಪವಿಧಾನಜ್ಞಂ ಆಚಾರ್ಯಂ ಪ್ರಾಪ್ಯ ಭೂಪತಿಃ ।
ಸರ್ವೋತ್ಪಾತಪ್ರಶಾಂತಾತ್ಮಾ ಭುನಕ್ತಿ ವಸುಧಾಂ ಚಿರಂ ॥ ೫ ॥

ಸ ಚ ರಾಜ್ಞಸ್ತಥಾ ಕುರ್ಯಾನ್ನಿತ್ಯಂ ಕರ್ಮ ಸದೈವ ತು ।
ನೈಮಿತ್ತಿಕಂ ತಥಾ ಕಾಮ್ಯಂ ದೈವಜ್ಞವಚನೇ ರತಃ ॥ ೬ ॥

---

೩-೪. ನೋಡುವುದಕ್ಕೆ ಬಹಳ ಸುಂದರವಾದ ಮುಖವುಳ್ಳ, ಪಂಚಕಲ್ಪ ವಿಧಾನವನ್ನು ಚೆನ್ನಾಗಿಬಲ್ಲ ಆ ಪುರೋಹಿತನಿಗೆ ರಾಜನು ವರಣ ಕೊಡಬೇಕು. ಆ ಪಂಚಕಲ್ಪಗಳಾವುವೆಂಬುದನ್ನು ವಿವರಿಸುತ್ತೇನೆ, ಕೇಳು.—(1) ನಕ್ಷತ್ರಕಲ್ಪ (ಜ್ಯೋತಿಷ). (2) ವೈತಾನ (ಅಗ್ನಿಮುಖ). (3) ಸಂಹಿತಾವಿಧಿ (ಮಂತ್ರ). (4) ಆಂಗಿರಕಲ್ಪ (ತಂತ್ರ). (5) ಶಾಂತಿಕಲ್ಪ (ಶಾಂತಿಕ್ರಮಗಳು).

೫. ಈ ಪ್ರಕಾರವಾಗಿ ಪಂಚಕಲ್ಪವಿಧಾನವನ್ನು ತಿಳಿದ ಆಚಾರ್ಯನನ್ನು ಕರೆಯಿಸಿ ಮಹಾರಾಜನು ಅವನಿಗೆ ವರಣಕೊಟ್ಟು ತನ್ನ ಬಳಿಯಲ್ಲಿಟ್ಟುಕೊಳ್ಳಬೇಕು. ಈ ಲಕ್ಷಣವನ್ನುಳ್ಳ ಪುರೋಹಿತನು ಅರಮನೆಯಲ್ಲಿ ರಾಜಸಾನ್ನಿಧ್ಯದಲ್ಲಿದ್ದರೆ ಸಕಲ ಉತ್ಪಾತಗಳೂ ನಾಶವಾಗಿಹೋಗುತ್ತವೆ. ಮಹಾರಾಜನು ಸಕಲಪೀಡೆಗಳನ್ನೂ ಪರಿಹಾರಮಾಡಿಕೊಂಡು ಬಹುಕಾಲ ರಾಜ್ಯವನ್ನಾಳಿ ಸುಖವನ್ನನುಭವಿಸುವನು.

೬. ಇಂತಹ ಪುರೋಹಿತನು ಜೋಯಿಸರ ಮಾತಿಗೆ ಅನುಸಾರವಾಗಿ ಮಹಾರಾಜನು ಮಾಡಬೇಕಾದ ನಿತ್ಯಕರ್ಮ ನೈಮಿತ್ತಿಕಕರ್ಮಗಳನ್ನೂ, ಕಾಮ್ಯ ಕರ್ಮಗಳನ್ನೂ ಸಹ ಯಾವಾಗಲೂ ಸ್ವಲ್ಪವೂ ಬಿಡದೆ ಮಹಾರಾಜರ ಬಳಿಯಲ್ಲಿಯೇ ಇದ್ದುಕೊಂಡು ಮಾಡಿಸುತ್ತಿರಬೇಕು.

ನ ತ್ಯಾಜ್ಯಸ್ತು ಭವೇದ್ರಾಜಾ ದೈವಜ್ಞೇನ ಪುರೋಧಸಾ ।
ಪತಿತಸ್ತು ಭವೇತ್ತ್ಯಾಜ್ಯೋ ನಾತ್ರ ಕಾರ್ಯಾ ವಿಚಾರಣಾ ॥ ೭ ॥

ತಥೈವ ಪತಿತಾ ರಾಮ ನ ತ್ಯಾಜ್ಯೌ ತೌ ಮಹೀಭುಜಾ ।
ತಯೋಸ್ತ್ಯಾಗೇನ ರಾಜೇಂದ್ರ ರಾಜ್ಯಭ್ರಂಶೋ ವಿನಿರ್ದಿಶೇತ್ ॥ ೮ ॥

ದುರ್ಗತಿಃ ಪರಲೋಕೇ ಚ ಬಹುಕಾಲ ಮಸಂಶಯಂ ।
ಸಾಂವತ್ಸರವಿರುದ್ಧಸ್ತು ತ್ಯಾಜ್ಯೋ ರಾಜ್ಞಾ ಪುರೋಹಿತಃ ॥ ೯ ॥

ಪುರೋಹಿತೋಽನ್ಯಥಾ ರಾಜ್ಞೋ ಯಥಾ ಮಾತಾ ಯಥಾ ಪಿತಾ ।
ಅನಿಷ್ಟಮಸ್ಯ ವ್ಯಸನಂ ಹನ್ಯಾದ್ದೈವೋಪಘಾತಜಂ ॥ ೧೦ ॥

---

೭. ಜೋಯಿಸರನ್ನೂ, ಪುರೋಹಿತರನ್ನೂ ರಾಜನಾದವನು ಯಾವಾಗಲೂ ಬಿಟ್ಟಿರಬಾರದು. ಹಾಗೇನಾದರೂ ಅವರ ಮಾತಿನಂತೆ ನಡೆಯದೆ ಅವರನ್ನು ಬಿಟ್ಟು ಬಿಟ್ಟರೆ ಪತಿತನಾಗಿಹೋಗುತ್ತಾನೆ.

೮. ಇದೇಮೇರೆ ಮಹಾರಾಜನಾದರೂ ಕೂಡ ಪತಿತನಾದ ಪುರೋಹಿತನನ್ನೂ ತ್ಯಾಜ್ಯಮಾಡಿಬಿಡಬೇಕು. ಯೋಗ್ಯನೂ ಧರ್ಮಾತ್ಮನೂ ಆದ ಪುರೋಹಿತನನ್ನೂ, ಜೋಯಿಸನನ್ನೂ ತ್ಯಾಗಮಾಡಿದರೆ ರಾಜ್ಯಕ್ಕೆ ಹಾನಿಸಂಭವಿಸೀತು!

೯. ಮತ್ತು ಅಂತಹವರನ್ನು ತ್ಯಾಗಮಾಡಿದರೆ ಬಹುಕಾಲದವರೆಗೆ ಪರ ಲೋಕದಲ್ಲಿ ದುರ್ಗತಿಯನ್ನನುಭವಿಸಬೇಕಾಗುವುದು. ಜೋಯಿಸರ ಸಂಗಡ ವಿರೋಧಮಾಡಿಕೊಂಡು ಅವರ ಮಾತಿನಂತೆ ನಡೆಯದೆ-ಇದ್ದ ಪುರೋಹಿತನನ್ನು ಬಿಟ್ಟುಬಿಡಬೇಕು.

೧೦. ಪುರೋಹಿತನು ಮಹಾರಾಜನಿಗೆ ಒಂದು ರೀತಿಯಲ್ಲಿ ತಂದೆತಾಯಿ ಗಳಿದ್ದಂತೆಯೇ ಸರಿ. ಏಕೆಂದರೆ, ಮಹಾರಾಜನಿಗೆ ಸಂಭವಿಸಬಹುದಾದ ಅನಿಷ್ಟ (ಪೀಡೆ)ಗಳನ್ನೂ, ದುಃಖಗಳನ್ನೂ, ದೈವವಶದಿಂದೊದಗುವ ಉಪಘಾತೋತ್ಪನ್ನವಾದ ಸಕಲ ಭಯಗಳನ್ನೂ ನಾಶಪಡಿಸತಕ್ಕವನು ಪುರೋಹಿತನೇ ಸರಿ.

ಬ್ರಾಹ್ಮಣೋ ನಿಷ್ಕೃತಿಸ್ತಸ್ಯ ಕುತ್ರ ಶಕ್ಯಾ ಮಹೀಭುಜಾ ।
ಯಾವನ್ನ ರಾಜ್ಞಾ ವಿದ್ವಾಂಸೌ ಸಾಂವತ್ಸರ ಪುರೋಹಿತೌ ॥ ೧೧ ॥

ವೃತ್ತಿಚ್ಛೇದೇ ತಯೋಃ ರಾಜ್ಞಃ ಕುಲಂ ತ್ರಿಪುರುಷಂ ವ್ರಜೇತ್ ।
ನರಕಂ ವರ್ಜಯೇತ್ತಸ್ಮಾದ್ವೃತ್ತಿಚ್ಛೇದಂ ತಯೋಃ ಸದಾ ॥ ೧೨ ॥

ಸ್ಥಾವರೇಣ ವಿಭಾಗಶ್ಚ ತಯೋಃ ಕಾರ್ಯೋ ವಿಶೇಷತಃ ।
ಅನುರೂಪೇಣ ಧರ್ಮಜ್ಞ ಸಾಂವತ್ಸರಪುರೋಹಿತೌ ॥ ೧೩ ॥

ಭಾವ್ಯಂ ಸದಾ ಭಾರ್ಗವವಂಶಚಂದ್ರ
ಪುರೋಹಿತಸ್ಯಾತ್ಮಸಮಸ್ಯ ರಾಜ್ಞಾ ।

---

೧೧. ಜೋಯಿಸರನ್ನೂ ಪುರೋಹಿತರನ್ನೂ ಎಲ್ಲಿಯವರೆಗೆ ಗೌರವಿಸಿ ಮಹಾರಾಜನು ಇಟ್ಟುಕೊಂಡಿರುತ್ತಾನೋ, ಅಲ್ಲಿಯತನಕ ರಾಜನಿಗೆ ಯಾವ ಭಯವಾಗಲೀ, ಯಾವ ಪ್ರಾಯಶ್ಚಿತ್ತವಾಗಲೀ ಇಲ್ಲ. ಅಂತಹ ಧೊರೆಗೆ ಸಮಾನರಿಲ್ಲ.

೧೨. ಯಾವ ಮಹಾರಾಜನು ದೈವಜ್ಞ, ಪುರೋಹಿತರ ವೃತ್ತಿಗಳನ್ನು ತಪ್ಪಿಸಿಬಿಡುತ್ತಾನೋ, ಅಂತಹ ರಾಜನು ತ್ರಿಪೌರುಷ (ಮೂರುತಲೆ) ದವರೆವಿಗೆ ನರಕದಲ್ಲಿ ವಾಸಮಾಡಬೇಕಾಗುವುದರಿಂದ, ಜೋಯಿಸರ ಮತ್ತು ಪುರೋಹಿತರ ವೃತ್ತಿಯನ್ನು ಎಂದಿಗೂ ತಪ್ಪಿಸಬಾರದು.

೧೩. ಮಹಾರಾಜನು ನ್ಯಾಯವಾಗಿ ಜೋಯಿಸರಿಗೂ ಪುರೋಹಿತರಿಗೂ ಸ್ಥಾವರ (ಭೂ) ಸ್ವತ್ತನ್ನು ಅವರ ಯೋಗ್ಯತೆಗೆ ಅನುರೂಪವಾಗಿ ವಿಭಾಗ ಮಾಡಿ ಕೊಡಬೇಕು.

೧೪. ಮುಖ್ಯವಾಗಿ ಮಹಾರಾಜರು ತಮ್ಮ ಪುರೋಹಿತರನ್ನು ತಮ್ಮಂತೆಯೇ

ರಾಜ್ಞೋ ಯಥಾಪಿ ಸ್ವಜನೇನ ಭಾವ್ಯೋ
ವಿದ್ವಾನ್ಪ್ರಭುಃ ಸ್ಯಾನ್ನೃಪತೇಃ ಪುರೋಧಾಃ　　॥ ೧೪ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಪುರೋಹಿತಲಕ್ಷಣಂ ನಾಮ
ಪಂಚಮೋಽಧ್ಯಾಯಃ

---

ನೋಡಿಕೊಳ್ಳಬೇಕಲ್ಲದೆ, ಯಾವಾಗಲೂ ಇವನು ನನ್ನ ಸ್ವಕೀಯ (ಸ್ವಜನ) ನೆಂದೇ ಭಾವಿಸಿಕೊಂಡಿರಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಮಹಾಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಪುರೋಹಿತಲಕ್ಷಣವೆಂಬ ಹೆಸರಿನ
ಐದನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

## ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಷಷ್ಠೋಽಧ್ಯಾಯಃ

### ಪುಷ್ಕರ ಉವಾಚ

**ಸರ್ವಲಕ್ಷಣಲಕ್ಷಣ್ಯೋ ಮಂತ್ರೀ ರಾಜ್ಞಸ್ತಥೈವ ಚ ।**
**ಬ್ರಾಹ್ಮಣೋ ವೇದತತ್ತ್ವಜ್ಞೋ ವಿನೀತಃ ಪ್ರಿಯದರ್ಶನಃ ॥ ೧ ॥**

**ಸ್ಥೂಲಲಕ್ಷೋ ಮಹೋತ್ಸಾಹಃ ಸ್ವಾಮಿಭಕ್ತಃ ಪ್ರಿಯಂವದಃ ।**
**ಬೃಹಸ್ಪತ್ಯುಶನಃ ಪ್ರೋಕ್ತಾಂ ನೀತಿಂ ಜಾನಾತಿ ಸರ್ವತಃ ॥ ೨ ॥**

**ರಾಗದ್ವೇಷೇಣ ಯತ್ಕಾರ್ಯಂ ನ ವದಂತಿ ಮಹೀಕ್ಷಿತಃ ।**
**ಲೋಕಾಪವಾದಾದ್ರಾಜಾರ್ಥೇ ಭಯಂ ಯಸ್ಯ ನ ಜಾಯತೆ ॥ ೩ ॥**

---

### ಆರನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನಿಗೆ ಹೇಳುತ್ತಾನೆ:—ಮಹಾರಾಜನ ಬಳಿ ಇರಬೇಕಾದ ಮಂತ್ರಿಯ ಲಕ್ಷಣವನ್ನೀಗ ಹೇಳುತ್ತೇನೆ. ಕೇಳು. ಮಂತ್ರಿಪದವಿಗೆ ಬರತಕ್ಕವನು ಸರ್ವಲಕ್ಷಣಗಳಿಂದ ಕೂಡಿದವನಾಗಿರಬೇಕು. ಹಾಗೆ ಮಂತ್ರಿಯಾಗ ಬೇಕಾದವನು ಬ್ರಾಹ್ಮಣವಂಶದಲ್ಲಿ ಹುಟ್ಟಿದವನಾಗಿಯೂ, ವೇದ ತತ್ವಜ್ಞನಾಗಿಯೂ, ವಿನೀತನಾಗಿಯೂ, ನೋಡುವುದಕ್ಕೆ ಚೆನ್ನಾಗಿಯೂ ಇರಬೇಕು.

೨. ನೋಡಿದಮಾತ್ರದಿಂದಲೇ ಪರರ ಇಂಗಿತವನ್ನು ಕಂಡುಹಿಡಿಯುವವ ನಾಗಿರಬೇಕು. ಮಹಾಉತ್ಸಾಹಶಾಲಿಯಾಗಿಯೂ, ಸ್ವಾಮಿಭಕ್ತನಾಗಿಯೂ, ಪ್ರಿಯ ವಾದ ಮಾತುಗಳನ್ನಾಡುವವನಾಗಿಯೂ, ಗುರು ಶುಕ್ರ ಪ್ರೋಕ್ತವಾದ ನೀತಿಶಾಸ್ತ್ರ ವನ್ನು ಚೆನ್ನಾಗಿ ತಿಳಿದವನಾಗಿಯೂ ಇರಬೇಕು.

೩. ಮಂತ್ರಿಯೆನಿಸಿಕೊಳ್ಳುವವನು ಲೋಕಾಪವಾದಕ್ಕಾಗಿ ಹೆದರಿಕೊಂಡು ರಾಗದ್ವೇಷಯುಕ್ತನಾಗಿ ಮಹಾರಾಜನ ಮುಂದೆ ಮಾತನಾಡಬಾರದು. ಹಾಗೆ ಮಾಡುವುದು ಸರಿಯಾದ ಕೆಲಸವಲ್ಲ. ಮಂತ್ರಿಯಾದವನು ಯಾರಿಗೂ ಹೆದರಬಾರದು.

**ಕ್ಲೇಶಕ್ಷಮಸ್ತಥಾ ಯಶ್ಚ ವಿಜಿತಾತ್ಮಾ ಜಿತೇಂದ್ರಿಯಃ ।**
**ಗೂಢಮಂತ್ರಶ್ಚ ದಕ್ಷಶ್ಚ ಪ್ರಾಜ್ಞೋ ಭಕ್ತಜನಪ್ರಿಯಃ ॥ ४ ॥**

**ಇಂಗಿತಾಕಾರತತ್ತ್ವಜ್ಞ ಊಹಾಪೋಹವಿಶಾರದಃ ।**
**ಶೂರಶ್ಚ ಕೃತವಿದ್ಯಶ್ಚ ನ ಚ ಮಾನೀ ವಿಮತ್ಸರಃ ॥ ೫ ॥**

**ಚಾರಪ್ರಚಾರಕುಶಲಃ ಪ್ರಣಿಧಿಪ್ರಣಯಾತ್ಮವಾನ್ ।**
**ಷಾಡ್ಗುಣ್ಯವಿಧಿತತ್ತ್ವಜ್ಞ ಉಪಾಯಕುಶಲಸ್ತಥಾ ॥ ೬ ॥**

---

೪. ಮಂತ್ರಿಯು ಕ್ಲೇಶಗಳನ್ನು ಸಹಿಸತಕ್ಕವನಾಗಿರಬೇಕು. ಜಿತಾತ್ಮನಾಗಿಯೂ, ಜಿತೇಂದ್ರಿಯನಾಗಿಯೂ, ಗೂಢವಾದ ಮಂತ್ರಾಲೋಚನೆಯುಳ್ಳವನಾಗಿಯೂ, ಸಮರ್ಥನಾಗಿಯೂ, ಪ್ರಾಜ್ಞನಾಗಿಯೂ, ಭಕ್ತಜನಪ್ರಿಯನಾಗಿಯೂ ಇರಬೇಕು.

೫. ಮನುಷ್ಯನ ಮುಖವನ್ನು ನೋಡಿದೊಡನೆಯೇ ಅವನ ಆಕಾರ ಮಾತ್ರದಿಂದ ಅವನ ಇಂಗಿತವನ್ನರಿಯುವವನಾಗಿರಬೇಕು. ಊಹಾಪೋಹ ವಿಶಾರದನಾಗಿಯೂ ಇರಬೇಕು. (ಇಂತಹ ಸಂಸ್ಕೃತ ಪದಗಳಿಗೆ ಇದಕ್ಕಿಂತ ಸುಲಭವಾದ ಕನ್ನಡ ಶಬ್ದಗಳು ದೊರೆಯುವುದಿಲ್ಲವಾದ್ದರಿಂದಲೂ, ಈ ಸಂಸ್ಕೃತಪದಗಳು ಬಹಳವಾಗಿ ರೂಢಿಯಲ್ಲಿದ್ದು ವ್ಯವಹಾರದಲ್ಲಿರುವುದರಿಂದಲೂ, ಇಂತಹ ಸುಂದರವಾದ ಸುಲಲಿತವಾದ ಸುಲಭವಾದ ಪದಗಳನ್ನು ಏನೂ ವ್ಯತ್ಯಾಸಮಾಡದೆ, ಊಹಾಪೋಹ ವಿಚಾರವೇ ಮಾಡದೆ, ಇದ್ದದ್ದನ್ನು ಇದ್ದ ಹಾಗೆಯೇ ಈ ಗ್ರಂಥದಲ್ಲಿ ಪ್ರಯೋಗಿಸುತ್ತಾ ಬರುತ್ತೇನೆ.) ಎಲ್ಲಾ ವಿದ್ಯೆಗಳನ್ನೂ ಕಲಿತು ಶೂರನಾಗಿರಬೇಕು. ಅಹಂಕಾರ ಪಡಬಾರದು. ಒಬ್ಬರನ್ನೂ ಮತ್ಸರಿಸಬಾರದು.

೬. ತನ್ನ ಕಡೆಯ ಗೂಢಚಾರರಿಂದ ಪ್ರಪಂಚವೃತ್ತಾಂತವನ್ನೆಲ್ಲಾ ತಿಳಿಯುವ ಚತುರನಾಗಿರಬೇಕು. ಎಲ್ಲರಲ್ಲಿಯೂ ಪ್ರೀತಿಯುಳ್ಳವನಾಗಿರಬೇಕು. ಮುಂದೆ ವಿವರಿಸುವಂತೆ ಆರು ವಿಧವಾದ ಗುಣಗಳ ನಿಯಮವನ್ನೂ, ಅವುಗಳ ತತ್ವವನ್ನೂ ತಿಳಿದವನಾಗಿರಬೇಕು. ಉಪಾಯದಿಂದಲೂ ಕೌಶಲದಿಂದಲೂ ಕೆಲಸಮಾಡತಕ್ಕವನಾಗಿರಬೇಕು.

ವಕ್ತಾ ವಿಧಾತಾ ಕಾರ್ಯಾಣಾಂ ನೈವ ಕಾರ್ಯಾತಿಪಾತಿತಾ ।
ಸಮಶ್ಚ ರಾಜಭೃತ್ಯಾನಾಂ ತಥೈವ ಚ ಗುಣಪ್ರಿಯಃ ॥ ೭ ॥

ಕಾಲಜ್ಞಃ ಸಮಯಜ್ಞಶ್ಚ ಕೃತಜ್ಞಶ್ಚ ಜನಪ್ರಿಯಃ ।
ಕೃತಾನಾಮಕೃತಾನಾಂಚ ಕರ್ಮಣಾಂ ಚಾನ್ವವೇಕ್ಷಿತಾ ॥ ೮ ॥

ಯಥಾನುರೂಪಮರ್ಹಾಣಾಂ ಪುರುಷಾಣಾಂ ನಿಯೋಜಿತಾ ।
ರಾಜ್ಞಃ ಪರೋಕ್ಷೇ ಕಾರ್ಯಾಣಿ ಸಂಪರಾಯೇ ಭೃಗೂತ್ತಮ ॥ ೯ ॥

---

೭. ಇವೇ ಆ ಆರು ಗುಣಗಳು:—ವಕ್ತಾ, ವಿಧಾತಾ, ಸಮಭಾವ, ಗುಣ ಪ್ರಿಯತೆ, ಜನಪ್ರಿಯತೆ, ಕೃತಜ್ಞತೆ. ಇದರ ವಿವರಣೆಯನ್ನು ಹೇಳುತ್ತೇನೆ. ಜನರಿಗೆ ಹೇಳಬೇಕಾದ ಕೆಲಸಗಳನ್ನು ಹೇಳಬೇಕು. ಅವರಿಂದ ಅದನ್ನು ಮಾಡಿಸಬೇಕು. ಹೇಳಿದ ಕೆಲಸ ಹೆಚ್ಚು ಕಡಿಮೆಯಾಗದಂತೆ ನೋಡಿಕೊಳ್ಳುತ್ತಿರಬೇಕು. ಜನರ ವಿಷಯದಲ್ಲೂ ಭೃತ್ಯರ ವಿಷಯದಲ್ಲೂ ಸಮಭಾವದಿಂದಿರಬೇಕು. ಕೆಲಸಮಾಡಿದವನ ಗುಣಗಳನ್ನು ಗ್ರಹಿಸತಕ್ಕವನಾಗಿರಬೇಕು.

೮. ದೇಶಕಾಲ ಸಮಯಗಳನ್ನು ಅರಿತಿರಬೇಕು. ಕೃತಜ್ಞನಾಗಿಯೂ ಜನಪ್ರಿಯನಾಗಿಯೂ ಇರಬೇಕು. ಇದುವರಿಗೆ ನಾನು ಹೇಳಿದ ಕೆಲಸವನ್ನು ಇವನು ಎಷ್ಟರಮಟ್ಟಿಗೆ ಮಾಡಿದ್ದಾನೆ? ಇನ್ನು ಮುಂದಕ್ಕೆ ಮಾಡಬೇಕಾದ ಕೆಲಸ ಇನ್ನೆಷ್ಟು ಮಟ್ಟಿಗೆ ಉಳಿದುಕೊಂಡಿದೆಯೆಂಬುದನ್ನು ಪದೇ ಪದೇ ನೋಡುತ್ತಲೇ ಇರಬೇಕು.

೯. ಯಾವ ಯಾವ ಕೆಲಸಮಾಡಲು ಯಾರಾರಿಗೆ ಎಷ್ಟೆಷ್ಟು ಯೋಗ್ಯತೆ ಯಿದೆ? ಇವನನ್ನು ಯಾವ ಕೆಲಸಕ್ಕೆ ಸೇರಿಸಿದರೆ ಚೆನ್ನಾಗಿ ಕೆಲಸಮಾಡುತ್ತಾನೆ? ಎಂಬ ಸಂಗತಿಯನ್ನು ಚೆನ್ನಾಗಿ ಯೋಚಿಸಿ ನೌಕರಿಯನ್ನು ಕೊಡುವ ಶಕ್ತಿಯನ್ನು ಹೊಂದಿರಬೇಕು. ರಾಜನ ಪರೋಕ್ಷದಲ್ಲಿ (ಎದುರಾಗಿಲ್ಲದಿರುವಾಗ) ಹೇಗೆ ಕೆಲಸ ಮಾಡಬೇಕೆಂಬುದನ್ನರಿತಿರಬೇಕು.

ಕೃತ್ವಾ ನಿವೇದಿತಾರಾಜನ್ಕರ್ಮಣಾಂ ಗುರುಲಾಘವಂ ।
ಶತ್ರುಮಿತ್ರವಿಭಾಗಜ್ಞೋ ವಿಗ್ರಹಾಸ್ಪದತತ್ತ್ವವಿತ್ ॥ ೧೦ ॥

ಸ ರಾಜ್ಞಃ ಸರ್ವಕಾರ್ಯಾಣಿ ಕುರ್ಯಾತ್‌ಭೃಗುಕುಲೋದ್ವಹ ।
ವಿದಿತಾನಿ ಯಥಾ ಕುರ್ಯಾನ್ನಾಜ್ಞಾತಾನಿ ಮಹೀಕ್ಷಿತಾ ॥ ೧೧ ॥

ಅಜ್ಞಾತಾನಿ ನರೇಂದ್ರಸ್ಯ ಕೃತ್ವಾ ಕಾರ್ಯಾಣಿ ಭಾರ್ಗವ ।
ಅಚಿರೇಣಾಪಿ ವಿದ್ವೇಷಂ ಸ ಮಂತ್ರೀ ತ್ವಧಿಗಚ್ಛತಿ ॥ ೧೨ ॥

ಕರೋತಿ ಯಸ್ತು ಕಾರ್ಯಾಣಿ ವಿವಿಧಾನಿ ಮಹೀಪತೇ ।
ಭೇದೋ ನೋ ತಸ್ಯ ಭವತಿ ಕದಾಚಿದಪಿ ಭೂಭುಜಾ ॥ ೧೩ ॥

---

೧೦. ಮಾಡಬೇಕಾದ ಕೆಲಸಗಳ ಗೌರವಲಾಘವಗಳನ್ನು ತಿಳಿದು ಅದನ್ನು ಇತರರಿಂದ ಮಹಾರಾಜರೊಪ್ಪುವಂತೆ ಸರಿಯಾಗಿ ಮಾಡಿಸಿ, ಆ ಕೆಲಸ ನೆರವೇರಿದ ಸಂಗತಿಯನ್ನು ಮಹಾರಾಜರಿಗೆ ಆಗಿಂದಾಗ್ಗೆ ತಿಳಿಸುತ್ತಿರಬೇಕು. ಶತ್ರುಮಿತ್ರವಿಭಾಗವನ್ನು ಮನಸ್ಸಿನಲ್ಲಿ ಚೆನ್ನಾಗಿ ಗ್ರಹಿಸಿರಬೇಕು. ವಿಗ್ರಹ(ಜಗಳಕ್ಕೆ) ಆಸ್ಪದಕೊಡಬಹುದಾದ ತತ್ವವನ್ನು ಚೆನ್ನಾಗಿ ತಿಳಿದವನಾಗಿರಬೇಕು.

೧೧. ಎಲೈ ಪರಶುರಾಮನೇ! ಕೇಳು. ಮಂತ್ರಿಯಾದವನು ಮಹಾರಾಜರಿಂದ ಹೇಳಲ್ಪಟ್ಟ ಮಾತುಗಳನ್ನು ಸ್ವಲ್ಪವೂ ತಪ್ಪದೆನಡೆಯಿಸಬೇಕು. ರಾಜನು ಹೇಳದೆಇದ್ದ, ತನಗೆ ತಿಳಿಯದೆ ಇದ್ದ ಕೆಲಸಗಳ ತಂಟೆಗೆ ಹೋಗಕೂಡದು.

೧೨. ಹಾಗೇನಾದರೂ ಇದಕ್ಕೆ ವಿರೋಧವಾಗಿ, ಮಹಾರಾಜರು ಹೇಳದೆ ಇದ್ದ ಕೆಲಸಕ್ಕೆ ಕೈಹಾಕುವ ಮಂತ್ರಿಯು ಬಲುಬೇಗ ರಾಜಕೋಪಕ್ಕೆ ಪಾತ್ರನಾಗುವನಲ್ಲದೆ, ಅದಕ್ಕೆ ತಕ್ಕ ಫಲವನ್ನು ಹೊಂದಿಯೇ ಹೊಂದುತ್ತಾನೆ.

೧೩. ಯಾವಾಗ ಯಾವಾಗ ಮಹಾರಾಜರು ಯಾವ ಯಾವ ನಾನಾ ವಿಧವಾದ ಕೆಲಸಗಳನ್ನು ಹೇಳುತ್ತ ಬರುವರೋ, ಆಯಾ ಕೂಡಲೇ ಆಯಾಯ ಕೆಲಸಗಳನ್ನು ತಡಮಾಡದೆ ತಟ್ಟನೆ ನೆರವೇರಿಸುವ ಮಂತ್ರಿಗೂ, ಅಂತಹ ಸನ್ಮಂತ್ರಿಯನ್ನು ಪಡೆದಿರುವ ಮಹಾರಾಜನಿಗೂ ಏನೇನೂ ಭೇದವೇ ಇಲ್ಲವೆಂದು ತಿಳಿದುಕೊಳ್ಳಯ್ಯಾ! ಪರಶುರಾಮ!

ಏವಂಗುಣೋ ಯಸ್ಯ ಭವೇಚ್ಚ ಮಂತ್ರೀ
ವಾಕ್ಯೇ ಚ ತಸ್ಯಾಭಿ ರತಸ್ಯ ರಾಜ್ಞಃ ।
ರಾಜ್ಯಂ ಸ್ಥಿರಂ ಸ್ಯಾದ್ವಿಪುಲಾ ಚ ಲಕ್ಷ್ಮೀ
ವರ್ಣಶಶ್ಚ ದೀಪ್ತೋ ಭುವನತ್ರಯೇಽಪಿ ॥ ೧೪ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಮಂತ್ರಿಲಕ್ಷಣಂ ನಾಮ
ಷಷ್ಠೋಽಧ್ಯಾಯಃ

---

೧೪. ನಾನು ಇದುವರಿಗೆ ಯಾವ ಯಾವ ಗುಣಗಳನ್ನೂ ಲಕ್ಷಣಗಳನ್ನೂ ನಿನ್ನೊಡನೆ ವಿವರಿಸಿರುವೆನೋ, ಅಂತಹ ರಾಜನಿಗೆ ಅನುಗುಣವಾಗಿ ಕೆಲಸಮಾಡುವ ಮಂತ್ರಿಯನ್ನು ಹೊಂದಿರುವ ರಾಜ್ಯವೂ, ರಾಜನೂ ಸಹ ಬಹಳ ಬೇಗ ಅಭಿವೃದ್ಧಿಗೆ ಬಂದು ಅದು ಶಾಶ್ವತವಾಗಿ ನಿಲ್ಲುತ್ತದೆ. ಆ ರಾಜ್ಯದ ಯಶಸ್ಸು ವಿಸ್ತರಿಸುತ್ತದೆ. ಆ ರಾಜ್ಯದಲ್ಲಿ ಲಕ್ಷ್ಮಿಯು (ಐಶ್ವರ್ಯವು) ಸ್ಥಿರವಾಗಿ ನಿಲ್ಲುತ್ತದೆ. ಮೂರು ಲೋಕದಲ್ಲೂ ಆ ರಾಜ್ಯದ ಹೆಸರನ್ನು ಎಲ್ಲರೂ ಕೊಂಡಾಡುತ್ತಾರೆ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯ ಖಂಡದಲ್ಲಿ
ಮಾರ್ಕಂಡೇಯವಜ್ರ ಸಂವಾದರೂಪವಾದ ಮಂತ್ರಿಲಕ್ಷಣವೆಂಬ
ಹೆಸರಿನ ಆರನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಸಪ್ತಮೋಽಧ್ಯಾಯಃ

**ಪುಷ್ಕರ ಉವಾಚ**

**ರಾಜ್ಞಾಽಗ್ರ್ಯಮಹಿಷೀಕಾರ್ಯಾ ಸರ್ವಲಕ್ಷಣಪೂಜಿತಾ ।**
**ವಿನೀತಾ ಗುರುಭಕ್ತಾ ಚ ಈರ್ಷ್ಯಾಕ್ರೋಧವಿವರ್ಜಿತಾ ॥ ೧ ॥**

**ರಾಜ್ಞಃ ಪ್ರಿಯಹಿತಾಸಕ್ತಾ ಚಾರುವೇಷಾ ಪ್ರಿಯಂವದಾ ।**
**ಭೃತಾಭೃತಜನಜ್ಞಾ ಚ ಭೃತಾನಾಮನುವೇಕ್ಷಿಣೀ ॥ ೨ ॥**

---

## ಏಳನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನನ್ನು ಕುರಿತು ರಾಜಮಹಿಷಿ (ಮಹಾರಾಣಿ)ಯ ಲಕ್ಷಣಗಳನ್ನು ಮುಂದೆ ತಿಳಿಸುತ್ತಾನೆ:—ಎಲೈ ಪರಶುರಾಮನೇ ! ಕೇಳು. ರಾಜನ ಪಟ್ಟದರಾಣಿಯಾದವಳಿಗಿರಬೇಕಾದ ಲಕ್ಷಣವನ್ನೀಗ ವಿವರಿಸುತ್ತೇನೆ. ಮಹಾರಾಜನನ್ನು ಕೈಹಿಡಿಯುವ ಅಗ್ರಮಹಿಷಿಯ ಲಕ್ಷಣಗಳೇನೆಂದರೆ :—ಆಕೆಯು ಸರ್ವಲಕ್ಷಣಗಳಿಂದ ಪೂಜಿತಳಾಗಿರಬೇಕು. ಬಹಳ ವಿನಯಶಾಲಿನಿಯಾಗಿಯೂ, ಗುರುಭಕ್ತಳಾಗಿಯೂ, ಪರಿಚಾರಿಣಿಯರಿಂದ ಕೆಲಸಮಾಡಿಸುವವಳಾಗಿಯೂ, ಹೊಟ್ಟೆಕಿಚ್ಚು, ಕೋಪ ಮುಂತಾದ ದುರ್ಗುಣಗಳನ್ನು ಬಿಟ್ಟವಳಾಗಿಯೂ ಇರಬೇಕು.

೨. ಮಹಾರಾಜನಿಗೆ ಪ್ರಿಯಳಾಗಿಯೂ, ಹಿತಕರಳಾಗಿಯೂ, ಸುಂದರಾಲಂಕಾರಗಳಿಂದ ಭೂಷಿತಳಾಗಿಯೂ, ಒಳ್ಳೇ ಪ್ರಿಯವಾದ ಮಾತುಗಳನ್ನೇ ಆಡುವವಳಾಗಿಯೂ ಅವ್ವೇರು ಮತ್ತು ಆಳುಗಳ ಸ್ವಭಾವವನ್ನು ಚೆನ್ನಾಗಿ ತಿಳಿದವಳಾಗಿಯೂ, ಆಳುಗಳು ಮಾಡುವ ಕೆಲಸವನ್ನು ಸೂಕ್ಷ್ಮದೃಷ್ಟಿಯಿಂದ ಪರಿಶೀಲಿಸುತ್ತಲೂ ಇರಬೇಕು.

ಅಭೃತಾನಾಂ ಜನಾನಾಂ ಚ ಭೃತಿಕರ್ಮಪ್ರವರ್ತಿನೀ ।
ರಾಗದ್ವೇಷವಿಯುಕ್ತಾ ಚ ಸಪತ್ನೀನಾಂ ಸದೈವ ಯಾ ॥ ೩ ॥

ಭೋಜನಾಸನಪಾನೇನ ಸರ್ವೇಷಾಮನುವೇಕ್ಷಿಣೀ ।
ಸಪತ್ನಿಪುತ್ರೇಷ್ವಪಿ ಯಾ ಪುತ್ರವತ್ಪರಿವರ್ತತೆ ॥ ೪ ॥

ಮಂತ್ರಿ ಸಂವತ್ಸರಾಮಾತ್ಯಾ ಯಾ ಚ ಪೂಜಯತೇ ಸದಾ ।
ಬ್ರಹ್ಮಣ್ಯಾ ಚ ದಯಾಯುಕ್ತಾ ಸರ್ವಭೂತಾನುಕಂಪಿನೀ ॥ ೫ ॥

ಕೃತಾಕೃತಜ್ಞಾ ರಾಜ್ಞಶ್ಚ ವಿದಿತಾ ಮಂಡಲೇಷ್ವಪಿ ।
ಪರರಾಜಕಲತ್ರೇಷು ಪ್ರಿಯಮಾಣಾ ಮುದಾ ಯುತಾ ॥ ೬ ॥

---

೩. ದಿಕ್ಕಿಲ್ಲದ ಜನರಿಗೆ ಸಂಬಳಕೊಟ್ಟು ಕಾಪಾಡಬೇಕು. ರಾಗದ್ವೇಷಗಳನ್ನು ಸಂಪೂರ್ಣವಾಗಿ ಬಿಡಬೇಕು. ಸಪತ್ನಿ (ಸವತಿ)ಯರ ವಿಷಯದಲ್ಲಂತೂ ಬಹು ಶಾಂತಾತ್ಮಳಾಗಿರಬೇಕು.

೪. ಊಟ, ಉಡಿಗೆ, ಪಾನ, ಆಸನಗಳ ವಿಷಯದಲ್ಲಿ ಸರ್ವಸಮನಾಗಿ ವರ್ತಿಸಬೇಕು. ಸವತಿಯರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳನ್ನು ತನ್ನ ಹೊಟ್ಟೆಯಲ್ಲಿ ಹುಟ್ಟಿದವರಂತೆಯೇ ನೋಡಿಕೊಳ್ಳಬೇಕು.

೫. ಮಂತ್ರಿಗಳನ್ನೂ, ಜೋಯಿಸರನ್ನೂ, ಅಮಾತ್ಯರನ್ನೂ ಯಾವ ಮಹಾರಾಣಿಯು ಸರ್ವದಾ ಪೂಜಿಸುತ್ತಿರುವಳೋ, ಸಕಲ ಭೂತಗಳನ್ನೂ ದಯಾದೃಷ್ಟಿಯಿಂದ ನೋಡುತ್ತಾ, ಯಾವ ಮಹಾರಾಣಿಯು ಅವುಗಳನ್ನು ಉಪಚರಿಸುವಳೋ, ಅವಳೇ ಸರಿಯಾದ ಮಹಾರಾಣಿಪದವಿಗರ್ಹಳಾದವಳು.

೬. ಯಾವುದನ್ನು ಮಾಡಬೇಕೋ, ಯಾವುದನ್ನು ಬಿಡಬೇಕೋ ಅಂತಹ ಕೆಲಸಗಳನ್ನೆಲ್ಲಾ ತಿಳಿದುಕೊಂಡು ಮಂಡಲಾಧಿಪತಿಗಳ ಪತ್ನಿಯರ ಮತ್ತು ಶತ್ರುರಾಜರ ಪತ್ನಿಯರ ವಿಷಯಗಳಲ್ಲಿ ಸಂತೋಷದಿಂದಲೂ ಪ್ರೀತಿಯಿಂದಲೂ ಕೂಡಿದ ಬುದ್ಧಿಯುಳ್ಳವಳಾಗಿರಬೇಕು.

**ದೂತಾದಿ ಪ್ರೇಷಣಕರೀ ರಾಜದ್ವಾರೇಷು ಸರ್ವದಾ ।**
**ತದ್ದ್ವಾರೇಣ ನರೇಂದ್ರಾಣಾಂ ಕಾರ್ಯಜ್ಞಾ ಚ ವಿಶೇಷತಃ ॥ ೭ ॥**

**ಏವಂ ಗುಣಗಣೋಪೇತಾ ನರೇಂದ್ರೇಣ ಸಹಾನಘಾ ।**
**ಅಭಿಷೇಚ್ಯಾ ಭವೇದ್ರಾಜ್ಯೇ ರಾಜ್ಯಸ್ಥೇನ ನೃಪೇಣ ವಾ ॥ ೮ ॥**

**ಏವಂ ಯದಾ ಯಸ್ಯ ಭವೇಚ್ಚ ಪತ್ನೀ ನರೇಂದ್ರಚಂದ್ರಸ್ಯ ಮಹಾನುಭಾವಾ ।**
**ವೃದ್ಧಿಂ ವ್ರಜೇತ್ತಸ್ಯ ನೃಪಸ್ಯ ರಾಷ್ಟ್ರಂ ಸಚಾರಕಂ ನಾತ್ರ ವಿಚಾರಣಾಽಸ್ತಿ ॥ ೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಅಗ್ರ್ಯಮಹಿಷೀಲಕ್ಷಣಂ ನಾಮ ಸಪ್ತಮೋಽಧ್ಯಾಯಃ**

---

೭. ತನ್ನ ಅಂತಃಪುರದ ಬಾಗಿಲಿನಲ್ಲಿ ಸದಾ ಕಾದಿರುವ ದೂತಿ (ಅವ್ವೆ)ಯರ ಮುಖದಿಂದ ಮಹಾರಾಜರಿಗಾಗಬೇಕಾದ ಸಕಲಕಾರ್ಯಗಳನ್ನೂ ತಿಳಿದು ಆಗಿಂದಾಗ್ಗೆ ಆಯಾಯ ಕಾರ್ಯಗಳನ್ನೂ, ವಿಶೇಷತರಹೆಯ ಕಾರ್ಯಗಳನ್ನೂ ನಡೆಸತಕ್ಕ ಶಕ್ತಳಾಗಿರಬೇಕು.

೮. ಇತ್ಯಾದಿ ಗುಣಗಳಿಂದ ಕೂಡಿದ ರಾಜಮಹಿಷಿಯು ಪಟ್ಟಾಭಿಷೇಕ ಕಾಲದಲ್ಲಿ ತಾನೂ ಸಹ ಗಂಡನೊಡನೆ ಸಿಂಹಾಸನದ (ಹಸೆಯಮಣೆಯ) ಮೇಲೆ ಕುಳಿತು ಪಟ್ಟಾಭಿಷೇಕವನ್ನು ಮಾಡಿಸಿಕೊಳ್ಳಬೇಕು.

೯. ಇದುವರಿವಿಗೆ ನಾನು ಹೇಳಿದ ಲಕ್ಷಣಗಳಿಂದ ಕೂಡಿದ ಮಹಾರಾಣಿಯು ಯಾವ ಮಹಾರಾಜನನ್ನು ಕೈಹಿಡಿಯುವಳೋ, ಆ ಮಹಾನುಭಾವಳಾದ ಮಹಾ ರಾಣಿಯಿಂದ ಆ ಮಹಾರಾಜನ ರಾಜ್ಯವು ಸಚತುರಂಗಬಲ ಸಹಿತವಾಗಿಯೂ ಸಪರಿವಾರವಾಗಿಯೂ ದಿನೇದಿನೇ ಅಭಿವೃದ್ಧಿಯನ್ನೈದುವದೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ರಾಜಾಗ್ರ್ಯಮಹಿಷೀ ಲಕ್ಷಣವೆಂಬ ಹೆಸರಿನ ಏಳನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಅಷ್ಟಮೋಽಧ್ಯಾಯಃ

**ರಾಮ ಉವಾಚ**

ಪುರುಷಾಣಾಂ ತಥಾ ಸ್ತ್ರೀಣಾಂ ಗಜಾನಾಂ ತುರಗೈಸ್ಸಹ ।
ವಾಲವ್ಯಜನಛತ್ರಾಣಾಂ ತಥಾ ಭದ್ರಾಸನಸ್ಯ ಚ ॥ ೧ ॥

ರತ್ನಾನಾಂ ಧನುಷಾಂ ಚೈವ ಖಡ್ಗಸ್ಯ ಚ ಸುರಾತ್ಮಜ ।
ಲಕ್ಷಣಂ ಶ್ರೋತುಮಿಚ್ಛಾಮಿ ತನ್ಮಮಾಚಕ್ಷ್ವ ಪೃಚ್ಛತಃ ॥ ೨ ॥

**ಪುಷ್ಕರ ಉವಾಚ**

ಆದಾವೇವ ಪ್ರವಕ್ಷ್ಯಾಮಿ ಪುರುಷಾಣಾಂ ತು ಲಕ್ಷಣಂ ।
ನಿಬೋಧ ತನ್ಮೇ ಗದತೋ ಭೃಗುವಂಶವಿವರ್ಧನ ॥ ೩ ॥

---

## ಎಂಟನೆಯ ಅಧ್ಯಾಯವು.

೧-೨. ಪರಶುರಾಮನು ಪುಷ್ಕರನನ್ನು ಪ್ರಶ್ನೆಮಾಡುತ್ತಾನೆ.—ಅಯ್ಯಾ! ಪುಷ್ಕರ! ರಾಜಾಸ್ಥಾನದಲ್ಲಿರಬೇಕಾದ ಒಳ್ಳೇ ಪುರುಷರ ಮತ್ತು ಸ್ತ್ರೀಯರ, ಗಜ ತುರಗಾದಿಗಳ, ಛತ್ರಚಾಮರವ್ಯಜನಾದಿಗಳ ಮತ್ತು ರಾಜಾರ್ಹವಾದ ಸಿಂಹಾಸನದ ಮತ್ತು ರತ್ನಸಮೂಹಗಳ, ಧನಸ್ಸುಗಳ, ಖಡ್ಗಾಯುಧಗಳ ಲಕ್ಷಣವನ್ನು ಕೇಳ ಬೇಕೆಂದು ಮನಸ್ಸಾಗಿದೆ. ಅವುಗಳ ಲಕ್ಷಣಗಳನ್ನೆಲ್ಲಾ ದಯಮಾಡಿ ನನಗೆ ತಿಳಿಸುವೆಯಾ ?

೩. ಪುಷ್ಕರನು ಅದಕ್ಕೆ ಉತ್ತರವನ್ನು ಹೇಳುತ್ತಾನೆ:—ಎಲೈ ಭೃಗುವಂಶ ವನ್ನುದ್ಧರಿಸಿದ ಭಾರ್ಗವರಾಮನೇ! ಕೇಳು. ಮೊದಲು ನಿನಗೆ ಉತ್ತಮಪುರುಷನಿ ಗಿರಬೇಕಾದ ಲಕ್ಷಣಗಳನ್ನು ವಿವರಿಸುತ್ತೇನೆ.

ಏಕಾಧಿಕೋ ದ್ವಿಶುಕ್ಲಶ್ಚ ತ್ರಿಭಿರ್ವ್ಯಾಪ್ನೋತಿ ಯಸ್ತಥಾ ।
ತ್ರಿವಲೀವಾಂ ಸ್ತ್ರಿವಿನತಃ ತ್ರಿಕಾಲಜ್ಞಶ್ಚ ಭಾರ್ಗವ ॥ ೪ ॥

ಪುರುಷಃ ಸ್ಯಾತ್ತ್ಸಲಕ್ಷಣ್ಯೋ ವಿಪುಲಶ್ಚ ತಥಾ ತ್ರಿಷು ।
ಚತುರ್ಲೇಖಸ್ತಥಾ ಯಶ್ಚ ತಥೈವ ಚ ಚತುಃಸಮಃ ॥ ೫ ॥

ಚತುಷ್ಕಿಸ್ಕುಶ್ಚತುರ್ದಂಷ್ಟ್ರಶ್ಚತುಷ್ಕೃಷ್ಣಸ್ತಥೈವ ಚ ।
ಚತುರ್ಗಂಧಶ್ಚತುರ್ಹ್ರಸ್ವಃ ಪಂಚ ಸೂಕ್ಷ್ಮಸ್ತಥೈವ ಚ ॥ ೬ ॥

ಪಂಚದೀರ್ಘೋ ಭೃಗುಶ್ರೇಷ್ಠ ತಥೈವ ಚ ಷಡುನ್ನತಃ ।
ಸಪ್ತಸ್ನೇಹೋಽಷ್ಟವಂಶಶ್ಚ ನವಸ್ಥಾನಾಮಲಸ್ತಥಾ ॥ ೭ ॥

ದಶಪದ್ಮೋ ದಶಬೃಹನ್ನ್ಯಗ್ರೋಧಪರಿಮಂಡಲಃ ।
ಚತುರ್ದಶಸಮುದ್ವಂದ್ವಃ ಷೋಡಶಾಖ್ಯಶ್ಚ ಶಸ್ಯತೆ ॥ ೮ ॥

ರಾಮ ಉವಾಚ

ಏಕಾಧಿಕಾದ್ಯಾ ಯೇ ಪ್ರೋಕ್ತಾಃ ಪುರುಷಸ್ಯ ತ್ರಯಾ ಗುಣಾಃ ।
ತಾನಹಂ ಶ್ರೋತುಮಿಚ್ಛಾಮಿ ಯಥಾವದ್ವರುಣಾತ್ಮಜ ॥ ೯ ॥

---

೪-೮. ಉತ್ತಮಪುರುಷಲಕ್ಷಣಗಳಿವು :—(ಈ ಆರು ಶ್ಲೋಕಗಳೂ ಒಂದು ಒಗಟೆಯಂತಿವೆ.)—ಒಂದರಲ್ಲಿ ಹೆಚ್ಚಾಗಿರುವವನು, ಎರಡರಲ್ಲಿ ಬೆಳ್ಳಗಿರುವವನು, ಮೂರರಿಂದ ವ್ಯಾಪ್ತನಾದವನು, ತ್ರಿವಳಿಯಿಂದಿರುವವನು, ಮೂರರಿಂದ ಬಗ್ಗಿರುವವನು, ತ್ರಿಕಾಲಜ್ಞನಾದವನು, ಈ ತ್ರಿವಿಧಲಕ್ಷಣಗಳುಳ್ಳ ಪುರುಷನು ಈ ಮೂರು ಮೂರು ಸಂಜ್ಞೆಗಳಲ್ಲಿಯೂ ವಿಪುಲನಾಗಿರುವನು ; ನಾಲ್ಕು ಗೆರೆಯುಳ್ಳವನಾವನೋ, ನಾಲ್ಕರಲ್ಲಿ ಸಮನಾದವನಾವನೋ ; ನಾಲ್ಕಡಿ, ನಾಲ್ಕು ಕಪ್ಪು, ನಾಲ್ಕು ಹಲ್ಲು, ನಾಲ್ಕು ಗಂಧ, ನಾಲ್ಕು ಕುಳ್ಳು, ಐದು ಸೂಕ್ಷ್ಮ, ಐದು ದೀರ್ಘ, ಆರು ಎತ್ತರ, ಏಳು ಸ್ನೇಹ ಎಂಟು ವಂಶ, ಒಂಭತ್ತು ಜಾಗದಿಂದ ಶುದ್ಧ, ಪತ್ತು ಕಮಲ, ಹತ್ತಾಲದಮರದಂತೆ ಮಂಡಲವುಳ್ಳವ, ಹದಿನಾಲ್ಕು ಸಮುದ್ವಂದ್ವನಾದವ, ಹದಿನಾರರಿಂದ ಪ್ರಕಾಶಿಸುವವನಾವನೋ ಅವನೇ ಉತ್ತಮಪುರುಷನೆಂದು ಭಾವಿಸಯ್ಯಾ ! ಪರಶುರಾಮ !!

೯. ಒಗಟಿನಂತೆ ಹೇಳಿಬಿಟ್ಟ ಪುಷ್ಕರನ ಈ ಮಾತನ್ನು ಕೇಳಿದೊಡನೆ ಪರಶುರಾಮನು ಥಟ್ಟನೆ ಮಧ್ಯೆ ಬಾಯಿಹಾಕಿ ಪ್ರಶ್ನೆಮಾಡಿದುದೇನೆಂದರೆ ;—ಅಯ್ಯಾ !

## ಪುಷ್ಕರ ಉವಾಚ

**ಧರ್ಮೇ ಚಾರ್ಥೇ ಚ ಕಾಮೇ ಚ ಜನಃ ಸರ್ವೋಽಭಿಷಜ್ಯತೆ ।**
**ಏಕಾಧಿಕಸ್ತು ವಿಜ್ಞೇಯೋ ಯಸ್ತು ಧರ್ಮೇ ವಿಶೇಷತಃ ॥ ೧೦ ॥**

**ತಾರಕಾಭ್ಯಾಂ ವಿನಾನೇತ್ರೇ ಶುಕ್ಲಾಶ್ಚ ದಶನಾಸ್ತಥಾ ।**
**ದ್ವಾತ್ರಿಂಶದ್ರಾವು ಯಸ್ಯ ಸ್ಯುರ್ದ್ವಿಶುಕ್ಲಃ ಸ ತು ಕೀರ್ತಿತಃ ॥ ೧೧ ॥**

---

ಪುಷ್ಕರಮಹಾರಾಜ !! ನೀನು ಈಗ ಏಕಾಧಿಕನೆಂದು ಆರಂಭಮಾಡಿ ಹದಿನಾರರ ವರಿವಿಗೆ ಇರುವ ಲಕ್ಷಣವುಳ್ಳವನು ಉತ್ತಮಪುರುಷನೆಂದು ಬಹು ಸೂಕ್ಷ್ಮವಾಗಿ ವಿವರಿಸಿಬಿಟ್ಟೆಯಲ್ಲಾ ? ಅದು ನನಗೆ ಚೆನ್ನಾಗಿ ಅರ್ಥವಾಗಲಿಲ್ಲ ; ಕಂಡೆಯಾ ? ಆ ಏಕಾಧಿಕದಿಂದಾರಂಭಿಸಿ ಷೋಡಶಾವಧಿಯಾಗಿ ಹೇಳಿದ ಆ ಒಗಟನ್ನು ನನಗೆ ಚೆನ್ನಾಗಿ ಬಿಡಿಸಿ ಹೇಳು. ತಿಳಿದುಕೊಳ್ಳಬೇಕೆಂದು ನನಗೆ ಬಹು ಆಶೆಯಾಗಿದೆ.

೧೦. ಈ ಮಾತಿಗೆ ಪುಷ್ಕರನು ಉತ್ತರ ಹೇಳುತ್ತಾನೆ.—ಅಯ್ಯಾ ! ಪರಶುರಾಮ ! ನೀನು ಈಗ ಬಹು ಚೆನ್ನಾಗಿ ಪ್ರಶ್ನೆಮಾಡಿರುತ್ತೀಯೆ ! ಶ್ರದ್ಧಾಳುವಾದ ನೀನಲ್ಲದೆ ಇನ್ನಾರಿಗೆ ತಾನೇ ಈ ವಿಷಯವನ್ನು ಹೇಳಬೇಕಯ್ಯಾ ! ಇದರ ವಿವರವನ್ನೀಗ ಹೇಳುತ್ತೇನೆ, ಕೇಳು. ಧರ್ಮಾರ್ಥಕಾಮಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಹೊಂದಲು ಎಲ್ಲರೂ ಅಪೇಕ್ಷಿಸುತ್ತಾರಷ್ಟೆ ! ಆ ನಾಲ್ಕರಲ್ಲಿ ಮೊದಲನೆಯುದಾವುದು ? ಬಲ್ಲೆಯಷ್ಟೆ ? ಅದೇ ಧರ್ಮ. ಆ ಧರ್ಮವೊಂದರಲ್ಲಿ ಹೆಚ್ಚು ಆಸಕ್ತನಾಗಿರುವವನನ್ನು ಏಕಾಧಿಕನೆಂದು ತಿಳಿದುಕೋ. ಈರೀತಿ ವಿಶೇಷವಾಗಿ ಧರ್ಮವೊಂದರಲ್ಲೇ ಅದಾವನು ಆಸಕ್ತಿಹೊಂದಿರುವನೋ ಅವನು ಧರ್ಮಾತ್ಮನೆನಿಸಿಕೊಳ್ಳಲರ್ಹನು.

೧೧. ಎರಡು ಕಣ್ಣುಗಳಿಗೂ ಎರಡು ಶುದ್ಧವಾದ ರೆಪ್ಪೆಗಳಿರುವಂತೆ, ಬಾಯಿಯೊಳಗೆ ಎರಡು ಸಾಲಾದ ಶುಭ್ರ (ಬೆಳ್ಳ) ವಾಗಿರುವ ಮೂವತ್ತೆರಡು ಹಲ್ಲುಗಳಿರಬೇಕು. ಆ ಎರಡು ಸಾಲಿನ ಹಲ್ಲುಗಳನ್ನೇ ದ್ವಿಶುಕ್ಲವೆಂಬ ಪದಕ್ಕೆ ಅರ್ಥವೆಂದು ತಿಳಿದುಕೊ.

**ಉರೋ ನಾಭಿಸ್ತಥಾ ಸಕ್ಥಿರ್ಗಂಭೀರಾ ಯಸ್ಯ ದೇಹಿನಃ ।**
**ಪ್ರೋಚ್ಯತೇ ಸ ತು ಧರ್ಮಜ್ಞ ತ್ರಿಗಂಭೀರೋ ನರೋತ್ತಮಃ ॥ ೧೨ ॥**

**ಅನಸೂಯಾ ದಯಾ ಕ್ಷಾನ್ತಿಸ್ತ್ರಿಕಮೇಕಂ ಪ್ರಕೀರ್ತಿತಂ**

**ಮಂಗಲಾಚಾರಸಂಸ್ಪರ್ಶಃ ಶೌಚಂ ಚೇತ್ಯಪರಂ ತ್ರಯಂ ।**
**ಅನಾಯಾಸಮಕಾರ್ಪಣ್ಯಮೈಶ್ವರ್ಯಂ ಚ ತ್ರಯಸ್ತ್ರಿಕಾಃ ॥ ೧೩ ॥**

**ತ್ರಿಪ್ರಲಂಬೋ ಭುಜಾಭ್ಯಾಂ ತು ವೃಷಣೇನ ಚ ಕೀರ್ತ್ಯತೇ ।**
**ದಿಗ್ದೇಶಜಾತಿಸರ್ಗೈಶ್ಚ ತೇಜಸಾ ಯಶಸಾ ಶ್ರಿಯಾ ॥ ೧೪ ॥**

**ವ್ಯಾಪ್ನೋತಿ ಯೋ ಭೃಗುಶ್ರೇಷ್ಠ ತ್ರಿಭಿರ್ವ್ಯಾಪ್ನೋತ್ಯಸೌ ಸ್ಮೃತಃ ।**
**ಉದರೇ ವಲಯಸ್ತ್ರಿಸ್ರೋ ಗಂಭೀರಾ ಯಸ್ಯ ದೇಹಿನಃ ॥ ೧೫ ॥**

---

೧೨. ಎದೆ, ಹೊಕ್ಕಳು, ತೊಡೆ, ಈ ಮೂರೂ ಯಾವ ಪುರುಷನ ದೇಹದಲ್ಲಿ ವಿಸ್ತಾರವಾಗಿಯೂ ಗಂಭೀರವಾಗಿಯೂ ಇರುವುವೋ ಅಂಥಾ ಪುರುಷಶ್ರೇಷ್ಠನನ್ನು ತ್ರಿಗಂಭೀರನೆಂದು ತಿಳಿದುಕೊಳ್ಳಬೇಕು.

೧೩. ಹೊಟ್ಟೇಕಿಚ್ಚಿಲ್ಲದಿರುವುದು, ದಯೆ, ಕ್ಷಾಂತಿ, ಈ ಮೂರೂ ಸೇರಿದರೆ ತ್ರಿಕವೆನಿಸಿಕೊಳ್ಳುವುದು. ಮಂಗಳಕರವಾದ ಮಾತನಾಡೋಣ, ಸದಾಚಾರದಿಂದೊಡಗೂಡಿರುವುದು, ಶೌಚ, ಈ ಮೂರೂ ಸೇರಿ ಮತ್ತೊಂದು ತ್ರಿಕ. ಅನಾಯಾಸ, ಅಕಾರ್ಪಣ್ಯ, ಐಶ್ವರ್ಯಗಳೆಂಬ ಮೂರೂ ಮೂರನೆಯ ತ್ರಿಕವು. ಈ ಮೂರಕ್ಕೂ ತ್ರಿಕತ್ರಯವೆಂದು ಹೆಸರು.

೧೪. ಎರಡು ಭುಜಗಳೂ ಭುಜಸಹಿತ ಸೇರಿದರೆ ತ್ರಿಪ್ರಲಂಬವೆಂದು ಹೆಸರು. ದಿಕ್ಕು, ದೇಶ, ಜಾತಿ, ಸರ್ಗಗಳಿಂದಲೂ, ತೇಜಸ್ಸು, ಯಶಸ್ಸು, ಸಂಪತ್ತುಗಳೆಂಬ ಮೂರರಿಂದಲೂ ಕೂಡಿದವನಾವನೋ, ತ್ರಿಪ್ರಲಂಬದಿಂದಲೂ ಸೇರಿದವನಾವನೋ ಅವನೇ ಉತ್ತಮ ಪುರುಷನು.

೧೫. ಹೊಟ್ಟೆಯ ಮೇಲೆ ಇರುವ ಮೂರು ಗೆರೆಗಳಿಗೆ ತ್ರಿವಳಿಗಳೆಂದು ಹೆಸರು ಇವು ಯಾರ ಹೊಟ್ಟೆಯ ಮೇಲೆ ಆಳವಾಗಿರುವುವೋ ತ್ರಿವಳಿವಂತನೆಂಬ ಹೆಸರು ಆ ಪುರುಷಶ್ರೇಷ್ಠನಿಗೆ ಸಲ್ಲುವುದು.

ಸ ಉಚ್ಯತೇ ಭೃಗುಶ್ರೇಷ್ಠ ತ್ರಿವಲೀವಾನ್ನರೋತ್ತಮಃ ।
ದೇವತಾನಾಂ ದ್ವಿಜಾನಾಂ ಚ ಗುರೂಣಾಂ ಚ ತಥಾ ನತಃ ॥ ೧೬ ॥

ಪುರುಷೋ ಭಾರ್ಗವಶ್ರೇಷ್ಠ ಪ್ರೋಕ್ತಸ್ತ್ರಿವಿನತಃ ಸದಾ ।
ಧರ್ಮಸ್ಯಾರ್ಥಸ್ಯ ಕಾಮಸ್ಯ ಸಂಪತ್ಕಾಲವಿಭಾಗವಿತ್ ॥ ೧೭ ॥

ಸೇವತೇ ಯಶ್ಚ ಧರ್ಮಜ್ಞಃ ಪ್ರೋಚ್ಯತೇ ಸ ತ್ರಿಕಾಲವಿತ್ ।
ಉರೋ ಲಲಾಟಂ ವಕ್ತ್ರಂ ಚ ವಿಸ್ತೀರ್ಣಂ ಯಸ್ಯ ದೇಹಿನಃ ॥ ೧೮ ॥

ಕಥಿತಃ ಸ ಭೃಗುಶ್ರೇಷ್ಠ ವಿಪುಲಸ್ತ್ರಿಷು ಮಾನವಃ ।
ದ್ವೌ ಪಾಣೀ ದ್ವೌ ತಥಾ ಪಾದೌ ಧ್ವಜಚ್ಛತ್ರಾದಿಭಿರ್ಯುತಾ ॥ ೧೯ ॥

ಲೇಖಾಭಿರ್ಯಸ್ಯ ನಿರ್ದಿಷ್ಟಶ್ಚತುರ್ಲೇಖಃ ಸ ಮಾನವಃ ।
ಅಂಗುಲ್ಯೋ ಹೃದಯಂ ಪೃಷ್ಠಂ ಕಟಿರ್ಯಸ್ಯ ತಥಾ ಸಮಾಃ ॥ ೨೦ ॥

---

೧೬. ದೇವತೆಗಳು, ಬ್ರಾಹ್ಮಣರು, ಗುರುಗಳು, ಈ ಮೂವರು ಪೂಜ್ಯರ ವಿಷಯದಲ್ಲೂ ಅದಾವನು ವಿನಯಸಂಪತ್ತಿನಿಂದ ಕೂಡಿರುವನೋ ಅಂತಹವನನ್ನು ತ್ರಿವಿನತನೆಂದು ಕರೆಯಬೇಕು.

೧೭. ಅದಾವ ಧರ್ಮಜ್ಞನಾದ ಪುರುಷನು ಧರ್ಮಾರ್ಥಕಾಮಸಮಯತ್ರಯಗಳನ್ನು ಸಂಪತ್ಕರವಾದ ಕಾಲಗಳೆಂದು ತಿಳಿದು, ಅವುಗಳನ್ನು ಸರಿಯಾಗಿ ವಿಭಾಗಿಸಿಕೊಂಡು ಆಯಾಯ ಕಾಲಗಳಲ್ಲಿ ಆ ಮೂರನ್ನೂ ಸೇರಿಸುತ್ತಾ ಬರುವನೋ, ಅವನನ್ನು ತ್ರಿಕಾಲವಿದನೆಂದು ತಿಳಿದುಕೋ.

೧೮. ಯಾವ ಮನುಷ್ಯನಿಗೆ ಎದೆ, ಹಣೆ, ಮುಖ, ಈ ಮೂರೂ ಅಗಲವಾಗಿರುವುವೋ ಅಂತಹ ಪುರುಷೋತ್ತಮನನ್ನು ತ್ರಿವಿಪುಲನೆಂದು ತಿಳಿಯಬೇಕು.

೧೯-೨೦. ಎರಡು ಕೈಗಳಲ್ಲಿಯೂ, ಎರಡು ಕಾಲುಗಳಲ್ಲಿಯೂ ಯಾರಿಗೆ ಧ್ವಜ ಮತ್ತು ಛತ್ರಿಯ ಗುರುತುಗಳಿವೆಯೋ, ಈ ಆಕಾರದ ನಾಲ್ಕು ಗೆರೆಗಳಿರುತ್ತವೆಯೋ ಅವನಿಗೆ ಚತುರ್ಲೇಖನೆಂದು ಹೆಸರು. ಮತ್ತು ಬೆರಳುಗಳು, ಎದೆ, ಬೆನ್ನು, ಸೊಂಟ, ಈ ನಾಲ್ಕು ಯಾರಿಗೆ ಸಮಸಮನಾಗಿರುವುವೋ ಅವನು ಚತುಸ್ಸಮನೆನಿಸುವನು.

ಪುರುಷಃ ಸ ಭೃಗುಶ್ರೇಷ್ಠ ಚತುಸ್ಸಮ ಉದಾಹೃತಃ ।
ಷಣ್ಣವತ್ಯಂಗುಲೋತ್ಸೇಧಶ್ಚತುಷ್ಕಿಷ್ಕುಃ ಪ್ರಮಾಣತಃ ॥ ೨೦ ॥

ಪ್ರಮಾಣಯೋಗಾದ್ಧರ್ಮಜ್ಞ ಚತುಷ್ಕಿಷ್ಕುಃ ಸಕೀರ್ತಿತಃ ।
ದಂಷ್ಟ್ರಾಶ್ಚತಸ್ರಶ್ಚಂದ್ರಾಭಾ ದಶನೇಭ್ಯಃ ಸಮುನ್ನತಾಃ ॥ ೨೨ ॥

ಕಿಂಚಿದ್ಯಸ್ಯ ಸ ಧರ್ಮಜ್ಞ ಚತುರ್ದಂಷ್ಟ್ರಃ ಪ್ರಕೀರ್ತಿತಃ ।
ನೇತ್ರತಾರೇ ಭ್ರುವೌ ಶ್ಮಶ್ರುಃ ಕೃಷ್ಣಾಃ ಕೇಶಾಸ್ತಥೈವ ಚ ॥ ೨೩ ॥

ಯಸ್ಯೇಹ ಸ ಚತುಷ್ಕೃಷ್ಣಃ ಪ್ರೋಚ್ಯತೇ ಮನುಜೋತ್ತಮಃ ।
ನಾಸಾಯಾಂ ವದನೇ ಸ್ವೇದೇ ಕಕ್ಷ್ಯಸು ಚ ನರೋತ್ತಮ ॥ ೨೪ ॥

---

೨೧. ತೊಂಭತ್ತಾರಂಗುಲ ಉದ್ದ (ಎಂಟಡಿ), ನಾಲ್ಕಡಿ ಅಗಲವಾದ ಪ್ರಮಾಣದಿಂದ ಶೋಭಿಸುವ ಮನುಷ್ಯನನ್ನು ಚತುಷ್ಕಿಷ್ಕುವೆಂದು ಹೇಳಬೇಕು.

೨೨. ಮೂವತ್ತೆರಡು ಹಲ್ಲುಗಳ ಪೈಕಿ ಮೇಲುನಾಲಿನ ಹದಿನಾರು ಹಲ್ಲುಗಳಲ್ಲಿ ನಾಲ್ಕು ಹಲ್ಲು ಸ್ವಲ್ಪ ಉಬ್ಬಿ ಚಂದ್ರನಂತೆ ಚೆನ್ನಾಗಿ ಪ್ರಕಾಶಿಸುತಲಿದ್ದರೆ ಅಂತಹ ಮನುಷ್ಯನಿಗೆ ಚತುರ್ದಂಷ್ಟ್ರನೆಂದು ಹೆಸರು.

೨೩. ಕಣ್ಣಿನ ಆಲಿಗಳು, ಎರಡು ಹುಬ್ಬುಗಳು, ಮೀಸೆ, ತಲೆಕೂದಲುಗಳು ಕಪ್ಪಾಗಿ ಯಾವ ಮನುಷ್ಯನಿಗಿರುತ್ತವೆಯೋ ಅಂತಹ ಮನುಜೋತ್ತಮನು ಚತುಷ್ಕೃಷ್ಣನೆಂದು ಹೇಳಿಸಿಕೊಳ್ಳುವನು.

೨೪. ಯಾವನ ಎರಡು ಮೂಗುಗಳಲ್ಲಿ ಹೊರಡುವ ಉಸುರುಗಳು (ನಿಶ್ವಾಸ ವಾಯುವು) ಮೂಗಿನ ಮತ್ತು ಮುಖದ, ಹಾಗೂ ಎರಡು ಕಂಕುಳುಗಳಲ್ಲಿ ಹುಟ್ಟುವ ಬೆವರು ಹನಿಗಳು ಸುಗಂಧಪೂರಿತವಾಗಿ ಎತ್ತೆತ್ತಲೂ ಸುಗಂಧವನ್ನು ಬೀರುವ ಸ್ವಭಾವವುಳ್ಳವೋ, ಅಂತಹ ದೇಹವುಳ್ಳ ಮಹಾನುಭಾವನನ್ನು ಚತುರ್ಗಂಧನೆಂದು ಭಾವಿಸಬೇಕು.

**ಗಂಧಸ್ತು ಸುರಭಿರ್ಯಸ್ಯ ಚತುರ್ಗನ್ಧಃ ಸ ಕೀರ್ತಿತಃ ।**
**ಬಾಹೂ ಜಾನೂರುಗಂಡಶ್ಚ ಚತ್ವಾರ್ಯಸ್ಯ ಸಮಾನಿ ತು ॥ ೨೫ ॥**

**ಪುರುಷಸ್ಯ ಭೃಗುಶ್ರೇಷ್ಠ ಚತುಸ್ಸಮ ಉದಾಹೃತಃ ।**
**ಆಸ್ಯಾಸೃಙ್ಮಧ್ಯಪದ್ಮಾನಾಂ ತುಲ್ಯೋ ಗಂಧಸ್ತು ಯಸ್ಯ ವೈ ॥ ೨೬ ॥**

**ಕಥಿತಃ ಸ ಭೃಗುಶ್ರೇಷ್ಠ ಚತುರ್ಗಂಧ ಇತಿ ದ್ವಿಜೈಃ ।**
**ಹ್ರಸ್ವಂ ಲಿಂಗಂ ತಥಾ ಗ್ರೀವಾ ಜಂಘೇ ಹ್ರಸ್ವೇ ತು ದೇಹಿನಃ ॥ ೨೭ ॥**

**ಯಸ್ಯ ಭಾರ್ಗವಶಾರ್ದೂಲ ಚತುರ್ಹ್ರಸ್ವಃ ಸ ಕೀರ್ತಿತಃ ।**
**ಅಂಗುಲೀನಾಂ ತು ಪರ್ವಾಣಿ ನಖಕೇಶದ್ವಿಜತ್ವಚಂ ।**
**ಸೂಕ್ಷ್ಮಾಣಿ ಯಸ್ಯ ತಂ ರಾಮ ಪಂಚ ಸೂಕ್ಷ್ಮಂ ಪ್ರಚಕ್ಷತೆ ॥ ೨೮ ॥**

---

೨೫. ಯಾವ ಮನುಷ್ಯನಿಗೆ ಎರಡು ತೋಳುಗಳೂ, ಎರಡು ತೊಡೆಗಳೂ, ಎರಡು ಗಂಡಸ್ಥಲಗಳೂ ಸಮಸಮನಾಗಿರುವುವೋ ಅಂತಹ ಮನುಜೋತ್ತಮನನ್ನು ಚತುಸ್ಸಮನೆಂದು ಎಲ್ಲವನ್ನೂ ತಿಳಿದ ಮಹಾನುಭಾವರು ಹೇಳುವರಯ್ಯಾ! ಪರಶುರಾಮ!

೨೬. ಮತ್ತದಾರ ಬಾಯಿಯಿಂದ ಹೊರಡುವ (ಉಸುರು-ವಾಸನೆ) ಅಸೃಗ್ವಾಸನೆ (ಬೆವರು-ಗಂಧ) ಪದ್ಮಗಳ ಗಂಧದಂತೆ ಘಮಘಮಿಸುತ್ತಿರುವುದೋ ಅಂತಹ ಮಹಾನುಭಾವನೂ ಸಹ ಚತುರ್ಗಂಧನೆನಿಸಿಕೊಳ್ಳುವನೆಂದು ಭೂಸುರರು ನುಡಿದಿರುವರು. (ಸ್ವೇದರಕ್ತಾತ್ಮಜಾಸೃಜಃ ಎಂದು ಕೋಶ.) ಅಸೃಕ್ ಎಂದರೆ ರಕ್ತವೆಂದೂ, ಬೆವರೆಂದೂ ಎರಡರ್ಥವಾಗುತ್ತೆ.)

೨೭. ಲಿಂಗ, ಕತ್ತು, ಮೊಣಕಾಲುಗಳೆರಡೂ ಸಹ ಯಾವ ಮನುಷ್ಯನಿಗೆ ಚಿಕ್ಕಚಿಕ್ಕದಾಗಿರುತ್ತವೆಯೋ ಅಂತಹ ಮನುಷ್ಯೋತ್ತಮನು ಚತುರ್ಹ್ರಸ್ವನೆಂದು ಹೇಳಬೇಕು.

೨೮. ಬೆಟ್ಟುಗಳ ಗಿಣ್ಣುಗಳು, ಉಗುರು, ಕೂದಲು, ಹಲ್ಲು, ಚರ್ಮಗಳೆಲ್ಲವೂ ಬಹು ಸೂಕ್ಷ್ಮ (ಮೃದು) ವಾಗಿ ಯಾವ ಮನುಷ್ಯನಿಗಿರುವುವೋ ಅಂತಹವನು ಪಂಚಸೂಕ್ಷ್ಮನೆನಿಸಿಕೊಳ್ಳುತ್ತಾನೆ.

ಹನೂ ನೇತ್ರೇ ಲಲಾಟಂ ಚ ನಾಸಾ ಚೈವ ಸ್ತನಾನ್ತರಂ ।
ದೀರ್ಘಾಣಿ ಯಸ್ಯ ತಂ ರಾಮ ಪಂಚದೀರ್ಘಂ ವಿದುರ್ಬುಧಾಃ ॥ ೨೯ ॥

ವಕ್ಷಃ ಕಕ್ಷ್ಯೌ ನಖಾ ನಾಸಾ ಮುಖಂ ಚೈವ ಕೃಕಾಟಿಕಾ ।
ಷಡುನ್ನತಾನಿ ಯಸ್ಯೇಹ ತಂ ವದಂತಿ ಷಡುನ್ನತಂ ॥ ೩೦ ॥

ತ್ವಕ್ಕೇಶಲೋಮದಂತಾಶ್ಚ ದೃಷ್ಟಿರ್ವಾಣೀ ನಖಾಸ್ತಥಾ ।
ಸ್ನಿಗ್ಧಾ ಯಸ್ಯೇಹ ತಂ ಪ್ರಾಹುಃ ಸಪ್ತಸ್ನಿಗ್ಧಂ ಬಹುಶ್ರುತಾಃ ॥ ೩೧ ॥

ಜಾನುವಂಶಾವುಭೌ ರಾಮ ಭುಜವಂಶೌ ತಥಾಪ್ಯುಭೌ ।
ಊರುವಂಶದ್ವಯಂ ಚೈವ ಪೃಷ್ಠವಂಶಂ ಚ ಭಾರ್ಗವ ॥ ೩೨ ॥

---

೨೯. ಎರಡು ಕೆನ್ನೆಗಳೂ, ಎರಡು ಕಣ್ಣುಗಳೂ, ಹಣೆ, ಮೂಗು, ಎದೆ, ಇವೆಲ್ಲವೂ ಯಾರಿಗೆ ದೀರ್ಘವಾಗಿರುತ್ತವೆಯೋ ಅಂತಹ ಮಾನವಶ್ರೇಷ್ಠನನ್ನು ಪಂಚ ದೀರ್ಘನೆಂದು ತಿಳಿದವರು ಹೇಳುವರು.

೩೦. ಎದೆ, ಕಂಕುಳು, ಉಗುರು, ಮೂಗು, ಮುಖ, ಹೆಗ್ಗತ್ತು ಈ ಆರೂ ಯಾವ ಮನುಷ್ಯನಿಗೆ ಎತ್ತರವಾಗಿರುತ್ತವೆಯೋ ಆ ಮನುಷ್ಯನನ್ನು ಷಡುನ್ನತನೆಂದು ತಿಳಿದವರೆನ್ನುವರು.

೩೧. ಚರ್ಮ, ಮೈಮೇಲಿನ ಕೂದಲು, ತಲೆಗೂದಲು, ಹಲ್ಲು, ನೋಟ, ಮಾತು, ಉಗುರುಗಳು ನೋಡುವುದಕ್ಕೆ ಅಂದವಾಗಿರುವುವೋ ಅಂತಹ ಲಕ್ಷಣವಂತನಾದ ಮನುಷ್ಯನನ್ನು ಬಹುಶ್ರುತರಾದ ಪಂಡಿತಪ್ರವರರು ಸಪ್ತಸ್ನಿಗ್ಧನೆಂದುಸುರುವರು.

೩೨. ಎರಡು ಮೊಳಕಾಲುಗಳು, ಎರಡು ತೋಳುಗಳು, ಎರಡು ತೊಡೆಗಳು, ಎರಡು ಮೂಗಿನಹೊಳ್ಳೆಗಳು ಯಾವ ಮನುಷ್ಯನಿಗೆ ಸಮಸಮನಾಗಿ ಇರುತ್ತವೆಯೋ ಆ ಮನುಷ್ಯಶ್ರೇಷ್ಠನನ್ನು ಅಷ್ಟವಂಶನೆನ್ನಬೇಕು.

ನಾಸಾವಂಶಃ ಸಮೋ ಯಸ್ಯ ಸೋಽಷ್ಟವಂಶಃ ಪ್ರಕೀರ್ತಿತಃ ।
ನೇತ್ರೇ ನಾಸಾಪುಟೌ ಕರ್ಣೌ ಮೇಢ್ರಪಾಯೂ ಮುಖಂ ತಥಾ ॥ ೩೩ ॥

ಛಿದ್ರಾ ನವೈತೇ ವಿಮಲಾ ಯಸ್ಯ ತಂ ತು ನವಾಮಲಂ ।
ಜಿಹ್ವೋಷ್ಠತಾಲು ನೇತ್ರಾಂತ್ತರ್ಹಸ್ತಪಾದನಖಾಃ ಸ್ತನೌ ॥ ೩೪ ॥

ಶಿಶ್ನಾಗ್ರವಕ್ಷೋ ಯಸ್ಯೈತೆ ಪದ್ಮಾಭಾ ದಶ ದೇಹಿನಾಂ ।
ಪಾಣೀ ಪಾದೌ ಮುಖಂ ಗ್ರೀವಾ ಶ್ರವಣೇ ಹೃದಯಂ ಶಿರಃ ॥ ೩೫ ॥

ಲಲಾಟಮುದರಂ ಪೃಷ್ಠಂ ಬೃಹಂತಃ ಪೂಜಿತಾ ದಶ ।
ಪ್ರಸಾರಿತಭುಜಸ್ಯೇಹ ಮಧ್ಯಮಾಗ್ರತ್ವಯಾಂತರಾತ್ ॥ ೩೬ ॥

ಉಚ್ಛ್ರಾಯೇಣ ಸಮೋ ಯಃ ಸ ನ್ಯಗ್ರೋಧಪರಿಮಂಡಲಃ ।
ಕಥಿತಃ ಸ ನೃಪಶ್ರೇಷ್ಠಃ ಸರ್ವಲಕ್ಷಣಪೂಜಿತಃ ॥ ೩೭ ॥

---

೩೩. ಎರಡು ಕಣ್ಣು, ನಾಸಾಪುಟ, ಕಿವಿಗಳೆರಡು, ರಹಸ್ಯೇಂದ್ರಿಯಗಳು (ಶಿಶ್ನ-ಪಾಯು), ಮುಖ, ಈ ಒಂಭತ್ತು ಅವಯವಗಳ ರಂಧ್ರಗಳೂ ಸಹ ಯಾವ ಮನುಷ್ಯನಿಗೆ ನಿರ್ಮಲವಾಗಿರುತ್ತವೆಯೋ ಅಂತಹ ಮಹನೀಯನನ್ನು ನವಾಮಲ ನೆಂದು ಹೇಳಬೇಕು.

೩೪. ನಾಲಿಗೆ, ತುಟಿ, ಅಂಗಳು, ಕಣ್ಣು, ಅಂಗೈ, ಅಂಗಾಲು, ಉಗುರು, ಸ್ತನಪ್ರದೇಶ (ಎದೆ) ಗಳು, ಶಿಶ್ನಾಗ್ರ, ಈ ಹತ್ತು ಅಂಗಗಳೂ ಯಾವ ಮನುಜ ಪ್ರವರನಿಗೆ ಕಮಲದಂತೆ ಇರುವುವೋ,

೩೫. ಮತ್ತು ಕೈಕಾಲುಗಳೂ, ಮುಖ, ಕತ್ತು, ಕಿವಿ, ಎದೆ, ಶಿರಸ್ಸು, ಹೊಟ್ಟೆ, ಬೆನ್ನು, ಇವುಗಳು ದೊಡ್ಡದಾಗಿ ಅಗಲವಾಗಿ ಯಾರಿಗಿರುವುವೋ ಈ ದಶ ಲಕ್ಷಣಗಳುಳ್ಳ ಮನುಷ್ಯನು ಪೂಜ್ಯನಾಗುವನು.

೩೬-೩೭. ಅಗಲವಾಗಿರುವ ಎದೆಯು ಹೃದಯ ಮಧ್ಯಭಾಗದಿಂದ ಮೇಲಕ್ಕೆ ಹೊರಟು ಗುಂಡಾಗಿ ಎತ್ತರವಾಗಿ ಬೆಳೆದ ಆಲದಮರದ ಮಂಡಲದಂತೆ ಯಾವ ಮನುಷ್ಯನಿಗೆ ಉನ್ನತವಾಗಿರುವುದೋ ಅಂತಹವನೇ ಸರ್ವಲಕ್ಷಣವಂತನಾದ ಮನುಷ್ಯನು ಅವನೇ ರಾಜಶ್ರೇಷ್ಠನೆನಿಸಿಕೊಳ್ಳುವನು.

ಪಾದೌ ಗುಲ್ಫೌ ಸ್ಫಿಚೌ ಪಾರ್ಶ್ವೌ ವೃಷಣಾವೀಕ್ಷಣೌ ಹನೂ ।
ಕರ್ಣೋಷ್ಠಸಕ್ಥಿನೀ ಜಂಘೇ ಹಸ್ತೌ ಬಾಹೂ ತಥಾ ಭ್ರುವೌ ॥ ೩೮ ॥

ದ್ವಂದ್ವಾನ್ಯೇತಾನಿ ಯಸ್ಯ ಸ್ಯುಃ ಸಮಾನಿ ತು ಚತುರ್ದಶ ।
ಚತುರ್ದಶಸಮದ್ವಂದ್ವಃ ಕಥಿತಃ ಸ ನೃಪೋತ್ತಮಃ ॥ ೩೯ ॥

ವಿದ್ಯಾಸ್ಥಾನಾನಿ ಯಾನೀಹ ಕಥಿತಾನಿ ಚತುರ್ದಶ ।
ಪ್ರಪಶ್ಯತಿ ಚ ಯೋ ರಾಮ ನೇತ್ರಾಭ್ಯಾಂ ಚ ನರೋತ್ತಮಃ ॥ ೪೦ ॥

ಸಮ್ಯಕ್ಸ ಕಥಿತೋ ಲೋಕೇ ಷೋಡಶಾಕ್ಷೋ ಭೃಗೂತ್ತಮ ।
ರೂಕ್ಷಂ ಶಿರಾತತಂ ಗಾತ್ರಂ ತಥಾ ಮಾಂಸವಿವರ್ಜಿತಂ ॥ ೪೧ ॥

---

೩೮-೩೯. ಎರಡು ಕಾಲು, ಎರಡು ಹಿಮ್ಮಡಿ, ಸೊಂಟ, ಪಕ್ಕೆ, ಬೀಜಗಳು, ಕಣ್ಣುಗಳು, ಕೆನ್ನೆಯ ಮೇಲು ಬದಿ, ಕಿವಿ, ತುಟಿ, ಕೆನ್ನೆ, ಮೊಳಕೈ, ಮೊಳಕಾಲು, ಹುಬ್ಬುಗಳು, ಈ ಅಂಗಗಳೆಲ್ಲವೂ ಜೋಡಿಜೋಡಿಯಾಗಿ ಸಮಸಮನಾಗಿ ಯಾವ ಮನುಷ್ಯನಿಗಿರುವುವೋ ಅಂತಹ ಮಹಾಮಹಿಮನನ್ನು ಚತುರ್ದಶ ಸಮದ್ವಂದ್ವವಾದ ಮಹಾರಾಜನೆಂದು ಧಾರಾಳವಾಗಿ ಕರೆಯಬಹುದು.

೪೦. ಇದುವರಿವಿಗೆ ವಿವರಿಸಿದ ಹದಿನಾಲ್ಕು ವಿದ್ಯಾಸ್ಥಾನಗಳೆನಿಸಿದ ಲಕ್ಷಣಗಳುಳ್ಳ ಪುರುಷೋತ್ತಮನ ಮಾತನ್ನು ಹೇಳಿದ ಹಾಗಾಯಿತು. ಇಂತಹ ಲಕ್ಷಣಾನ್ವಿತನಾದ ಪುರುಷನನ್ನು ಯಾವ ಮನುಷ್ಯನು ಕಣ್ಣುತುಂಬಾ ಚೆನ್ನಾಗಿ ನೋಡುತ್ತಾನೆಯೋ ಅಂತಹ ಮನುಷ್ಯನೇ ಧನ್ಯನು. ಅವನನ್ನು ಹದಿನಾರು ಕಣ್ಣುಳ್ಳವನೆಂದರೂ ಅಡ್ಡಿಯಿಲ್ಲ.

೪೧. ಇಂತಹ ಸಲ್ಲಕ್ಷಣಗಳಿಗೆ ವ್ಯತಿರೇಕವಾಗಿ ಯಾವ ಅಧಮ ಮನುಷ್ಯನು ವಿಕಾರವಾಗಿದ್ದು, ಮೂಳೆಚಕ್ಕಳದಂತೆ ಕಾಣುತ್ತಾ, ದುರ್ಗಂಧದಿಂದಲೂ, ಅಮಂಗಳದಿಂದಲೂ ಕೂಡಿ ಕಾಣುವನೋ ಅವನು ವಿಪರೀತ (ಮನುಷ್ಯಾಧಮ) ನೆನಿಸುವನು.

**ದುರ್ಗಂಧಿ ಚಾಶುಭಂ ಸರ್ವಂ ವಿಪರೀತಂ ಚ ಶಸ್ಯತೇ ।**
**ದೃಷ್ಟಿಃ ಪ್ರಸನ್ನಾ ಮಧುರಾ ಚ ವಾಣೀ ಮತ್ತೇಭತುಲ್ಯಾ ಚ ಗತಿಃ ಪ್ರಶಸ್ತಾ।**
**ಏಕೈಕರೂಪಪ್ರಭವಾಶ್ಚ ರೋಮಾ ಸತ್ತ್ವಂ ಪ್ಲುತಂ ಹಾಸಮನುಲ್ಬಣಂ ಚ**
**॥ ೪೨ ॥**

**ಶ್ರಾನ್ತಸ್ಯ ಯಾನಮಶನಂ ಚ ಬುಭುಕ್ಷಿತಸ್ಯ ।**
**ಪಾನಂ ತೃಷಾ ಪರಿಗತಸ್ಯ ಪರೇಷು ರಕ್ಷಾ ।**
**ಏತಾನಿ ಯಸ್ಯ ಪುರುಷಸ್ಯ ಭವಂತಿ ಕಾಲೇ ।**
**ತಂ ಧನ್ಯಮಾಹುರಧಿಭೂಮಿ ನರಂ ದ್ವಿಜೇಂದ್ರಾಃ ॥ ೪೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪುರುಷಲಕ್ಷಣಂ ನಾಮ ಅಷ್ಟಮೋಽಧ್ಯಾಯಃ**

---

೪೨. ಅದಾವ ಮಹಾನುಭಾವನ ದೃಷ್ಟಿಯು ಯಾವಾಗಲೂ ಪ್ರಸನ್ನ ಮುದ್ರೆಯಿಂದ ಕೂಡಿರುವುದೋ, ಅದಾವನು ಮಧುರವಾಣಿಯಿಂದ ವಿರಾಜಮಾನ ನಾಗಿರುವನೋ, ಮತ್ತದಾವ ಮಹಾನುಭಾವನ ನಡಿಗೆಯು ಮದಿಸಿದ ಆನೆಯ ನಡಿಗೆಯಂತೆ ಮಂದವಾಗಿರುವುದೋ, ಒಂದೊಂದು ರೋಮಕೂಪವೂ ಹಳ್ಳಹಳ್ಳವಾಗಿ ಯಾರ ದೇಹದಲ್ಲಿ ಕಾಣುತ್ತಿರುವುದೋ, ಯಾವನು ಸತ್ವಗುಣಾಧಿಕನಾಗಿ ಶಾಂತ ನಾಗಿರುವನೋ, ಅವನೇ ಸರಿಯಾದ ಮನುಷ್ಯನೆಂದು ಭಾವಿಸಬೇಕು.

೪೩. ಈ ಭೂಲೋಕದಲ್ಲಿ ಯಾವ ಉದಾರಿಯಾದ ಮಹಾನುಭಾವನು ದಾರಿನಡೆದು ಬಳಲಿದವರನ್ನು ಬಂಡಿಯಮೇಲೆ ಕೂರಿಸಿ ಕಳುಹುವನೋ, ಹಸಿದವರಿಗೆ ಹೊಟ್ಟೆತುಂಬಾ ಭೋಜನಮಾಡಿಸಿ ತೃಪ್ತಿಪಡಿಸುವನೋ, ಬಳಲಿ ಬಾಯಾರಿದವರಿಗೆ ಒಳ್ಳೇ ತಂಪಾದ ಸಿಹಿಯಾದ ಪಾನೀಯಗಳನ್ನು ಕೊಟ್ಟು ತಣಿಸುವನೋ, ಕಷ್ಟದಲ್ಲಿ ಸಿಕ್ಕಿದ ಜನರನ್ನು ರಕ್ಷಿಸುವನೋ, ಈರೀತಿ ಸಮಯವರಿತು ಜನೋಪಕಾರ ಲೋಕೋಪಕಾರ ಮಾಡುವವನನ್ನು ಧನ್ಯನೆಂದು ತಿಳಿದ ಜನರು ಹೇಳುತ್ತಾರೆ.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಉತ್ತಮಪುರುಷಲಕ್ಷಣವೆಂಬ ಹೆಸರಿನ ಎಂಟನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ನವಮೋಽಧ್ಯಾಯಃ

### ಪುಷ್ಕರ ಉವಾಚ

**ಶಸ್ತಾ ಸ್ತ್ರೀ ಚಾರುಸರ್ವಾಂಗೀ ಮತ್ತಮಾತಂಗಗಾಮಿನೀ ।**
**ಗುರೂರು ಜಘನಾ ಯಾ ಚ ಮತ್ತ ಪಾರಾವತೇಕ್ಷಣಾ ॥ ೧ ॥**

**ಸುನೀಲಕೇಶೀ ತನ್ವಂಗೀ ಪರಪುಷ್ಟ ನಿನಾದಿನೀ ।**
**ತನುಮಧ್ಯಾ ವಿಲೋಮಾಂಗೀ ಸ್ನಿಗ್ಧವರ್ಣಾ ಮನೋಹರಾ ॥ ೨ ॥**

---

### ಒಂಭತ್ತನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನನ್ನು ಕುರಿತು ಮತ್ತೂ ಹೇಳುತ್ತಾನೆ:—ಇನ್ನು ಮುಂದೆ ಉತ್ತಮ ಸ್ತ್ರೀಲಕ್ಷಣವನ್ನು ಹೇಳುತ್ತೇನೆ, ಕೇಳು. ನೋಡುವುದಕ್ಕೆ ಮನೋಹರವಾದ, ಸರ್ವಾಂಗ ಸೌಂದರ್ಯದಿಂದ ಕೂಡಿದ ಹೆಂಗಸು ಮದ್ದಾನೆಯಂತೆ ಹೆಜ್ಜೆಯಿಡುತ್ತಿರುತ್ತಾಳೆ. ಅವಳ ತೊಡೆಯೂ, ಸೊಂಟದ ಕೆಳಭಾಗವೂ (ಜಘನ ಪ್ರದೇಶ) ಬಹಳ ದಪ್ಪವಾಗಿರುವುವಲ್ಲದೆ, ಅವಳ ನೋಟವು ಮದಿಸಿದ ಪಾರಿವಾಳದ ಹಕ್ಕಿಯಂತೆ ಕಾಣುತ್ತಿರುತ್ತದೆ.

೨. ಅವಳ ತಲೆಗೂದಲಾದರೋ ಬಲು ಕಪ್ಪಾಗಿರುತ್ತದೆ. ಅವಳ ದೇಹವು ಹಕ್ಕಿಯಂತೆ ನುಣುಪಾಗಿಯೂ ಮೆತ್ತಗೂ ಇರುತ್ತದೆ. ಅವಳ ಸ್ವರವಾದರೋ ಕೋಗಿಲೆಯ ಗಾನವನ್ನು ಹೋಲುತ್ತಿರುತ್ತದೆ. ಅವಳ ಬಳುಕುವ ನಡುವೂ, ಮೈಯಲ್ಲೆಲ್ಲೂ ಸ್ವಲ್ಪವೂ ಕೂದಲಿಲ್ಲದೆ ನೋಟಕ್ಕೆ ಅಂದವಾದ ಅವಳ ಮುಖ ಸೌಂದರ್ಯವೂ, ಅವಳು ಬಹು ಸುಲಕ್ಷಣಳಾದ ಹೆಂಗಸೆನ್ನುವುದಕ್ಕೆ ಸಾಕ್ಷೀಭೂತ ಗಳಾಗಿರುತ್ತವೆ.

**ಸಮಗ್ರ ಭೂಸ್ಪೃಶೌ ಯಸ್ಯಾಶ್ಚರಣೌ ಕಮಲೋಪಮೌ ।**
**ನಾಭಿಃ ಪ್ರದಕ್ಷಿಣಾವರ್ತಾ ಸಂಹತೌ ಚ ತಥಾ ಸ್ತನೌ ॥ ೩ ॥**

**ವಿಭಕ್ತಮಧರೋಷ್ಠಂ ಚ ದರ್ಶನಂ ಮಾಧುರಂ ತಥಾ ।**
**ಗುಹ್ಯಂ ಪ್ರದಕ್ಷಿಣಾವರ್ತ ಮಶ್ವತ್ಥದಲಸನ್ನಿಭಂ ॥ ೪ ॥**

**ಗುಲ್ಫೌ ನಿಗೂಢೌ ಗೂಢೇ ಚ ತಥಾ ಯಸ್ಯಾಃ ಕಕುಂದರೇ ।**
**ಮಧ್ಯನಾಭೇಶ್ಚ ಯಸ್ಯಾಃ ಸ್ಯಾದ್ಧಸ್ತಾಂಗುಷ್ಠಪ್ರಮಾಣತಃ ॥ ೫ ॥**

**ಪಿಂಡಿಕೇ ಚ ನ ಸನ್ನದ್ಧೇ ನ ಲಂಬಾ ಚ ತಥಾ ಕಟಿಃ ।**
**ಜಠರಂ ಚ ಪ್ರಲಂಬಂ ಚ ನಯನೇ ಚ ನ ಕೇಕರೇ ॥ ೬ ॥**

---

೩. ಅವಳು ನೆಲದ ಮೇಲೆ ನಡೆಯುವಾಗ ಎರಡು ಕಾಲೂ ಪೂರ್ತಿಯಾಗಿ ನಿಲ್ಲಬೇಕು. ಈ ಕಾಲುಗಳು ಕಮಲಪುಷ್ಪಗಳೋ ಎನ್ನುವ ಭ್ರಮೆಯನ್ನು ನೋಡುವವರಿಗೆ ತಂದೊಡ್ಡುತ್ತಿರಬೇಕು. ಹೊಕ್ಕಳಸುಳಿಯು ಬಲಗಡೆ(ಪ್ರದಕ್ಷಿಣೆ)ಗೆ ತಿರುಗಿರಬೇಕು. ಎರಡು ಸ್ತನಗಳೂ ಮಧ್ಯೆ ಸ್ವಲ್ಪವೂ ಜಾಗಬಿಡದೆ ತುಂಬಿಕೊಂಡಿರಬೇಕು.

೪. ತುಟಿಯ ಕೆಳಭಾಗವು ಬಿಡುವಾಗಿದ್ದು, ನೋಡುವುದಕ್ಕೆ ಪರಮಾನಂದವುಂಟಾಗುವಂತೆ ಕಾಣುತ್ತಿರಬೇಕು. ಯೋನಿಯು (ಜನನೇಂದ್ರಿಯ) ಅರಳೀ ಎಲೆಯಂತೆ ಲಕ್ಷಣವಾಗಿಯೂ, ಬಲಗಡೆ ಸುಳಿಸುಳಿಯಾಗಿಯೂ ಇರಬೇಕು.

೫. ಎರಡು ತೊಡೆಗಳೂ ಬಹಳ ಗಾಢವಾಗಿಯೂ, ಆ ತೊಡೆಗಳಿಗೂ ಹೊಕ್ಕಳಿಗೂ ಒಂದು ಅಂಗೈ ಅಗಲ ಜಾಗಬಿಟ್ಟು ಇರಬೇಕು.

೬. ಸೊಂಟಗಳೆರಡೂ ಗುಂಡಾಗಿಯೂ ಸಣ್ಣಗೂ ಉದ್ದವಾಗಿಯೂ (ನಡು ಬಳುಕುವಂತೆ) ಇರಬೇಕು. ಹೊಟ್ಟೆಯು ಪ್ರಲಂಬವಾಗಿರಬೇಕು. ನಯನಗಳೆರಡೂ ಜಿಂಕೆಯ ನೋಟದಂತೆ ಇರಬೇಕು.

**ಕಚಾಶ್ಚ ಕಪಿಶಾಃ ಕೇಶಾಃ ಕೇಶಾ ರೂಕ್ಷಾ ಸ್ತಥೈವ ಚ ।**
**ನ ಚ ವೃಕ್ಷನದೀ ನಾಮ್ನೀ ನ ದೇವಗಿರಿನಾಮಿಕಾ ॥ ೭ ॥**

**ನ ಚೈವೋರಗಗಂಧರ್ವಭೂತಪ್ರೇತಸನಾಮಿಕಾ ।**
**ನ ವಾಚಾಲಾ ನ ಲುಬ್ಧಾ ಚ ನ ಶಠಾ ಕಲಹಪ್ರಿಯಾ ॥ ೮ ॥**

**ನ ಲೋಲುಪಾ ನ ದುರ್ಭಾವಾ ನ ವಾ ಕುಂಠಕಪಾಲಿಕಾ ।**
**ದೇವದ್ವಿಜಾತಿಸಿದ್ಧಾನಾಂ ಸಾಧೂನಾಂ ಪೂಜನೇ ರತಾ ॥ ೯ ॥**

**ಶೀಲೋಪೇತಾ ಗುಣೋಪೇತಾ ನ ಶಿರಾಲಾ ನ ಲೋಮಶಾ ॥ ೧೦ ॥**

**ಗಂಡೈರ್ಮಧೂಕಪುಷ್ಪಾಭೈಃ ಸ್ನಿಗ್ಧೈಶ್ಚ ದಶನಚ್ಛದೈಃ ।**
**ನ ಸಂಹತಭ್ರೂಃ ಸಂಶ್ಲಿಷ್ಟಚರಣಾಂಗುಲಿಕುಡ್ಮಲಾ ॥ ೧೧ ॥**

---

೭. ಮುಂದಲೆಯು ಹೊಂಬಣ್ಣವಾಗಿಯೂ, ಕೂದಲುಗಳು ಕಪ್ಪಾಗಿಯೂ, ಗುಂಗುರು ಗುಂಗುರಾಗಿಯೂ ಇರಬೇಕು. ಹೆಂಗಸರು ಮರಗಳ ಹೆಸರನ್ನಾಗಲಿ, ಹೊಳೆಗಳ ಹೆಸರನ್ನಾಗಲಿ, ದೇವಗಿರಿನಾಮುಗಳನ್ನಾಗಲಿ ಇಟ್ಟುಕೊಳ್ಳಬಾರದು.

೮. ಮತ್ತು ಹೆಂಗಸರು ಹಾವುಗಳ ಹೆಸರು, ಗಂಧರ್ವಭೂತಪ್ರೇತಗಳ ಹೆಸರುಗಳನ್ನಿಟ್ಟುಕೊಳ್ಳಬಾರದು. ಹೆಂಗಸು ಯಾವಾಗಲೂ ತಲೆಹರಟೆ (ವಾಚಾಲ)ಮಾತನಾಡಬಾರದು. ಹೆಂಗಸಾದವಳು ಜಿಪುಣತನವನ್ನು ಮಾಡಕೂಡದು. ಹಠಮಾರಿತನವನ್ನಾಗಲಿ, ಜಗಳಕಾಯುವುದನ್ನಾಗಲಿ ಬಿಟ್ಟುಬಿಡಬೇಕು.

೯. ಯಾವಾಗಲೂ ಲೋಲಳಾಗಿರಬಾರದು. ಯಾವಾಗಲೂ ಮನಸ್ಸಿನಲ್ಲಿ ಕೆಟ್ಟಯೋಚನೆ ಮಾಡಬಾರದು, ವೃಥಾ ಮನೆಬಿಟ್ಟು ಹೊರಕ್ಕೆ ಹೊರಡಬಾರದು. ಯಾವಾಗ ನೋಡಿದರೂ ದೇವಬ್ರಾಹ್ಮಣರ, ಸಿದ್ಧಪುರುಷರ, ಸಾಧುಸಜ್ಜನರ ಪೂಜೆಯಲ್ಲೇ ನಿರತಳಾಗಿರಬೇಕು.

೧೦. ಒಳ್ಳೇ ನಡತೆಯುಳ್ಳವಳಾಗಿರಬೇಕು. ಸುಗುಣವತಿಯಾಗಿರಬೇಕು. ಸಿಡುಕಿಯಾಗಿರಬಾರದು. ಮೈಯಲ್ಲಿ ಕೂದಲಿರಬಾರದು.

೧೧. ಕೆನ್ನೆಗಳು ಕೆಂಪಗೂ, ಹಲ್ಲುಗಳು ಬೆಳ್ಳಗೆ ಸೊಗಸಾಗಿಯೂ ಇರಬೇಕು, ಕೂಡು-ಹುಬ್ಬಾಗಿರಬಾರದು. ಮೆಟ್ಟಿಂಗಾಲಿಟ್ಟು ನಡೆಯಬಾರದು. (ಭೂಮಿಯನ್ನು ಮೆಟ್ಟಿ ನಡೆಯಕೂಡದು) ಕೈಬೆರಳುಗಳು ಮಲ್ಲಿಗೆ ಮೊಗ್ಗಿನಂತಿರಬೇಕು.

**ಪತಿಪ್ರಿಯಾ ಪತಿಪ್ರಾಣಾ ಯಾ ನಾರೀ ಪತಿದೇವತಾ ।**
**ಅಲಕ್ಷಣಾಽಪಿ ಸಂಜ್ಞೇಯಾ ಸರ್ವಲಕ್ಷಣಸಂಯುತಾ ॥ ೧೨ ॥**

**ಭ್ರುವಂ ಕನೀನಿಕಾ ಯಸ್ಯಾ ನ ಸ್ಪೃಶೇತ ಕಥಂಚನ ।**
**ನತಾಂ ಕುರ್ವೀತ ಭಾರ್ಯಾರ್ಥಂ ಮೃತ್ಯುಃ ಸಾ ಕಥಿತಾ ಬುಧೈಃ ॥ ೧೩ ॥**

**ಸರೋಗಮುತ್ತರೋಷ್ಠಂ ಚ ಗಂಡೌ ಯಸ್ಯಾಃ ಸಕೂಪಕೌ ।**
**ಅತಿದೀರ್ಘಾ ಕಷಾಯಾ ಚ ಚಲನ್ಮಾಂಸಚಯಾ ತಥಾ ॥ ೧೪ ॥**

**ಸಾ ವಿವರ್ಜ್ಯಾ ವಿಶೇಷೇಣ ನರೇಣ ಹಿತಮಿಚ್ಛತಾ ॥ ೧೫ ॥**

---

೧೨. ಪತಿಗೆ ಹಿತಳಾಗಿರಬೇಕು. ಪತಿಪ್ರಾಣಳಾಗಿ ಪತಿಯೇ ಸರ್ವಸ್ವವೂ ಎಂದಿರಬೇಕು. ಹೆಚ್ಚೇನು! ಪತಿಗಿಂತ ಪರದೈವವಿಲ್ಲವೆಂದು ತಿಳಿದು ಮಹಾ ಪತಿವ್ರತೆಯಾಗಿರಬೇಕು. ಅದಾವ ಮಹಾತಾಯಿಯು ಪತಿವ್ರತೆಯಾಗಿರುವಳೋ ಅಂಥವಳು ಸರ್ವಾವಲಕ್ಷಣಗಳಿಂದ ಕೂಡಿದ ಹೆಂಗಸಾದಾಗ್ಯೂ, ಅಂಥವಳನ್ನು ಸರ್ವ ಲಕ್ಷಣಸಂಪನ್ನಳಾದ ನಾರೀರತ್ನಳೆಂದು ತಿಳಿಯಬೇಕಯ್ಯಾ!

೧೩. ಯಾವ ಹೆಂಗಸಿನ ಹುಬ್ಬು ಬಹು ಸಣ್ಣದಾಗಿ ಕಣ್ಣು ಸಹ ಬಹು ಸಣ್ಣದಾಗಿ ನೋಡುವುದಕ್ಕೆ ಅಸಹ್ಯವಾಗಿ ತೋರುವುದೋ, ಅಂತಹ ಹೆಂಗಸನ್ನು ಯಾರೂ ಮುಟ್ಟಬಾರದು. ಮತ್ತು ಅಂಥವಳನ್ನು ಯಾರೂ ಮದುವೆಮಾಡಿಕೊಳ್ಳಲೂ ಬಾರದು. ಅಂಥವಳು ಮೃತ್ಯುದೇವತೆಯೆಂದು ವಿದ್ವಾಂಸರೆಲ್ಲರೂ ಹೇಳಿದ್ದಾರೆ.

೧೪-೧೫. ಯಾವ ಹೆಂಗಸಿನ ಕೆನ್ನೆಯ ಮೇಲೆ ತುಟಿಯ ಕೆಳಗೆ ಹಳ್ಳಹಳ್ಳದಂತೆ ಕುಳಿಬಿದ್ದು ಕೂದಲು ಬೆಳೆದುಕೊಂಡಿರುವುದೋ, ಯಾವ ಹೆಂಗಸಿನ ದೇಹದಲ್ಲಿ ಮಾಂಸಖಂಡಗಳು ಓಡಾಡುತ್ತಿರುತ್ತವೆಯೋ, ಅತಿ ಉದ್ದವಾಗಿ ಬೆಳದಿರುವ ಕರಗಿ ಯಾವಳುಂಟೋ ಅಂತಹವಳು ಅವಲಕ್ಷಣದ ಹೆಂಗುಸೆಂದು ತಿಳಿದುಕೊಳ್ಳಬೇಕು. ಹೇಗಾದರೂ ಮಾಡಿ ಅವಳನ್ನು ತ್ಯಾಗಮಾಡಿಬಿಡುವುದೇ ಒಳ್ಳೆಯದಯ್ಯಾ!

**ಸಂಕ್ಷೇಪತಸ್ತೇ ಕಥಿತಂ ಮಯೈತ**
**ತ್ಸ್ತ್ರೀಲ್ಲಕ್ಷಣಂ ಚಾರುನಿತಂಬಿನೀನಾಂ ।**
**ರಹಸ್ಯ ಮೇತತ್ಕಥಿತಂತುತತ್ರ**
**ಯತ್ರಾಕೃತಿಸ್ತತ್ರ ಗುಣಾ ವಸಂತಿ** **॥ ೧೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಸ್ತ್ರೀಲಕ್ಷಣಂ ನಾಮ ನವಮೋಧ್ಯಾಯಃ**

---

೧೬. ಪರಶುರಾಮ! ಈಗ ನಿನಗೆ ನಾನು ಹೆಂಗಸರ ಲಕ್ಷಣವನ್ನು ಎಲ್ಲೋ ಸ್ವಲ್ಪಮಟ್ಟಿಗೆ ಹೇಳಿದೆನೇ ಹೊರ್ತು ವಿಸ್ತಾರವಾಗಿ ತಿಳಿಸಲಿಲ್ಲ. ಈ ಹೆಂಗಸಿನ ಲಕ್ಷಣವನ್ನು ನಾನು ನ್ಯಾಯವಾಗಿ ಗುಟ್ಟಾಗಿಡಬೇಕಾಗಿತ್ತು. ಅಂಥ ಗುಟ್ಟು ಸಂಗತಿಯನ್ನೂ ಸಹ ನಿನಗೆ ಈಗ ರಟ್ಟುಮಾಡಿ ಹೇಳಿಬಿಟ್ಟೆನಯ್ಯಾ! ಮುಖ್ಯವಾಗಿ ಒಂದು ಮಾತನ್ನು ನೀನು ಜ್ಞಾಪದಲ್ಲಿಟ್ಟುಕೋ! ಅದೇನೆನ್ನುವಿಯೋ? ಯಾರ ಯಾರ ಆಕಾರವು ಹೇಗೆ ಹೇಗೆ ಇರುವುದೋ ಅದಕ್ಕೆ ತಕ್ಕಂತೆಯೇ ಗುಣಗಳೂ ಸಹ ಅವರಿಗೆ ಹಾಗೇ ಇರುತ್ತವೆಂದು ಮುಖ್ಯವಾಗಿ ತಿಳಿದುಕೊಂಡಿರು ಕಂಡೆಯಾ? ಹೀಗೆಂದು ಪುಷ್ಕರನು ಪರಶುರಾಮನಿಗೆ ಹೇಳಿದೆನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಸ್ತ್ರೀಲಕ್ಷಣವೆಂಬ ಹೆಸರಿನ ಒಂಭತ್ತನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ದಶಮೋಽಧ್ಯಾಯಃ

### ಪುಷ್ಕರ ಉವಾಚ

**ನಾಗಾಃ ಪ್ರಶಸ್ತಾ ಧರ್ಮಜ್ಞ ಪ್ರಮಾಣೇನಾಧಿಕಾಸ್ತು ಯೇ ।**
**ದೀರ್ಘಹಸ್ತಾ ಮಹೋಚ್ಛ್ವಾಸಾ ಸ್ವಾಸನಾಶ್ಚ ವಿಶೇಷತಃ ॥ ೧ ॥**

**ನಿಗೂಢವಂಶಾ ಮಧ್ವಾಕ್ಷಾ ಗೂಢಾ ಗೂಢೋಽಷ್ಠಮಸ್ತಕಾಃ ।**
**ವಿಂಶತ್ಯಷ್ಟಾಧಿಕನಖಾಃ ಶೀತಕಾಲಮದಾಶ್ಚ ಯೇ ॥ ೨ ॥**

**ಯೇಷಾಂ ಚೈವ ಕರಾಃ ಪಾದಾ ದೀರ್ಘಾಲಾಂಗೂಲಮೇವ ಚ ।**
**ದಕ್ಷಿಣಂ ಚೋನ್ನತಂ ದೀಪ್ತಂ ಬೃಂಹಿತಂ ಜಲದೋಪಮಂ ॥ ೩ ॥**

---

### ಹತ್ತನೆಯ ಅಧ್ಯಾಯವು.

೧-೨. ಪುಷ್ಕರನು ಪರಶುರಾಮನನ್ನು ಕುರಿತು ಆನೆಗಳ ಲಕ್ಷಣವನ್ನು ತಿಳಿಸುತ್ತಾನೆ;—ಎಲೈ ಧರ್ಮಜ್ಞನಾದ ಪರಶುರಾಮನೇ! ಉತ್ತಮ ಗಜಗಳ ಲಕ್ಷಣವನ್ನು ಹೇಳುತ್ತೇನೆ, ಕೇಳು. ಆನೆಗಳು ಎತ್ತರವಾಗಿಯೂ, ಉತ್ತಮವಾಗಿಯೂ, ಉದ್ದವಾದ ಸೊಂಡಿಲುಗಳುಳ್ಳವಾಗಿಯೂ, ಮಹತ್ತಾದ ಉಚ್ಛ್ವಾಸವಾಯು (ಉಸಿರನ್ನೆಳೆಯುವಿಕೆ) ಗಳುಳ್ಳದಾಗಿಯೂ, ನಿಗೂಢವಾದ ವಂಶಗಳುಳ್ಳವಾಗಿಯೂ, ಸುಂದರವಾದ ನೇತ್ರಗಳುಳ್ಳವಾಗಿಯೂ, ತುಟಿ ಮತ್ತು ಕತ್ತುಗಳು ಗಾಢವಾಗಿಯೂ, ಇಪ್ಪತ್ತೆಂಟು ಉಗುರುಗಳುಳ್ಳವಾಗಿಯೂ, ಶೀತಕಾಲದಲ್ಲಿ ಮದೋದಕಧಾರೆಯನ್ನು ಸುರಿಸತಕ್ಕವಾಗಿಯೂ ಇರಬೇಕು.

೩. ಯಾವ ಆನೆಗಳ ಸೊಂಡಿಲುಗಳೂ, ನಾಲ್ಕು ಕಾಲುಗಳೂ, ಬಾಲವೂ ಸಹ ತುಂಬಾ ಉದ್ದವಾಗಿರುತ್ತವೆಯೋ, ಬಲಭಾಗ ಸ್ವಲ್ಪ ಎತ್ತರವಾಗಿದ್ದು ಮಹಾ ಪ್ರಕಾಶಮಾನವಾದುದಾಗಿ ಯಾವ ಆನೆಗಳಿರುತ್ತವೆಯೋ, ಆವ ಆನೆಯ ಬೃಂಹಿತವು (ಕೂಗು) ಮೋಡಗುಡುಗಿದಂತೆ ಇರುವುದೋ ಅವು ಉತ್ತಮಗಳು.

**ಅತ್ಯರ್ಥವೇದನಾ ಯೇ ಚ ಶೂರಾಃ ಶಬ್ದಸಹಿಷ್ಣವಃ ।**
**ಕರ್ಣೌ ಚ ವಿಪುಲೌ ಯೇಷಾಂ ಸೂಕ್ಷ್ಮಬಿಂದುಯುತತ್ವಚಃ ॥ ೪ ॥**

**ತೇ ಪ್ರಶಸ್ತಾ ಮಹಾಭಾಗಾ ಯೇ ತಥಾ ಸಪ್ತಸುಸ್ಥಿತಾಃ ।**
**ದಂತಚ್ಛದೇಷು ದೃಶ್ಯಂತೇ ಯೇಷಾಂ ಸ್ವಸ್ತಿಕಲಕ್ಷಣಾಃ ॥ ೫ ॥**

**ಶೃಂಗಾರವಾಲವ್ಯಜನಂ ವರ್ಧಮಾನಾಂಕುಶಾಸ್ತಥಾ ।**
**ತೇ ಧಾರ್ಯಾ ನ ತಥಾ ಧಾರ್ಯಾ ವಾಮನಾ ಮತ್ಕುಣಾದಯಃ ॥ ೬ ॥**

**ಹಸ್ತಿನ್ಯೋ ಯಾಶ್ಚ ಗರ್ಭಿಣ್ಯೋ ಯೇ ಚ ಮೂಢಾ ಮತಂಗಜಾಃ ।**
**ಅಪಾಕಲಾಶ್ಚ ಕುಬ್ಜಾಶ್ಚ ಸದ್ದನ್ತಾ ಯೇ ಚ ಭಾರ್ಗವ ॥ ೭ ॥**

**ಕುದಂತಾಶ್ಚ ತಥಾ ವರ್ಜ್ಯಾ ವಾಮಕೂಟಾಶ್ಚ ಯತ್ನತಃ ।**
**ಅಸ್ರುಸ್ಪೃಶಶ್ಚ ಕೂಟಾಶ್ಚ ಶಠಾಶ್ಚ ವಿಕಟಾಶ್ಚ ಯೇ ॥ ೮ ॥**

---

೪. ಯಾವ ಆನೆಗಳು ಬಹು ಬಲವಾಗಿರುವುವೋ, ಮತ್ತಾವುವು ಅತ್ಯಂತ ವೇದನೆಯನ್ನೂ ಸಹ ಸಹಿಸಬಲ್ಲುವೋ, ಶಬ್ದಗಳ ವೇಗವನ್ನು ಸಹಿಸಬಲ್ಲುವೋ, ಮತ್ತದಾವ ಗಜಗಳ ಕಿವಿಗಳು ವಿಸ್ತಾರವಾಗಿರುವುವೋ, ಯಾವ ಆನೆಗಳ ಚರ್ಮಗಳು ಸೂಕ್ಷ್ಮವಾದ ಬಿಂದುವಿನಿಂದ ಕೂಡಿರುವುವೋ ಅವು ಒಳ್ಳೆಯ ಆನೆಗಳು.

೫-೬. ಮುಂದೆ ನಾನು ಹೇಳುವ ಗುರುತುಗಳನ್ನು ಹೊಂದಿದ ಲಕ್ಷಣಗಳನ್ನುಳ್ಳ ಆನೆಗಳು ಬಹು ಪ್ರಶಸ್ತವಾದುವುಗಳೆಂದು ತಿಳಿಯಬೇಕು. ಯಾವ ಆನೆಯ ಕೊಂಬಿನಲ್ಲಿ ಏಳು ಜಾಗಗಳಲ್ಲಿ ಸರ್ವತೋಭದ್ರಮಂಡಲ (ಸ್ವಸ್ತಿಕ)ದ ಗುರುತು ಕಾಣಿಸುವುದೋ, ಬಾಲವು ಬಹು ಶೃಂಗಾರವಾಗಿದ್ದು ವ್ಯಜನದಂತೆ ಸರ್ವದಾ ಬೀಸುತ್ತಿರುವುದೋ, ಅಂಕುಶದೇಟನ್ನು ಯಾವುವು ಸಹಿಸಬಲ್ಲುವೋ ಅವು ಶ್ರೇಷ್ಠಗಜಗಳು. ಹಾಗಲ್ಲದೆ ಯಾವ ಆನೆಗಳು ಕುಳ್ಳಾಗಿದ್ದು ಮೈಯೆಲ್ಲಾ ತಿಗಣೆ ಸೇರಿಕೊಂಡಿರುವುವೋ ಅವು ಅವಲಕ್ಷಣದ ಆನೆಗಳೆಂದು ತಿಳಿ.

೭-೮. ಹೆಣ್ಣಾನೆಗಳು ಗರ್ಭವನ್ನು ಧರಿಸಿದ್ದರೆ, ಮೂಢಸ್ವಭಾವದಿಂದಿದ್ದರೆ, ಒಳಗಿನ ಹಲ್ಲು ಉತ್ತಮವಾಗಿದ್ದರೆ ಉತ್ತಮವೆನಿಸುವುವು. ಹಾಗಲ್ಲದೆ ಯಾವ ಹೆಣ್ಣಾನೆಗೆ ಹುಳುಕುಹಲ್ಲಿದ್ದು, ಎಡಗಡೆ ಸುಳಿಯಿದ್ದು, ಸರ್ವದಾ ಕಣ್ಣೀರನ್ನು ಸುರಿಸುತ್ತಿದ್ದು, ವಿಕಟಾಕಾರವಾಗಿದ್ದು, ಶಠಸ್ವಭಾವದವುಗಳಾಗಿದ್ದರೆ ಅವುಗಳನ್ನು ಬಿಟ್ಟು ಬಿಡಬೇಕು.

## ರಾಮ ಉವಾಚ

ವಾಮನಾದ್ಯಾಶ್ಚ ಯೇ ನಾಗಾಃ ಪ್ರೋಕ್ತಾ ನಿಂದಿತಲಕ್ಷಣಾಃ ।
ತೇಷಾಂ ತು ಶ್ರೋತುಮಿಚ್ಛಾಮಿ ಲಕ್ಷಣಂ ವರುಣಾತ್ಮಜ ॥ ೯ ॥

## ಪುಷ್ಕರ ಉವಾಚ

ಆಯಾಮೇನ ನ ಸಂಪೂರ್ಣೋ ಯೋऽತಿ ಹ್ರಸ್ವೋ ಭವೇದ್ಗಜಃ ।
ವಾಮನಸ್ತು ಸಮಾಖ್ಯಾತೋ ನುತ್ಕುಣೋ ದಂತವರ್ಜಿತಃ ॥ ೧೦ ॥

ದಶಾಂ ಚತುರ್ಥೀಂ ಸಂಪ್ರಾಪ್ಯ ವರ್ಧತೇ ಯಸ್ಯ ನ ದ್ವಿಜೌ ।
ಸ್ಥೂಲಾವನಾಯತೌ ಸ್ಯಾತಾಂ ಸ ಮೂಢಾಖ್ಯೋ ಗಜಾಧಮಃ ॥ ೧೧ ॥

ಅಪಾಕಲೋ ವಿಶಾಲೇನ ದಂತೇನೈಕೇನ ವಾರಣಃ ।
ಸಂಕ್ಷಿಪ್ತವಕ್ಷೋ ಜಘನಃ ಪೃಷ್ಠಮಧ್ಯಸಮುನ್ನತಃ ॥ ೧೨ ॥

---

೯. ಪರಶುರಾಮನು ಪ್ರಶ್ನೆಮಾಡುತ್ತಾನೆ ;—ಅಯ್ಯಾ ! ಪುಷ್ಕರ ! ಕುಳ್ಳಾಗಿ, ತಿಗಣೇ ಸೇರಿ, ಎತ್ತರವಾಗಿ ಬೆಳೆಯದೆ ಬಹು ಹ್ರಸ್ವವಾಗಿರುವ, ಎಷ್ಟು ವಯಸ್ಸಾದರೂ ಹಲ್ಲೇ ಬೆಳೆಯದಿರುವ ಆನೆಯ ಲಕ್ಷಣವೇನು ? ಹೇಳಯ್ಯಾ !

೧೦-೧೨. ನೀನೀಗ ಏನೇನು ಲಕ್ಷಣಗಳುಳ್ಳ ಅಧಮಗಜದ ವಿಚಾರವನ್ನು ಕೇಳಿದೆಯೋ, ಅಂತಹ ಆನೆಯ ಸ್ವರೂಪವನ್ನು ಹೇಳುತ್ತೇನೆ, ಕೇಳಯ್ಯಾ ! ಪರಶುರಾಮ ! ಯಾವ ಆನೆಯು ಬಹು ದಪ್ಪನಾಗಿದ್ದು ಅಗಲವಾಗಿ ಬೆಳೆದಿರುವುದಿಲ್ಲವೋ ಅಂತಹ ಮುದ್ದೆಯಾದ ಆ ಗಜಕ್ಕೆ ಮೂಢಗಜವೆಂದು ಹೆಸರು. ಮತ್ತಾವ ಆನೆಯು ವಿಸ್ತಾರವಾಗಿಯೂ ಎತ್ತರವಾಗಿಯೂ ಇಲ್ಲದೆ, ಒಂದೇ ಕೊಂಬಿನಿಂದ ಕೂಡಿರುವುದೋ ಕುಂಭಸ್ಥಳ, ಸೊಂಟ, ಬೆನ್ನು, ಇವು ಉಕ್ತಪ್ರಮಾಣಕ್ಕಿಂತ ಕಡಿಮೆಯಾಗಿರುವುವೋ, ಪ್ರಮಾಣಹೀನವಾದ ನಾಭಿಯುಳ್ಳವಾವುವೋ ಆ ಕುಬ್ಜಗಜಗಳು ಗಜಾಧಮಗಳೆನಿಸಿಕೊಳ್ಳುವುವು.

ಪ್ರಮಾಣಹೀನತನ್ನಾಭಿಃ ಸ ಕುಬ್ಜೋ ವಾರಣಾಧಮಃ ।
ಅತ್ಯುನ್ನತಾಂಸಃ ಸದ್ದಂತಃ ಕುದಂತಃ ಸ್ಯಾನ್ನತೋ ಬಹಿಃ ॥ ೧೩ ॥

ವಾಮದಂತೋನ್ನತೋ ನಾಗೋ ವಾಮಕೂಟಶ್ಚ ಕಥ್ಯತೇ ।
ದಂತೌ ವಕ್ತ್ರಸ್ಪೃಶೌ ಯಸ್ಯ ಸೋಽಸ್ರುಸ್ಪೃಕ್ ಕಥಿತೋ ಗಜಃ ॥ ೧೪ ॥

ಏಕದಂತಸ್ತಥಾ ನಾಗಃ ಕೂಟಇತ್ಯಭಿಧೀಯತೇ ।
ಪಾದಯೋಃ ಸನ್ನಿಕರ್ಷಃ ಸ್ಯಾದ್ಯಸ್ಯ ನಾಗಸ್ಯ ಗಚ್ಛತಃ ॥ ೧೫ ॥

ಸ ಶಠೋಧ್ವನಿ ಯುದ್ಧೇ ಚ ಲಕ್ಷಣಜ್ಞೈರ್ನ ಪೂಜಿತಃ ।
ಅರತ್ನ್ಯಭ್ಯಧಿಕಂ ಯಸ್ಯ ವಿಸ್ತರೇಣ ಸ್ತನಾಂತರಂ ॥ ೧೬ ॥

ವಿಕಟಃ ಸ ವಿನಿರ್ದಿಷ್ಟೋ ದುರ್ಗತಿರ್ನಿಂದಿತೋ ಗಜಃ ।

ರಾಮ ಉವಾಚ

ಶ್ರೋತುಮಿಚ್ಛಾಮಿ ಧರ್ಮಜ್ಞ ಕುಂಜರಂ ಸಪ್ತಸುಸ್ಥಿತಂ ॥ ೧೭ ॥
ಯಂ ಪ್ರಾಪ್ಯ ಕಿಲ ರಾಜಾನೋ ಜಯಂತಿ ವಸುಧಾಂ ನೃಪಾಃ ।

---

೧೩. ಅತ್ಯುನ್ನತವಾದ ಕುಂಭಸ್ಥಳದಿಂದ ಕೂಡಿ, ಒಳ್ಳೇ ಕೊಂಬಿರುವ, ಒಳಗೆ ಕೆಟ್ಟ ಹಲ್ಲಿದ್ದರೂ ಹೊರಕ್ಕೆ ಅಂದವಾಗಿ ತೋರುವ, ಎಡಕೊಂಬು ಸ್ವಲ್ಪ ಎತ್ತರವಾಗಿರುವ ಆನೆಗೆ ವಾಮಕೂಟಗಜವೆಂದು ಹೆಸರು.

೧೪. ಯಾವ ಆನೆಯ ಕೊಂಬುಗಳು ಮುಖಕ್ಕೆ ತಗುಲಿಕೊಂಡು (ಸೋಕಿ) ಇರುವುದೋ ಅದನ್ನು ಅಸ್ರುಸ್ಪೃಗ್ಗಜವೆಂದು ಹೆಸರು.

೧೫-೧೬. ಒಂದು ಕೊಂಬಿನ ಆನೆಗೆ ಕೂಟನಾಗವೆಂದು ಹೆಸರು. ಯಾವ ಆನೆ ನಡೆಯುತ್ತಿರುವಾಗ ಒಂದು ಕಾಲಿಗೆ ಇನ್ನೊಂದು ಕಾಲು ಸೋಕುವುದೋ ಅದು ಶಠಗಜವೆನಿಸುವುದು. ಯುದ್ಧದಲ್ಲಿ ಅದು ಚಲಿಸಲಾರದು. ಗಜಲಕ್ಷಣವನ್ನರಿತವರು ಇಂತಹ ಆನೆಗೆ ಗೌರವಕೊಡುವುದಿಲ್ಲ. ಒಂದು ಮೊಳಕ್ಕಿಂತ ಹೆಚ್ಚು ಅಗಲತೆಯುಳ್ಳ ಸ್ತನವುಳ್ಳ ಆನೆಗೆ ವಿಕಟಗಜವೆಂದು ಹೆಸರು. ಅದು ನಿಂದಿತವಾದ ಗಜವೆನಿಸಿಕೊಳ್ಳಲ್ಪಡುವುದು.

೧೭. ಪರಶುರಾಮನು ಕೇಳುತ್ತಾನೆ:—ಏಳು ಲಕ್ಷಣವನ್ನು ಹೊಂದಿದ ಆನೆಯು ಬಹು ಶ್ರೇಷ್ಠವೆಂದೂ, ಅಂತಹ ಲಕ್ಷಣವುಳ್ಳ ಆನೆಗಳು ಯಾವ ರಾಜರ ಬಳಿ

## ಪುಷ್ಕರ ಉವಾಚ

**ವರ್ಣಂ ಸತ್ತ್ವಂ ಬಲಂ ರೂಪಂ ಕಾನ್ತಿಸ್ಸಂಹನನಂ ಜವಂ ॥**
**ಸಪ್ತೈತಾನಿ ಸದಾ ಯಸ್ಯ ಸ ಗಜಃ ಸಪ್ತಸುಸ್ಥಿತಃ ॥ ೧೮ ॥**

**ಯೇಷಾಂ ಭವೇದ್ದಕ್ಷಿಣಪಾರ್ಶ್ವಭಾಗೇ**
**ರೋಮ್ಣಾಂ ಚ ಪುಂಜಃ ಪಿಟಕೋಥವಾಪಿ ।**
**ತೇ ನಾಗಮುಖ್ಯಾ ವಿಜಯಾಯ ಯುದ್ಧೇ**
**ಭವಂತಿ ರಾಜ್ಞಾಂ ನ ಹಿ ಸಂಶಯೋಽತ್ರ ॥ ೧೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಹಸ್ತಿಲಕ್ಷಣಂ ನಾಮ ದಶಮೋಽಧ್ಯಾಯಃ**

---

ಇರುವುದೋ ಅಂತಹ ರಾಜರು ಸಕಲಲೋಕವನ್ನೂ ಜಯಿಸಬಲ್ಲರೆಂದೂ ಕೇಳಿದೇನೆ. ಅಂತಹ ಲಕ್ಷಣಗಳಾವುವು. ತಿಳಿಸು.

೧೮. ಪುಷ್ಕರನು ಹೇಳುತ್ತಾನೆ:—ಬಣ್ಣ, ಬಲ, ಮುಖಕಾಂತಿ, ಸೌಂದರ್ಯ, ಕಾಂತಿ, ಧೈರ್ಯ, ವೇಗ, ಈ ಏಳು ಲಕ್ಷಣಗಳುಳ್ಳ ಆನೆಗೆ ಗಜೋತ್ತಮವೆಂದು ಹೆಸರು. ನೀನು ಕೇಳಿದ ಏಳು ಗುಣಗಳೂ ಇವೇ ಎಂದು ತಿಳಿ.

೧೯. ಯಾವ ಆನೆಗಳ ಎಡಬಲ ಭಾಗಗಳಲ್ಲಿ ಬೆಳೆದಿರುವ ಕೂದಲುಗಳು ಗುಂಪುಗುಂಪಾಗಿ ಕಠಿಣವಾಗಿರುವುವೋ, ಅಂತಹ ಆನೆಗಳು ಯುದ್ಧರಂಗದಲ್ಲಿ ವಿಜಯುವನ್ನುಂಟುಮಾಡುವುದರಲ್ಲಿ ಸಂಶಯವಿಲ್ಲವೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಗಜಲಕ್ಷಣವೆಂಬ ಹೆಸರಿನ ಹತ್ತನೆಯ ಅಧ್ಯಾಯ ಮುಗಿಯಿತು.

॥ ಶ್ರೀ ॥

ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಏಕಾದಶೋಽಧ್ಯಾಯಃ

ಪುಷ್ಕರ ಉವಾಚ

ಅಶ್ವಾನಾಮೃಷಿಭಿಃ ಪ್ರೋಕ್ತಾ ಮಹಾದೋಷಾ ಭೃಗೂತ್ತಮ ।
ಯೈರನ್ವಿತಾ ಪರಿತ್ಯಾಜ್ಯಾಸ್ತನ್ಮೇ ನಿಗದತಃ ಶೃಣು ॥ ೧ ॥

ಹೀನದಂತೋ ದ್ವಿದಂತಶ್ಚ ಕರಾಲೀ ಕೃಷ್ಣತಾಲುಕಃ ।
ಕೃಷ್ಣ ಜಿಹ್ವಶ್ಚ ಯಮಜೋ ಜಾತಮುಷ್ಕಶ್ಚ ಯಸ್ತಥಾ ॥ ೨ ॥

ದ್ವಿಶಫಶ್ಚ ತಥಾ ಶೃಂಗೀ ನೃವರ್ಣೋ ವ್ಯಾಘ್ರವರ್ಣಕಃ ।
ಖರವರ್ಣೋ ಭಸ್ಮವರ್ಣೋ ಜಾತವರ್ಣಶ್ಚ ಕಾಕುದೀ ॥ ೩ ॥

---

## ಹನ್ನೊಂದನೆಯ ಅಧ್ಯಾಯವು.

೧. ಪುಷ್ಕರನು ಹೇಳುತ್ತಾನೆ:—ಹಿಂದಿನ ಕಾಲದ ಮಹರ್ಷಿಗಳು ಕುದುರೆಯ ಲಕ್ಷಣವನ್ನು ತಿಳಿಸಿರುವ ಕ್ರಮವನ್ನು ನಿನಗೀಗ ವಿವರಿಸುವೆನು, ಕೇಳಯ್ಯ! ನಾನು ಮುಂದೆ ಹೇಳುವ ಮಹತ್ತರವಾದ ದೋಷಗಳಿಂದ ಯುಕ್ತವಾದ ಕುದುರೆಗಳನ್ನು ಖಂಡಿತವಾಗಿ ಬಿಟ್ಟುಬಿಡಬೇಕು.

೨-೩. ಯಾವ ಕುದುರೆಯು ಹೀನದಂತದಿಂದಲೂ ದ್ವಿದಂತದಿಂದಲೂ ಕೂಡಿರುವುದೋ, ಯಾವ ಕುದುರೆ ಕಪ್ಪಾಗಿ ಕಪ್ಪಾದ ಅಂಗ(ಕಾಲು)ಗಳಿಂದ ಕೂಡಿರುವುದೋ, ಯಾವುದರ ನಾಲಿಗೆ ಕಪ್ಪಾಗಿರುವುದೋ, ಯಾವುದರ ವೃಷಣಗಳು ದಪ್ಪವೋ. ಯಾವುದಕ್ಕೆ ಕೊಂಬುಗಳು ಹುಟ್ಟಿರುವುವೋ, ಯಾವ ಕುದುರೆ ಮನುಷ್ಯವರ್ಣ, ಹುಲಿಯವರ್ಣ, ಕತ್ತೆಯಬಣ್ಣ, ಬೂದಿಬಣ್ಣ ಮುಂತಾದುವುಗಳಿಂದ ಕೂಡಿರುವುದೊ ;

 

ಶ್ವಿತ್ರೀ ಚ ಕಾಕಸಾದೀ ಚ ಖರಶಾರಸ್ತಥೈವ ಚ ।
ವಾನರಾಖ್ಯಃ ಕೃಷ್ಣಸಟಃ ಕೃಷ್ಣಮುಷ್ಕಸ್ತಥೈವ ಚ ॥ ೪ ॥

ಕೃಷ್ಣಪ್ರೋಥಶ್ಚ ಮೂಕಶ್ಚ ಯಶ್ಚ ತಿತ್ತಿರಸನ್ನಿಭಃ ।
ವಿಷಮಶ್ವೇತಪಾದಶ್ಚ ಧ್ರುವಾವರ್ತವಿವರ್ಜಿತಃ ॥ ೫ ॥

ಅಶುಭಾವರ್ತಸಂಯುಕ್ತೋ ವರ್ಜನೀಯಸ್ತುರಂಗಮಃ ।

ರಾಮ ಉವಾಚ

ವಾಜಿನಾಂ ಕೇ ಧ್ರುವಾವರ್ತಾಃ ಕೇಷು ಸ್ಥಾನೇಷು ಶೋಭನಾಃ ।
ವಾಜಿನಃ ಕೇ ತದಾ ಶಸ್ತಾಸ್ತನ್ಮಮಾಚಕ್ಷ್ವ ಪೃಚ್ಛತಃ ॥ ೬ ॥

ಪುಷ್ಕರ ಉವಾಚ

ರಂಧ್ರೋಪರಂಧ್ರಯೋರ್ದ್ವೌದ್ವೌ ದ್ವೌದ್ವೌ ಮಸ್ತಕವಕ್ಷಸೋಃ ।
ಪ್ರಮಾಣೇ ಚ ಲಲಾಟೇ ಚ ಧ್ರುವಾವರ್ತಾ ದಶ ಸ್ಮೃತಃ ॥ ೭ ॥

---

೪-೫. ಯಾವ ಕುದುರೆಗೆ ತೊನ್ನು ಹತ್ತಿರುವುದೋ, ಕಾಗೆಯ ಬಣ್ಣದಂತಿರುವುದಾವುದೋ, ಕತ್ತೆಯ ಹಾಗೆ ಯಾವುದು ಕಿರುಚುವುದೋ, ಕಪಿಮುಖದಂತೆ ಯಾವ ಕುದುರೆ-ಯಿರುವುದೋ; ಕರೀ ಜವೆ, ಕರೀ ಬೀಜ, ಕಪ್ಪಾದ ಹೆಗಲು, ತಿತ್ತಿರ ಪಕ್ಷಿಯಂತೆ ಬಣ್ಣ, ಎಡಗಡೆ ಬಂದಿರುವ (ಹೀನ) ಸುಳಿ, ವಿಷಮ(ಬೆಸವಾದ) ಬಿಳೀ ಬಣ್ಣದ ಕಾಲುಗಳು, ನೋಡುವುದಕ್ಕೆ ಅವಲಕ್ಷಣವಾಗಿರುವುದು, ಇಂತಹ ಲಕ್ಷಣಗಳುಳ್ಳ ಕುದುರೆಗಳನ್ನು ತ್ಯಾಗಮಾಡಿಬಿಡಬೇಕು.

೬. ಪರಶುರಾಮನು ಪ್ರಶ್ನೆಮಾಡುತ್ತಾನೆ:—ಅಯ್ಯಾ! ಪುಷ್ಕರ! ನೀನು ಇದುವರಿಗೆ ಲಕ್ಷಣಹೀನವಾದ ಅಶ್ವಗಳ ವಿಚಾರವನ್ನು ಹೇಳಿದೆಯಷ್ಟೆ! ಇಂತಹ ಅವಲಕ್ಷಣಗಳುಳ್ಳ ಕುದುರೆಗಳನ್ನು ಬಿಟ್ಟು, ಒಳ್ಳೆ ಶುಭಲಕ್ಷಣಗಳುಳ್ಳ ಬಲಗಡೆ ಸುಳಿಯಿರುವ ಮಂಗಳಕರವಾದ ಕುದುರೆಗಳ ಲಕ್ಷಣವನ್ನೀಗ ತಿಳಿಸಬೇಕು.

೭. ಪುಷ್ಕರನು ಹೇಳುತ್ತಾನೆ:—ಕತ್ತು ಮತ್ತು ಹೆಗಲುಗಳ ಮೇಲೆ ಎರಡೆರಡಾಗಿ ಒಂದು ಸಣ್ಣರಂಧ್ರ, ಒಂದು ಅದಕ್ಕಿಂತ ಸಣ್ಣರಂಧ್ರ ಹೀಗೆ ಜೋಡಿಜೋಡಿಯಾಗಿ ರಂಧ್ರಗಳಿರುವ ಕುದುರೆಯೂ, ಹಣೆಯ ಮೇಲೆ ಬಲಗಡೆ ಸುತ್ತಿಸುತ್ತಿಕೊಂಡಿರುವ ಒಂದೇ ಪ್ರಮಾಣವುಳ್ಳ ಹತ್ತು ಸುಳಿಗಳೂ ಇರುವ ಕುದುರೆಯು ಉತ್ತಮವು.

ಏಕೋಽಪಿ ನ ಭವೇದ್ಯಸ್ಯ ಧ್ರುವಾವರ್ತಸ್ತು ವಾಜಿನಃ ।
ನ ತಂ ಶಂಸಂತಿ ಧರ್ಮಜ್ಞಾ ತಸ್ಮಾತ್ತಂ ಪರಿವರ್ಜಯೇತ್ ॥ ೮ ॥

ಉತ್ತರೇಷು ಭೃಗುಶ್ರೇಷ್ಠ ಪ್ರಮಾಣಸ್ಯ ತಥೋಽಪರಿ ।
ನಾಸಾಪುಟೇ ತಥಾ ಪ್ರೋಥೇ ಗಂಡಪ್ರೋಥಾಕ್ಷಿಮಧ್ಯಗಃ ॥ ೯ ॥

ಕಥಯೋರಶ್ರುಪಾತೇನ ಭ್ರುವೋಃ ಕಂಠಾಗ್ರಯೋಸ್ತಥಾ ।
ನಾಭ್ಯಾಂ ಹನುಬಲಾ ಕಕ್ಷಾ ಸ್ಕಂಧೋಪಸ್ಕಂಧಸಂಧಿಷು ॥ ೧೦ ॥

ವಿದೋ ಬಾಹುಪ್ರದೇಶೇ ಚ ಗಲಮಧ್ಯೇ ತಥೈವ ಚ ।
ಆಸನೇ ಕಕುದೇ ಪ್ರೋಥೆ ಜಾನುಜಂಘಾಸು ಭಾರ್ಗವ ॥ ೧೧ ॥

ಕುಕ್ಷಿಕಾನಾಭಿಕಕ್ಷಾಸು ಮುಷ್ಕಯೋರ್ಮೂತ್ರದೇಶಜಃ ।
ತ್ರಿಕೇ ಚ ಮೂಲಪುಚ್ಛೇ ಚ ಉಪರಿ ಸ್ಫೂಣಯೋಸ್ತಥಾ ॥ ೧೨ ॥

ಪಿಂಡಯೋರ್ಜಠರೇ ಚೈವ ಸೀವನೀಯೋಪಕುಕ್ಷಿಷು ।
ಆವರ್ತೈರ್ವರ್ಜನೀಯಾಃ ಸ್ಯುಃ ಪ್ರಯತ್ನೇನ ತುರಂಗಮಾಃ ॥ ೧೩ ॥

---

೮. ಹೀಗೆ ಇರುವುದಕ್ಕೆ ಬದಲಾಗಿ ಯಾವ ಕುದುರೆಗೆ ಬಲಗಡೆಯಾಗಿ ಸುತ್ತಿಕೊಂಡಿರುವ ಒಂದೇ ಒಂದಾದರೂ ಸುಳಿಯು ಇರುವುದಿಲ್ಲವೋ, ಅದನ್ನು ತಿಳಿದವರು ಖಂಡಿತವಾಗಿ ಬಿಟ್ಟುಬಿಡಬೇಕೆಂದು ಹೇಳಿರುತ್ತಾರೆ.

೯. ಪರಶುರಾಮ! ಒಳ್ಳೇ ಕುದುರೆಗಳ ಲಕ್ಷಣವನ್ನು ಸ್ವಲ್ಪ ತಡೆದು ಹೇಳುತ್ತೇನೆ, ಈಗ ಸ್ವಲ್ಪ-ಹೊತ್ತು ಹೀನಾಶ್ವಗಳ ವಿಷಯವನ್ನು ಹೇಳುತ್ತೇನೆ, ಕೇಳು. ಬಲದವಡೆಯ ಪ್ರಮಾಣಕ್ಕಿಂತ ಮೂಗಿನ ಹೊಳ್ಳೆಯಿಂದಲೂ, ಮುಸುಡಿ, ಸೊಂಟ, ಕಣ್ಣಿನ ಮಧ್ಯೆ ಎರಡು ಪಕ್ಕಗಳಿಂದ ನೀರುಸುರಿಸುವ ಕುದುರೆಯು ಒಳ್ಳೆಯದಲ್ಲ.

೧೦-೧೧. ಹುಬ್ಬು, ಕತ್ತಿನ ತುದಿ, ಕೆನ್ನೆ, ಕಂಕುಳು, ಕತ್ತಿನ ಸಂದಿಗಳು, ಬಾಹುಪ್ರದೇಶ, ಕತ್ತಿನ ಮಧ್ಯ, ಹಿಂಭಾಗ, ಮೊಳಕಾಲು ಸಂದಿಗಳು,

೧೨-೧೩. ಹೊಕ್ಕಳಿನ ಭಾಗಗಳು, ವೃಷಣಗಳೆರಡು, ಶಿಶ್ನ, ಬೆನ್ನು, ಬಾಲ, ಹೊಟ್ಟೆ, ಕಿಬ್ಬೊಟ್ಟೆಯೇ ಮುಂತಾದ ಸಕಲಾವಯವ-ಸಂಧಿಗಳಲ್ಲಿಯೂ ಕುದುರೆಗಳಿಗೆ ಬಲಗಡೆ ಸುಳಿಗಳು ಇರಲೇ ಬೇಕು. ಹೀಗಿರದೆ ಯಾವ ಕುದುರೆಗಳು ಹೀನ ಸುಳಿಯಿಂದ ಕೂಡಿರುವುವೋ ಅವುಗಳನ್ನು ತ್ಯಾಗಮಾಡಿಬಿಡಬೇಕು.

**ಕಕುದೇ ಕರ್ಣಯೋಶ್ಚೈವ ಯಸ್ಯಾವರ್ತಃ ಕುವಾಜಿನಃ ।**
**ಅತ್ಯನ್ತಮಪ್ರಶಸ್ತಂ ತಂ ರಾಜಾ ರಾಷ್ಟ್ರಾದ್ವಿವಾಸಯೇತ್ ॥ ೧೪ ॥**

**ಹಸ್ತಿದೇವಮಣಿಃ ಸರ್ವಂ ಪೂರ್ವಕಾಯೇಷು ಲಕ್ಷಣಃ ।**
**ಸುವ್ಯಕ್ತೋ ರೋಚಮಾನೋ ವಾ ನ ತು ಕಾಕುದಿನಂ ಕ್ವಚಿತ್ ॥ ೧೫ ॥**

**ಮೇಖಲಾ ವಾಪ್ಯಧಃಕಾಯಾದ್ಧನ್ಯಾದಾವರ್ತಸಂಭವಂ ।**
**ದೋಷಾನ್ಸರ್ವಾಂಸ್ತುರಂಗಸ್ಯ ನ ಹನ್ಯಾತ್ಕಾಕಸಾದಿನಂ ॥ ೧೬ ॥**

**ಅತಃ ಪರಂ ಪ್ರವಕ್ಷ್ಯಾಮಿ ಶುಭಮಾವರ್ತಲಕ್ಷಣಂ ।**
**ಸೃಕ್ಕಿಣ್ಯೋಶ್ಚ ಲಲಾಟೇಚ ತಥಾ ಶ್ರವಣಮೂಲಯೋಃ ॥ ೧೭ ॥**

**ನಿಗಾಲೇ ಚ ತಥಾ ಕಂಠೇ ಸ್ತುತಕೇಶಾನ್ತಯೋಸ್ತಥಾ ।**
**ಬಾಹುಮೂಲೇ ತಥಾ ಶಸ್ತಾ ರೋಮಜಾತಾಸ್ತುರಂಗಮಾಃ ॥ ೧೮ ॥**

**ಆವರ್ತಸ್ತು ನಿಗಾಲಸ್ಥೋ ಜ್ಞೇಯೋ ದೇವಮಣಿಃ ಶುಭಃ ।**
**ಕಂಠಜೋ ರೋಚಮಾನಶ್ಚ ಸರ್ವಾವರ್ತೋ ಜನಾಧಿಪಃ ॥ ೧೯ ॥**

---

೧೪. ಯಾವ ಕೆಟ್ಟ ಕುದುರೆಗೆ ಎರಡು ಕಿವಿ, ಎರಡು ಪಕ್ಕಗಳಲ್ಲಿ ಒಳ್ಳೇ ಸುಳಿಯಿದ್ದರೂ ಪ್ರಯೋಜನವಿಲ್ಲ. ಅವುಗಳನ್ನು ಊರು ಬಿಟ್ಟೋಡಿಸಿ-ಬಿಡಬೇಕು.

೧೫. ಅತ್ಯಂತ ಪ್ರಶಸ್ತವಾದ ಕುದುರೆಯೂ ಪೂರ್ವಾವಯವ(ಮುಂಭಾಗ)ದಲ್ಲಿ ಲಕ್ಷಣವಾಗಿಯೂ, ಒಳ್ಳೇ ಕಾಂತಿಯಿಂದ ಕೂಡಿದುದಾಗಿಯೂ ಇರುವುದು.

೧೬. ಸೊಂಟ, ಅದರ ಕೆಳಭಾಗದಲ್ಲಿ ಸುಳಿಗಳಿದ್ದರೆ ಪ್ರಯೋಜನವಿಲ್ಲ. ಇವೆಲ್ಲವೂ ದೋಷಯುಕ್ತವಾದ ಕುದುರೆಗಳೆಂದರಿಯಬೇಕು.

೧೭. ಶುಭಕರವಾದ ಆವರ್ತ(ಸುಳಿ)ಗಳುಳ್ಳ ಕುದುರೆಗಳಿವು:—ಹಣೆ, ಕಿವಿಗಳು, ಕತ್ತಿನ ಭಾಗಗಳಲ್ಲಿ ಕೇಶಾಂತ್ಯಗಳಲ್ಲಿ, ಬಾಹುಮೂಲಗಳಲ್ಲಿ ಚೆನ್ನಾಗಿ ಕೂದಲುಗಳು ಬೆಳೆದಿದ್ದರೆ ಅವು ಒಳ್ಳೆಯವು.

೧೮-೧೯. ಗಳ ಪ್ರದೇಶದಲ್ಲಿ ಆವರ್ತಗಳನ್ನುಳ್ಳ ಕುದುರೆಗಳು ಶುಭಕರವಾದ ದೇವರತ್ನಗಳೆಂದು ತಿಳಿಯಬೇಕು, ಕತ್ತಿನ ಸುತ್ತಲೂ ಸುಳಿ ಇರುವ ಕುದುರೆಗಳಂತೂ ಬಹಳ ಉತ್ತಮವಾದುವುಗಳು.

ಅರ್ಕೇಂದ್ರಗೋಪಚಂದ್ರಾಭಾ ಯೇ ಚ ವಾಯಸಸನ್ನಿಭಾಃ ।
ಸುವರ್ಣವರ್ಣಾಃ ಸ್ನಿಗ್ಧಾಶ್ಚ ಪ್ರಶಸ್ಯಂತೇ ಸದೈವ ತೇ　　॥ ೨೦ ॥

ದೀರ್ಘ ಗ್ರೀವಾಕ್ಷಕೂಟಾಶ್ಚ ಹ್ರಸ್ವವರ್ಣಾಶ್ಚ ಯೇ ತಥಾ ।
ಹ್ರಸ್ವಪ್ರೋಥಾಶ್ಚ ಶಸ್ಯಂತೇ ಮೇಘೌಘಸದೃಶಸ್ವನಾಃ ।
ಪೃಥೂರು ಪಾದಜಘನಾ ಮುಖಪುಂಡ್ರಾಶ್ಚ ವೈ ಹಯಾಃ　　॥ ೨೧ ॥

ಚಂದ್ರಾಂಶು ಶುಕ್ಲಾಸ್ತುರಗಾಃ ಪ್ರಶಸ್ತಾಃ
ಕರ್ಣಾಂತಕೇಶೈರ್ಗವಲಾಲಿ ವರ್ಣೈಃ ।
ಯೇ ರಕ್ತವರ್ಣಾಶ್ಚ ಸಮುಗ್ರಪಾದೈಃ ।
ಶುಕ್ಲಾಶ್ಚ ವರ್ಣೈಶ್ಚ ಮಹಾನುಭಾವಾಃ　　॥ ೨೨ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಶ್ವಲಕ್ಷಣಂ ನಾಮ
ಏಕಾದಶೋಽಧ್ಯಾಯಃ

---

೨೦. ಸೂರ್ಯಚಂದ್ರರ ಕಾಂತಿಯಂತೆಯೂ, ಸುವರ್ಣ ಕಾಂತಿಯಂತೆಯೂ, ನೋಡುವುದಕ್ಕೆ ಬಲು ಮುದ್ದಾಗಿಯೂ ಇರುವ ಕುದುರೆಗಳು ಯಾವಾಗಲೂ ಪ್ರಶಸ್ತವಾದುವುಗಳು.

೨೧. ಉದ್ದವಾದ ಕತ್ತು, ದೀರ್ಘವಾದ ಕಣ್ಣು, ಹ್ರಸ್ವವರ್ಣ, ಸಣ್ಣಸೊಂಟ, ಗುಡುಗಿನ ಸದ್ದಿನಂತೆ ಹೇಷಾರವ ಮಾಡುತ್ತಿರುವ ಕುದುರೆ, ದಪ್ಪತೊಡೆ, ದಪ್ಪಕಾಲು, ದಪ್ಪಸೊಂಟ, ದೊಡ್ಡಮೂತಿಗಳುಳ್ಳ ಕುದುರೆಗಳೂ ಸಹ ಒಳ್ಳೆ ಜಾತಿಯ ಕುದುರೆಗಳೆನಿಸುವುವು.

೨೨. ಬೆಳದಿಂಗಳಂತೆ ಪ್ರಕಾಶಿಸುತ್ತಿರುವ ಕುದುರೆಗಳೂ, ಆಕರ್ಣಾಂತವಾಗಿ ಕೇಶಗಳಿಂದ ಕೂಡಿದ ಶುಭ್ರವರ್ಣದ ಕುದುರೆಗಳೂ, ಸಮುಸಮನಾದ ಕಾಲುಗಳುಳ್ಳ ಕೆಂಪುಬಣ್ಣದ ಕುದುರೆಗಳೂ, ಹಾಗೂ ಬಿಳೀ ಕುದುರೆಗಳೂ ಸಹ ಪ್ರಶಸ್ತವಾದುವುಗಳೆಂದು ತಿಳಿಯಬೇಕೆಂದು ಪುಷ್ಕರನು ಪರಶುರಾಮುನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಅಶ್ವಲಕ್ಷಣವೆಂಬ ಹೆಸರಿನ
ಹನ್ನೊಂದನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ದ್ವಾದಶೋಽಧ್ಯಾಯಃ

### ಪುಷ್ಕರ ಉವಾಚ

**ಚಮರೀವಾಲಸಂಭೂತಾಃ ಶಶಾಂಕಾಂಶುಸಮಪ್ರಭಾಃ ।**
**ಸಂಹತಾಃ ಸ್ನಿಗ್ಧದೀರ್ಘಾಶ್ಚ ತಥಾ ಸ್ಥಾಲಿನಿಬಂಧನಾಃ ॥ ೧ ॥**

**ದಂಡಶ್ಚ ಚಾಮರೇ ಕಾರ್ಯೋ ರುಕ್ಮರೂಪ್ಯಮಯಸ್ತಥಾ ।**
**ಪ್ರವಾಲ ವೈಡೂರ್ಯಮಯಸ್ತಥೈವ ಕನಕಾನ್ವಿತಃ ॥ ೨ ॥**

---

## ಹನ್ನೆರಡನೆಯ ಅಧ್ಯಾಯವು.

೧. ಪುಷ್ಕರನು ಹೇಳುತ್ತಾನೆ:—ಇನ್ನು ಮುಂದೆ ರಾಜರ ಬಳಿ ಇರಬೇಕಾದ ರಾಜಾರ್ಹವಾದ ಚಾಮರಗಳ ಲಕ್ಷಣವನ್ನು ಹೇಳುತ್ತೇನೆ, ಕೇಳು. ಚಮರೀಮೃಗದ ಬಾಲದಿಂದಲೇ ಚಾಮರವನ್ನು ಮಾಡಬೇಕು. ಈ ಚಾಮರಗಳು ಚಂದ್ರಕಿರಣದಂತೆ ಶುಭ್ರವಾದ ಕಾಂತಿಯಿಂದ ಕೂಡಿರಬೇಕು. ಒಂದಕ್ಕೊಂದು ಹೊಂದಿಕೊಂಡಿರಬೇಕು. ಮನೋಹರವಾಗಿಯೂ ಉದ್ದವಾಗಿಯೂ ಇರಬೇಕು. ಒಂದು ಸ್ಥಾಲಿಯಿಂದ ಕಟ್ಟಲ್ಪಟ್ಟಿರಬೇಕು.

೨. ಈರೀತಿ ಒಂದು ಸ್ಥಾಲಿಯಿಂದ ಕಟ್ಟಲ್ಪಟ್ಟ ಹಿಡಿಯುಳ್ಳದ್ದಾಗಿರಬೇಕು. ಹಿಡಿದುಕೊಳ್ಳುವ ಹಿಡಿಯ ದಂಡವನ್ನು ಚಿನ್ನದಿಂದಾಗಲೀ ಬೆಳ್ಳಿಯಿಂದಾಗಲಿ ಮಾಡಿಸಬೇಕು. ಆ ಚಿನ್ನದ ಹಿಡಿಗೆ ಹವಳ ವೈಡೂರ್ಯಾದಿಗಳನ್ನು ಕೆತ್ತಿರಬೇಕು.

**ಕ್ಷೀರವೃಕ್ಷಸ್ಯ ವಾ ಕಾರ್ಯೋ ರುಕ್ಮರೂಪನಿಬಂಧನಃ ।**
**ರತ್ನೈಃ ಪ್ರಶಸ್ತೈಃ ಚಿತ್ರೋ ವಾ ಕಾಂಚನಸ್ಯ ಪ್ರಶಸ್ಯತೇ ॥ ೩ ॥**

**ಚಂದನಸ್ಯಾಥ ದಂತಸ್ಯ ಶಾರ್ಙ್ಗಃ ಕಾರ್ಯೋ ಯಥಾ ಭವೇತ್ ।**
**ಅರ್ಧಹಸ್ತಾನ್ನ ಚಾಪ್ಯೂನೋ ಮಧ್ಯಧಾರ್ನ್ನತಥಾಧಿಕಃ ॥ ೪ ॥**

**ಕರ್ತವ್ಯಂ ಚಾಮರಂ ರಾಜ್ಞಾ ನ ಚ ಭಾರ್ಗವರಂಜಿತಂ ।**
**ಆಪೀತವರ್ಣಂ ತು ಭವೇತ್ಪ್ರಶಸ್ತಂ ।**
**ಸಾಂವತ್ಸರಾಮಾತ್ಯ ಪುರೋಹಿತಾನಾಂ ।**

---

೩. ಕ್ಷೀರವೃಕ್ಷ(ಆಲದ ಮರ)ದಿಂದ ಹದವಾದ ಹಿಡಿತವುಳ್ಳ ದೊಣ್ಣೆಗಳನ್ನು ಮಾಡಿಸಿ, ಅದಕ್ಕೆ ಚಿನ್ನದ ಕಟ್ಟೋ ಬೆಳ್ಳಿಯ ಕಟ್ಟೋ ಹಾಕಿದ ಹಿಡಿಯನ್ನು ಮಾಡಿಸಿ, ಅದರಲ್ಲಿ ಚಾಮರ (ಚಮರೀ ಮೃಗದ ಬಾಲದ ಕೂದಲು)ವನ್ನು ಭದ್ರವಾಗಿ ಕಟ್ಟಿಸಬೇಕು. ಆ ಚಾಮರವನ್ನು ರತ್ನದ ಪುಡಿಗಳಿಂದ ಕೆತ್ತಿಸಿ ಚಿತ್ರದಂತೆ ಮಾಡಿಸಬೇಕು. ಅಂದರೆ ಚಿನ್ನದ ಹಿಡಿಗೆ ವಜ್ರವೈಡೂರ್ಯ ರತ್ನಾದಿಗಳನ್ನು ಕೆತ್ತಿಸಬೇಕೆಂದು ಭಾವ.

೪. ಆಲದ ಮರದ ದಂಡವೇ ಆಗಬೇಕೆಂದಿಲ್ಲ. ಗಂಧದಮರ ಅಥವಾ ಜಂತದ ಮೇಲೆ ಚಿನ್ನದ-ಹಿಡಿಹಾಕಿಸಿ ಮಾಡಿಸಿದರೂ ಸಹ ಮತ್ತೂ ಒಳ್ಳೆಯದೇ. ಚಾಮರದ ಹಿಡಿಯು ಅರ್ಧ ಅಡಿಗಿಂತ ಕಡಿಮೆಯಾಗಿರಕೂಡದು ; ಹೆಚ್ಚಾಗಿಯೂ ಇರಕೂಡದು.

೫. ಈ ರೀತಿ ಸುಲಕ್ಷಣವಾದ ಚಾಮರವನ್ನೇ ರಾಜನು ಮಾಡಿಸಿ ಇಡಬೇಕು. ನೋಡುವುದಕ್ಕೆ ಬಹು ಚೆನ್ನಾಗಿರಬೇಕು.

**ನರೇಂದ್ರಪತ್ನೀ ಯುವರಾಜಸೈನ್ಯ**
**ಸ್ಯಾಲಸ್ಯಶೇಷಸ್ಯ ಜನಸ್ಯ ಕೃಷ್ಣಃ ॥ ೬ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಚಾಮರಲಕ್ಷಣಂ ನಾಮ ದ್ವಾದಶೋಽಧ್ಯಾಯಃ**

---

೬. ಇದುವರಿಗೆ ಹೇಳಿದುದು ರಾಜಾರ್ಹವಾದ ಚಾಮರದ ಮಾತಾಯಿತು. ಜೋಯಿಸರು, ಅಮಾತ್ಯರು, ಪುರೋಹಿತರುಗಳಿಗೆ ಹಳದೀ ಬಣ್ಣದ ಚಾಮರವು ಶ್ರೇಷ್ಠವಾದುದು. ಮಹಾರಾಣಿ, ಯುವರಾಜ, ಸೈನ್ಯಾಧಿಪತಿ, ಮಹಾರಾಜರ ಭಾವ ಮೈದನೇ ಮುಂತಾದ ಉಳಿದವರಿಗೆಲ್ಲರಿಗೂ ಕರೀಚಾಮರವಾಗಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಚಾಮರಲಕ್ಷಣವೆಂಬ ಹೆಸರಿನ ಹನ್ನೆರಡನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ತ್ರಯೋದಶೋಽಧ್ಯಾಯಃ

### ಪುಷ್ಕರ ಉವಾಚ

**ಹಂಸಪಕ್ಷೈರ್ವಿರಚಿತಂ ಮಯೂರಸ್ಯ ಶುಕಸ್ಯ ಚ ।**
**ಪಕ್ಷೈರಥ ಬಲಚ್ಛಾಯಾ ಛತ್ರಂ ರಾಜ್ಞಃ ಪ್ರಶಸ್ಯತೆ ॥ ೧ ॥**

**ಮಿಶ್ರಪಕ್ಷಂ ನ ಕರ್ತವ್ಯಂ ಹೀನಂ ಪರಿಮಿತಂ ತಥಾ ।**
**ಚತುರಸ್ರಂ ತು ಕರ್ತವ್ಯಂ ಬ್ರಾಹ್ಮಣಸ್ಯ ಭೃಗೂತ್ತಮ ॥ ೨ ॥**

---

### ಹದಿಮೂರನೆಯ ಅಧ್ಯಾಯವು.

೧. ಪುಷ್ಕರನು ಪುನಃ ಪರಶುರಾಮನನ್ನು ಕುರಿತು ಹೇಳುತ್ತಾನೆ:—ಇನ್ನು ಮುಂದೆ ರಾಜರು ಉಪಯೋಗಿಸಲರ್ಹವಾದ ಶ್ವೇತಚ್ಛತ್ರಿಯ ಲಕ್ಷಣವನ್ನು ಹೇಳುತ್ತೇನೆ, ಕೇಳು. ಈ ಶ್ವೇತಚ್ಛತ್ರಿಯು ಹಂಸಪಕ್ಷಿಗಳ ರೆಕ್ಕೆಗಳಿಂದಾಗಲಿ, ನವಿಲುಗರಿಯಿಂದಾಗಲಿ, ಗಿಣಿಯ ರೆಕ್ಕೆಯಿಂದಾಗಲಿ ಮಾಡಿಸಲ್ಪಡಬೇಕು. ಈ ಛತ್ರಿಗೆ ಬಲವಾದ ಹಿಡಿಯಿರಬೇಕು ಎತ್ತರವಾದ ಈ ಛತ್ರಿಯು ಮಳೆ ಬಿಸಿಲುಗಳ ಏಟನ್ನು ತಪ್ಪಿಸತಕ್ಕುದಾಗಿ ಬಲವಾಗಿರಬೇಕು. ಇಂತಹ ಕೊಡೆಯೇ ರಾಜಾರ್ಹವಾದುದು.

೨. ಯಾವಯಾವುದೋ ಹಕ್ಕಿಗಳ ರೆಕ್ಕೆಗಳನ್ನು ಮಿಶ್ರಮಾಡಿ ಕೊಡೆಯನ್ನು ಮಾಡಬಾರದು. ಮತ್ತು ಹೀನವಾದ ಬಣ್ಣದ ರೆಕ್ಕೆಗಳಿಂದಾಗಲಿ ಚಿಕ್ಕದಾಗಿಯೂ ಮಾಡಬಾರದು. ಬ್ರಾಹ್ಮಣನು ಹಿಡಿದುಕೊಳ್ಳುವ ಕೊಡೆಯು ಚಚ್ಚೌಕನಾಗಿರಬೇಕು.

**ವೃತಂ ರಾಜ್ಞಾಂ ಪ್ರಶಸ್ತಂ ಸ್ಯಾಚ್ಛುಕ್ಲವಸ್ತ್ರವಿಭೂಷಿತಂ ।**
**ಸಿತಂ ದುಕೂಲ ಸಂಛನ್ನಂ ಪತಾಕಾಭಿರ್ವಿಭೂಷಿತಂ ॥ ೩ ॥**

**ಏತಸ್ಮಿನ್ದಿಗ್ವಿಭಾಗೇ ತು ಕಾರ್ಯಾಶ್ಚಂದ್ರಾಂಶು ನಿರ್ಮಲಾಃ ।**
**ಚತ್ರಸ್ರಸ್ತಸ್ಯ ಧರ್ಮಜ್ಞ ಪತಾಕಾ ರುಕ್ಮಭೂಷಿತಾಃ ॥ ೪ ॥**

**ದಂಡಂ, ಚಾಮರವತ್ಕಾರ್ಯಂ ವೈಣವಂ ಚ ಪ್ರಶಸ್ಯತೇ ।**
**ತ್ರಿಚತುಃ ಪಂಚಷಟ್ಸಪ್ತಚಾಷ್ಟಪರ್ವಃ ಪ್ರಶಸ್ಯತೇ ॥ ೫ ॥**

---

೩. ಮಹಾರಾಜರು ಉಪಯೋಗಿಸುವ ಶ್ವೇತಚ್ಛತ್ರಿಯು ದುಂಡಾಗಿರಬೇಕು. ಬಿಳೀ (ಪಟ್ಟೇ) ಬಟ್ಟೆಯಿಂದ ಆ ಛತ್ರಿಯನ್ನು ಕಟ್ಟಿರಬೇಕು. ಈರೀತಿ ಬಿಳೀ ರೇಷ್ಮೆ ಬಟ್ಟೆಯಿಂದ ತಯಾರಾದ ಆ ಛತ್ರಿಯ ಮೇಲುಗಡೆ ಬಾವುಟಗಳನ್ನು ಅಲಂಕಾರವಾಗಿ ಕಟ್ಟಬೇಕು.

೪. ಈರೀತಿ ಕಟ್ಟುವ ಸಣ್ಣ ಬಾವುಟಗಳು ಚಂದ್ರಕಿರಣಗಳಂತೆ ಹೊಳೆ ಹೊಳೆಯುತ್ತಿರುವ ದಪ್ಪ ಬಿಳೀರೇಷ್ಮೆಬಟ್ಟೆಯಿಂದಲೇ ಮಾಡಿದುದಾಗಿರಬೇಕು· ಈರೀತಿ ಕಟ್ಟುವ ಬಾವುಟಗಳಲ್ಲಿ ನಾಲ್ಕು ದಿಕ್ಕಿಗೂ ನಾಲ್ಕು ಚಿನ್ನದ ಹಿಡಿಯ ಬಾವುಟಗಳನ್ನು ಕಟ್ಟಬೇಕು.

೫. ಈ ಛತ್ರಿಯ ಕೋಲು ಹಿಂದೆ ನಾನು ಚಾಮರಲಕ್ಷಣದಲ್ಲಿ ಹೇಳಿರುವಂತಹ ಕೋಲೇ ಆಗಬೇಕು. ಅಥವಾ ದಪ್ಪ ಬಿದಿರುಕೋಲಾದರೂ ಸರಿಯೆ. ಈ ವಿಧವಾದ ಕೋಲಿಗೆ ಮೂರರಿಂದ ಹಿಡಿದು ಎಂಟರವರೆಗೆ ಗಿಣ್ಣುಗಳಿರಬೇಕು. ಮೂರೋ, ನಾಲ್ಕೋ, ಐದೋ, ಆರೋ, ಏಳೋ, ಎಂಟೋ, ಎಷ್ಟಾದರೂ ಸರಿ. (ಲೇಡಿಗಳು ಹಿಡಿಯುವ ಕೊಡೆ ಮೂರೇ ಹಿಡಿ. ಮನುಷ್ಯರು ಹಿಡಿಯುವ ಕೊಡೆ ಮೂರೇ ಹಿಡಿ. ರಾಜರು ಹಿಡಿಯುವ ಕೊಡೆ ಏಳೆಂಟು ಗಿಣ್ಣು (ಹಿಡಿ) ಯಾಗಿರಬೇಕು.)

ದಶದ್ವಾದಶಭಿರ್ವಾऽಪಿ ಶೇಷೈಸ್ತು ಪರಿವರ್ಜಯೇತ್ ।
ಛತ್ರಂ ದಂಡೋಗ್ರಪರ್ವಾಣಂ ದಂಡಃ ಸರ್ವತ್ರ ಶಸ್ಯತೆ ॥ ೬ ॥

ಧಾರಯಂತಿ ಚ ದಣ್ಡಂ ವೈ ವೈಣವಂ ಗೃಹಮೇಧಿನಃ ।
ರಾಜ್ಞಾಂ ಪ್ರಶಸ್ತಂ ಷಡ್ಢಸ್ತಂ ಛತ್ರದಂಡಂ ಭೃಗೂತ್ತಮ ॥ ೭ ॥

ಅಥ ಪಂಚೋನಹಸ್ತಂ ತು ಮಹಿಷೀ ಯುವರಾಜಯೋಃ ।
ಸೇನಾಪತಿಸುರಾಧ್ಯಕ್ಷಸಾಂವತ್ಸರ ಪುರೋಹಿತೈಃ ॥ ೮ ॥

ಪಂಚಹಸ್ತಸ್ತು ಕರ್ತವ್ಯಶ್ಛತ್ರದಂಡೋ ಭೃಗೂತ್ತಮ ।
ಚತುರ್ಹಸ್ತಸ್ತು ಕರ್ತವ್ಯೋ ಮಯಾ ಯೇऽತ್ರ ನ ಕೀರ್ತಿತಾಃ ॥ ೯ ॥

ವ್ಯಾಸೋ ದಂಡಾರ್ಧಮಾನೇನ ಸದಾ ಛತ್ರಸ್ಯ ಶಸ್ಯತೇ ।
ಛತ್ರಂ ವಿಭೂಷಯೇ ದ್ರಾಜ್ಞಾಂ ತ್ವರ್ಧಚಂದ್ರದಿವಾಕರೈಃ ॥ ೧೦ ॥

---

೬. ಅಥವಾ ರಾಜಾರ್ಹವಾದ ಛತ್ರಿಗಳು ಹತ್ತು ಹನ್ನೆರಡು ಗಿಣ್ಣುಗಳ ವರೆವಿಗೂ ಏರಿರಬಹುದು. ಹನ್ನೆರಡು ಗಿಣ್ಣಿಗಿಂತ ಹೆಚ್ಚಾಗಿ ಮಾತ್ರ ಇರಬಾರದು. ಇಂತಹ ಉನ್ನತಪ್ರಮಾಣದ ಛತ್ರಿಯು ಅವರವರಿಗೆ ತಕ್ಕಂತೆ ನಿರ್ಮಿಸಲ್ಪಡಬೇಕು.

೭. ಯಾವ ಗ್ರಹಸ್ಥನೇ ಆಗಲಿ ಒಂದು ಛತ್ರಿ (ದೊಣ್ಣೆ)-ಯನ್ನು ಹತ್ತಿರ ಇಟ್ಟುಕೊಂಡೇ ಇರಬೇಕು. ಇದು ವೈಣವದಂಡ (ಬಿದಿರುಕೋಲು) ವಾಗಿರಬೇಕು. ಮಹಾರಾಜರು ಆರುಹಿಡಿ ಇರುವ ಛತ್ರದಂಡವನ್ನು ಉಪಯೋಗಿಸಬೇಕು.

೮, ಮಹಾರಾಣಿಯವರೂ, ಯುವರಾಜರೂ ನಾಲ್ಕುಹಿಡಿಯಿರುವ ಛತ್ರ ದಂಡವನ್ನು ಉಪಯೋಗಿಸಬೇಕು. ಸೇನಾಪತಿ, ಮಂತ್ರಿ, ಜೋಯಿಸ, ಪುರೋ ಹಿತರೆಲ್ಲರೂ ಐದುಹಿಡಿ ಇರುವ ಛತ್ರದಂಡವನ್ನುಪಯೋಗಿಸಬೇಕು.

೯. ಇನ್ನು ಯಾರ್ಯಾರ ವಿಷಯದಲ್ಲಿ ನಾನು ಹೇಳದೆ ಬಿಟ್ಟುಬಿಟ್ಟೆನೋ ಅವ ರೆಲ್ಲರೂ ನಾಲ್ಕು ಹಸ್ತಪ್ರಮಾಣವುಳ್ಳ ದಂಡವನ್ನು ಧರಿಸಬೇಕು.

೧೦. ಛತ್ರಿಯ ಉದ್ದ ಎಷ್ಟುಳತೆಯಿರುತ್ತದೆಯೋ ಅದರ ಅರ್ಧ ವ್ಯಾಸವುಳ್ಳ ಭಾಗವು ಛತ್ರಿಯ ಸುತ್ತಳತೆಯಾಗಿರಬೇಕು. ರಾಜರು ಉಪಯೋಗಿಸುವ ಶ್ವೇತ ಚ್ಛತ್ರಿಗೆ ಅರ್ಧಚಂದ್ರ ಮತ್ತು ಸೂರ್ಯನ ಗುರ್ತಿರಬೇಕು.

ವಜ್ರೇಂದ್ರನೀಲೈಃ ಸ್ಫಟಿಕೈಶ್ಚ ರಾಮ
ವೈಡೂರ್ಯಮುಕ್ತಾಫಲ ಸತ್ಪ್ರವಾಲೈಃ ॥
ವಿಭೂಷಿತಂ ರಶ್ಮಿಯುತಂ ಪ್ರಶಸ್ತಂ ।
ಸದಾsತಪತ್ರಂ ತು ಮಹೀಪತೀನಾಂ ॥ ೧೧ ॥

ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಛತ್ರಲಕ್ಷಣಂ ನಾಮ
ತ್ರಯೋದಶೋsಧ್ಯಾಯಃ

---

ಮಹಾರಾಜರಿಗೆ ಅರ್ಹವಾದ ಶ್ವೇತಚ್ಛತ್ರಿಯ ಹಿಡಿಗಳು ಮುತ್ತು ವಜ್ರರತ್ನಗಳಿಂದ ಕೆತ್ತಿಸಲ್ಪಟ್ಟಿರಬೇಕು. ಛತ್ರಿಯ-ಬಟ್ಟೆಯ ಸುತ್ತಲೂ ಮುತ್ತಿನ ಝೂಲರಿಗಳಿರಬೇಕು. ಇಂತಹ ವಜ್ರವೈಢೂರ್ಯಾದಿ ನವರತ್ನ ಖಚಿತವಾದ ಮಹಾಪ್ರಕಾಶವಾದ ಶ್ವೇತಚ್ಛತ್ರಿಯನ್ನು ರಾಜರು ಉಪಯೋಗಿಸುತ್ತಿರಬೇಕೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಮಹಾಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಛತ್ರಲಕ್ಷಣವೆಂಬ ಹೆಸರಿನ
ಹದಿಮೂರನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಚತುರ್ದಶೋಽಧ್ಯಾಯಃ

---

**ಪುಷ್ಕರ ಉವಾಚ**

**ಭದ್ರಾಸನಂ ನರೇಂದ್ರಸ್ಯ ಕ್ಷೀರವೃಕ್ಷೇಣ ಕಾರಯೇತ್ ।**
**ಉಚ್ಛ್ರಾಯಸ್ಯ ತಥಾ ತಸ್ಯ ಅಧ್ಯರ್ಧಂ ತು ಸಮಂ ಭವೇತ್ ॥ ೧ ॥**

**ಹಸ್ತತ್ರಯಂ ತಥಾ ವಿಷ್ಟಂ ವಿಸ್ತರೇಣ ತು ಕಾರಯೇತ್ ।**
**ಆಯಾಮಶ್ಚಾಸ್ಯ ಕರ್ತವ್ಯೋ ವಿಸ್ತರೇಣಾರ್ಧಸಮ್ಮಿತಃ ॥ ೨ ॥**

**ಚತುರಸ್ರಂ ತು ಕರ್ತವ್ಯಂ ರಾಜ್ಞೋ ಭದ್ರಾಸನಂ ಶುಭಂ ।**
**ನಾಷ್ಟಾಸ್ರಂ ನ ತಥಾ ವೃತ್ತಂ ನ ಚ ದೀರ್ಘಂ ಭೃಗೂತ್ತಮ ॥ ೩ ॥**

---

## ಹದಿನಾಲ್ಕನೆಯ ಅಧ್ಯಾಯವು.

ಪುಷ್ಕರನು ಹೇಳುತ್ತಾನೆ.—ಮಹಾರಾಜರು ಕುಳಿತುಕೊಳ್ಳಬೇಕಾದ ಭದ್ರಾ (ಸಿಂಹಾ) ಸನವನ್ನು ಕ್ಷೀರವೃಕ್ಷ-(ಆಲದಮರ) ದಿಂದ ಮಾಡಿಸಬೇಕು. ಅದರ ಎತ್ತರ ಎಷ್ಟು ಪ್ರಮಾಣವಿರುವುದೋ, ಅದರಲ್ಲರ್ಧ ಪ್ರಮಾಣ ಅಗಲ (ಸಮ) ವಾಗಿರಬೇಕು.

೨. ಸಿಂಹಾಸನದ ವಿಸ್ತಾರವು ಮೂರುಮೊಳ ಅಗಲವಾಗಿರಬೇಕು. ಅದರಲ್ಲರ್ಧಭಾಗ ಎತ್ತರವಾಗಿರಬೇಕು.

೩. ಮಹಾರಾಜರು ಕುಳಿತುಕೊಳ್ಳುವ ಸಿಂಹಾಸನವು ಚತುರಸ್ರಾಕಾರವಾಗಿರಬೇಕು. ಅಷ್ಟು ದೀರ್ಘವಾಗಿಯೂ ಇರಬಾರದು. ಅದು ಅಷ್ಟು ದುಂಡಾಗಿಯೂ ಇರಕೂಡದು. ಎಂಟು ಮೂಲೆಯೂ ಇರಬಾರದು.

ಸುವರ್ಣರೂಪ್ಯ ತಾಮ್ರೈಶ್ಚ ಚಿತ್ರಂ ಕಾರ್ಯಂ ವಿಶೇಷತಃ ।
ರತ್ನೈಃ ಪ್ರಶಸ್ತೈರ್ನತಥಾ ನ ರತ್ನಪ್ರತಿರೂಪಕೈಃ ॥ ೪ ॥

ಚತ್ವಾರಃ ಪುರುಷಾಸ್ತತ್ರ ವಿನ್ಯಸ್ತಾ ಭೃಗುನಂದನ ।
ದ್ವಿಗುಣಾಶ್ಚ ತಥಾ ಸಿಂಹಾಸ್ತೇಭ್ಯಸ್ತು ದ್ವಿಗುಣಾಸ್ತಥಾ ॥ ೫ ॥

ಭದ್ರಾಸನಂ ತತ್ರ ಭವೇನ್ನೃಪಸ್ಯ
ತಲೇನ ಪೂರ್ಣಂ ಸಸುಖಂ ಪರಾರ್ಧ್ಯಂ ।
ವೈಯಾಘ್ರ ಚರ್ಮಾಸ್ತರಣಂ ಸುಖಾರ್ಥಂ
ವರಾಸನಂ ತಸ್ಯ ಸಮಾಮನಂತಿ ॥ ೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಭದ್ರಾಸನಲಕ್ಷಣಂ ನಾಮ
ಚತುರ್ದಶೋಽಧ್ಯಾಯಃ

---

೪. ಚಿನ್ನದ, ತಾಮ್ರದ ಅಥವಾ ಬೆಳ್ಳಿಯ ತಗಡುಗಳನ್ನು ಭದ್ರಾಸನಕ್ಕೆ ಬಡಾಯಿಸಿ, ಅದರಲ್ಲಿ ಚಿತ್ರಗಳನ್ನು ಕೆತ್ತಿಸಬೇಕು. ಪ್ರಶಸ್ತವಾದ ರತ್ನಗಳನ್ನಾಗಲಿ, ರತ್ನಪ್ರತಿರೂಪಕಗಳಾದ ಹರಳುಗಳನ್ನಾಗಲೀ ಅದಕ್ಕೆ ಕೆತ್ತಿಸಬೇಕಾಗಿಲ್ಲ.

೫. ನಾಲ್ಕು ಕಡೆಗಳಲ್ಲಿಯೂ ನಾಲ್ಕು ಮಂದಿ ಮನುಷ್ಯರು ನಿಂತು ಅದನ್ನು ಹೊತ್ತಿರುವಂತೆ ಕೆತ್ತಿಸಬೇಕು. ಅದರೆರಡರಷ್ಟು ಸಿಂಹಗಳು ಹೊತ್ತಿರುವಂತೆ ನಿರ್ಮಿಸಬೇಕು. ಇದರ ಎರಡರಷ್ಟು ಅಗಲವಾಗಿ ಸಿಂಹಾಸನವಿರಬೇಕು.

೬. ಇಂತಹ ಪರಮಶ್ರೇಷ್ಠವಾದ ಸಿಂಹಾಸನವನ್ನು ಎಂಟು ಸಿಂಹಗಳೂ, ನಾಲ್ಕು ಮಂದಿ ವೀರರೂ ಧರಿಸಿರುವಂತೆ ವಿಸ್ತಾರವಾಗಿ ನಿರ್ಮಿಸಬೇಕು. ಆ ಸಿಂಹಾಸನವು ಎಷ್ಟು ಪ್ರಮಾಣ ಅಗಲವಾಗಿರುವುದೋ ಅಷ್ಟಗಲಕ್ಕೂ ಹುಲಿಯ ಚರ್ಮವನ್ನು ಆಸನಕ್ಕಾಗಿ ಹಾಸಿರಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಮಹಾಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಭದ್ರಾಸನಲಕ್ಷಣವೆಂಬ ಹೆಸರಿನ
ಹದಿನಾಲ್ಕನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಪಂಚದಶೋಽಧ್ಯಾಯಃ

---

### ಪುಷ್ಕರ ಉವಾಚ

ವಜ್ರಂ ಮರಕತಂ ಚೈವ ಪದ್ಮರಾಗಂ ಚ ಮೌಕ್ತಿಕಂ ।
ಇಂದ್ರನೀಲಂ ಮಹಾನೀಲಂ ವೈಡೂರ್ಯಮಥ ಸಸ್ಯಕಂ ॥ ೧ ॥

ಇಂದ್ರಕಾಂತಂ ಸೂರ್ಯಕಾಂತಂ ಸ್ಫಟಿಕಂ ಪುಲಕಂ ತಥಾ ।
ಕರ್ಕೇತನಂ ಪುಷ್ಪರಾಗಂ ತಥಾ ಜ್ಯೋತೀರಸಂ ದ್ವಿಜ ॥ ೨ ॥

ಸ್ಫಟಿಕಂ ರಾಜವರ್ತಂ ಚ ತಥಾ ರಾಜಮಯಂ ಶುಭಂ ।
ಸೌಗಂಧಿಕಂ ತಥಾ ಸಖ್ಯಂ ಶಂಖಬ್ರಹ್ಮಮಯಂ ತಥಾ ॥ ೩ ॥

ಗೋಮೇಧಂ ರುಧಿರಾಕ್ಷಂ ಚ ತಥಾ ವಲ್ಲಾತಕಂ ದ್ವಿಜ ।
ಧೂಲೀ ಮರಕತಂ ಚೈವ ತುತ್ಥಕಂ ಶೇಷಮೇವ ಚ ॥ ೪ ॥

ಪಲುಂ ಪ್ರವಾಲಕಂ ಚೈವ ಗಿರಿವಜ್ರಂ ಚ ಭಾರ್ಗವ ।
ಭುಜಗೇಶಮಣಿಂ ಚೈವ ತಥಾ ವಜ್ರಮಣಿಂ ಶುಭಂ ॥ ೫ ॥

---

### ಹದಿನೈದನೆಯ ಅಧ್ಯಾಯವು.

೧. ಪುಷ್ಕರನು ಪುನಃ ಹೇಳುತ್ತಾನೆ.—ಕೇಳಯ್ಯಾ ! ಪರಶುರಾಮ ! ಇನ್ನು ಮುಂದೆ ಮಹಾರಾಜನ ಮೈಮೇಲೆ ಧರಿಸುವ ಸುವರ್ಣದ ಆಭರಣಗಳಿಗೆ ಎಂತೆಂತಹ ರತ್ನಗಳನ್ನು ಕೆತ್ತಿಸ (ಜೋಡಿಸ) ಬೇಕೆಂಬ ವಿಚಾರವನ್ನು ತಿಳಿಸುತ್ತೇನೆ. ವಜ್ರ, ಮರಕತ, ಪದ್ಮರಾಗ, ಮುತ್ತು, ಇಂದ್ರನೀಲ, ಮಹಾನೀಲ, ವೈಡೂರ್ಯಾದಿರತ್ನಗಳು.

೨-೬. ಇಂದ್ರಕಾಂತ, ಸೂರ್ಯಕಾಂತ, ಸ್ಫಟಿಕ, ಪುಲಕ, ಕರ್ಕೇತನ ವಜ್ರ, ಪುಷ್ಯರಾಗ, ಜ್ಯೋತಿರಸವಜ್ರ, ರಾಜಾವರ್ತ, ಮರಕತ, ಶೇಷ, ಪಲು, ಹವಳ,

ಟೀಟಿಭಂ ಚ ತು ತಾಪಿಂಚ್ಛಂ ಭ್ರಾಮರಂ ಚ ತಥೋತ್ಪಲಂ ।
ರತ್ನಾನ್ಯೇತಾನಿ ಧಾರ್ಯಾಣಿ ಸರ್ವಾಣ್ಯೇವ ಮಹೀಕ್ಷಿತಾ ॥ ೬ ॥

ಸುವರ್ಣಪ್ರತಿಬದ್ಧಾನಿ ಜಯಾರೋಗ್ಯಸಮೃದ್ಧಯೇ ।
ತೇಷಾಂ ಗುರುತ್ವಂ ರಾಗಶ್ಚ ಸ್ವಚ್ಛತ್ವಂ ರಶ್ಮಿಮಾಲಿತಾ ॥ ೭ ॥

ಸುಜಾತತಾ ಮಸೃಣತಾ ಸುಸಂಸ್ಥಾನತ್ವಮೇವ ಚ ।
ಗುಣವಂತೋ ವಿನಿರ್ದಿಷ್ಟಾ ಧಾರ್ಯಾಸ್ತೇ ಗುಣಸಂಯುತಾಃ ॥ ೮ ॥

ಖಂಡಾಸ್ಸಶರ್ಕರಾ ಯೇ ಚ ನಿಷ್ಪ್ರಭಾ ಮಲಿನಾಸ್ತಥಾ ।
ನ ತೇ ಧಾರ್ಯಾ ನರೇಂದ್ರಾಣಾಂ ಜಯಶ್ರೀಜೀವಿತೈಷಿಣಾಂ ॥ ೯ ॥

---

ಗಿರಿವಜ್ರ, ಸರ್ಪದಹೆಡೆಯಲ್ಲಿರುವ ರತ್ನ, ವಜ್ರಮಣಿ, ಟಿಟ್ಟಿಭರತ್ನ, ತಾಪಿಂಛ, ಭ್ರಾಮರ, ನೀಲೋತ್ಪಲ (ನೀಲಮಣಿ) ವೇ ಮುಂತಾದ ಮಹಾಶ್ರೇಷ್ಠವಾದ ರತ್ನಗಳು ರಾಜನ ಮೈಮೇಲಿರಬೇಕು.

೭. ಈ ರತ್ನಗಳೆಲ್ಲಾ ಚಿನ್ನದ ರೇಕುಗಳಿಂದ ಕಟ್ಟಲ್ಪಟ್ಟು ವಿವಿಧಾಭರಣ ರೂಪಗಳನ್ನು ತಳೆದು ರಾಜನ ಅವಯವಗಳನ್ನಲಂಕರಿಸಬೇಕು. ಈರೀತಿ ಈ ರತ್ನಾಭರಣಗಳನ್ನು ಧರಿಸಿರುವ ಮಹಾರಾಜನಿಗೆ ವಿಜಯವೂ, ಆರೋಗ್ಯ-ಭಾಗ್ಯವೂ ಅಭಿವೃದ್ಧಿಯಾಗುವುದು.

೮. ಮೇಲೆ ಹೇಳಿದ ರತ್ನಗಳನ್ನೆಲ್ಲಾ ರತ್ನಪರೀಕ್ಷಕರನ್ನು ಕರೆಯಿಸಿ, ಅವರಿಂದ ಚೆನ್ನಾಗಿ ಪರೀಕ್ಷೆಮಾಡಿಸಿ ಅವುಗಳ ಭಾರ (ಗುರುತ್ವ), ಬಣ್ಣ, ನೈರ್ಮಲ್ಯ, ಕಾಂತಿ, ಅವುಗಳ ಜಾತಿ, ಅಂದ, ಲಕ್ಷಣಗಳನ್ನು ಚೆನ್ನಾಗಿ ನಿರ್ಧರಿಸಿದಮೇಲೆ ಅವುಗಳಿಂದ ಆಭರಣಗಳನ್ನು ಮಾಡಿಸಬೇಕಲ್ಲದೆ, ಅಂತಹ ಶ್ರೇಷ್ಠವಾದ ಆಭರಣಗಳನ್ನೇ ಮಹಾರಾಜನು ಧರಿಸಬೇಕು.

೯. ಯಾವುವು ಕಲ್ಲುಸಕ್ಕರೆ ಬಣ್ಣದಂತೆ ಕಾಂತಿಯಿಲ್ಲದೆ ಮಲಿನವಾಗಿರುವುವೋ ಅಂತಹವುಗಳನ್ನು ಆಭರಣಕ್ಕೆ ಸೇರಿಸಬಾರದು. ಜಯವೂ, ಸಂಪತ್ತೂ, ಆಯಸ್ಸೂ ಸಹ ಕೆಟ್ಟರತ್ನಗಳ ಧಾರಣಗಳಿಂದ ಅಳಿಸಿಹೋಗುವುವು.

**ಸಮಸ್ತರತ್ನವರ್ಗೇಽಪಿ ವಜ್ರಧಾರಣಮಿಷ್ಯತೇ ।**
**ಅಂಭಸ್ತರತಿ ಯದ್ವಜ್ರಮಭೇದ್ಯಂ ವಿಮಲಂ ಚ ಯತ್ ॥ ೧೦ ॥**

**ತಥಾ ಚ ಶುದ್ಧಂ ಷಟ್‌ಕೋಣಂ ಲಘು ಭಾರ್ಗವನಂದನ ।**
**ಪ್ರಭಾ ಚ ಶಕ್ರಚಾಪಾಭಾ ಯಸ್ಯಾರ್ಕಾಭಿಮುಖೀ ಭವೇತ್ ॥ ೧೧ ॥**

**ತಂ ವಜ್ರಂ ಧಾರಯನ್ರಾಜಾ ಸರ್ವಾನ್ಜಯತಿ ಶಾತ್ರವಾನ್ ।**
**ಶುಕ್ಲಪಕ್ಷನಿಭಃ ಸ್ನಿಗ್ಧಃ ಕಾನ್ತಿಮಾನ್ನಿರ್ಮಲಸ್ತಥಾ ॥ ೧೨ ॥**

**ಸುವರ್ಣಚೂರ್ಣಸಂಕಾಶೈಃ ಸೂಕ್ಷ್ಮೈರ್ಬಿಂದುಭಿರನ್ವಿತಃ ।**
**ಶಸ್ತೋ ಮರಕತೋ ರಾಮ ಗಂಭೀರಶ್ಚೋನ್ನತಸ್ತಥಾ ॥ ೧೩ ॥**

---

೧೦. ಎಲ್ಲಾ ವಿಧವಾದ ರತ್ನಗಳಿಗಿಂತ ಒಳ್ಳೇ ಬ್ರಹ್ಮಜಾತಿಯ ವಜ್ರವು ಪರಮಶ್ರೇಷ್ಠವಾದದ್ದು. ಆ ವಜ್ರದಮೇಲೆ ನೀರು ಸುರಿದರೆ ತಕ್ಷಣ ನೀರು ಸೋಕದೆ ನೀರು ಜಾರಿಹೋಗುವಂತಹುದಾಗಿರಬೇಕು. ಯಾವ ವಿಧವಾದ ಕೊಳೆಯೂ ಅದರಲ್ಲಿ ಕಾಣಕೂಡದು.

೧೧. ಆ ವಜ್ರವು ಬಹಳ ಶುದ್ಧವಾಗಿರಬೇಕು. ಆರು ಅಂಚು (ಷಟ್ಕೋಣ) ಅದಕ್ಕಿರಬೇಕು. ಅದು ಬಹು ಲಘುವಾಗಿರಬೇಕು. ಅದನ್ನು ನೋಡಿದರೆ ಮತ್ತು ಅದನ್ನು ಸೂರ್ಯನಿಗೆದುರಾಗಿ ಹಿಡಿದರೆ ಕಾಮನಬಿಲ್ಲಿನ ಬಣ್ಣವು ಅದರಲ್ಲಿ ಥಳಥಳನೆ ಹೊಳೆಯುತ್ತಿರಬೇಕು.

೧೨. ಅಂತಹ ವಜ್ರವನ್ನಾವ ರಾಜನು ಆಭರಣಗಳಲ್ಲಿ ಕೆತ್ತಿಸಿ ದೇಹದ ಮೇಲೆ ಧರಿಸುವನೋ, ಅಂತಹ ಮಹಾರಾಜನು ಸಕಲ ಶತ್ರುವರ್ಗವನ್ನೂ ಜಯಿಸಲರ್ಹನಾಗುತ್ತಾನೆ.

೧೩. ಇನ್ನು ಮರಕತ ರತ್ನದ ಲಕ್ಷಣವನ್ನು ಹೇಳುತ್ತೇನೆ, ಕೇಳು. ಶುಕ್ಲಪಕ್ಷದ ಪೂರ್ಣಚಂದ್ರನಂತೆ ಪ್ರಕಾಶಿಸುತ್ತಾ, ಮನೋಹರವಾದ ಕಾಂತಿಯಿಂದ ಥಳಥಳನೆ ಹೊಳೆಯುತ್ತಾ ಬಹು ನಿರ್ಮಲವಾಗಿರುವ, ಆ ಮರಕತಮಣಿಯನ್ನು ಚಿನ್ನದ ಹುಡಿ (ಪುಡಿ)ಗಳಿಂದ ಒಡವೆಗಳಿಗೆ ಬೆಸೆಯಿಸಿ, ಗಂಭೀರವಾಗಿರುವಂತೆ ನಿರ್ಮಾಣ ಮಾಡಿಸಿ ಅದನ್ನು ಅವಯವಗಳಲ್ಲಿ ಧರಿಸಬೇಕು.

**ಧಾರ್ಯರ್ಶ್ಚ ಪೃಥಿವೀಶಾನಾಂ ಸರ್ವೋಪದ್ರವನಾಶನಃ ।**
**ಕುರುವಿಂದಾದ್ಭವೇಜ್ಜನ್ಮ ತಥಾ ಸೌಗಂಧಿಕಾದ್ದ್ವಿಜ ॥ ೧೪ ॥**

**ಸ್ಫಟಿಕಾತ್ಪದ್ಮರಾಗಾಣಾಂ ಶ್ರೇಷ್ಠಾಸ್ತೇ ಹ್ಯುತ್ತರೋತ್ತರಂ ।**
**ಜಹರಂಗಾ ಭವಂತೀಹ ಕುರುವಿಂದ ಭವಾಶ್ಚ ಯೇ ॥ ೧೫ ॥**

**ಕಷಾಯರಂಗಾ ನಿರ್ದಿಷ್ಟಾ ಯೇ ಚ ಸೌಗಂಧಿಕೋದ್ಭವಾಃ ।**
**ಸ್ವಚ್ಛಾಶ್ಚ ರಾಗವತಂಶ್ಚ ವಿಜ್ಞೇಯಾಃ ಸ್ಫಟಿಕೋದ್ಭವಾಃ ॥ ೧೬ ॥**

**ಮುಕ್ತಾಫಲಾಃ ಶುಕ್ತಿಭವಾಬಹವೋ ಮತ್ಸ್ಯಜಾಸ್ತಥಾ ।**
**ಉತ್ಕೃಷ್ಟಾ ನ ತಥಾ ತೇಭ್ಯೋ ಯೇ ತು ಶಂಖೋದ್ಭವಾ ದ್ವಿಜ ॥ ೧೭ ॥**

---

೧೪. ಈ ರೀತಿ ಸಿದ್ಧಮಾಡಿದ ಒಡವೆಗಳನ್ನದಾವ ರಾಜನು ಅಂಗಗಳಲ್ಲಿ ಧರಿಸುವನೋ ಅಂತಹ ರಾಜನ ಸರ್ವೋಪದ್ರವಗಳೂ ನಾಶವಾಗುವುವು. ಇಂತಹ ಮರಕತಮಣಿಗಳು ಕುರುವಿಂದ ಮತ್ತು ಸೌಗಂಧಿಕ ದೇಶಗಳಲ್ಲಿ ದೊರೆಯುತ್ತವೆ.

೧೫. ಸ್ಫಟಿಕರತ್ನಗಳಿಗಿಂತ ಪದ್ಮರಾಗಾದಿವಜ್ರಗಳು ಉತ್ತರೋತ್ತರವಾಗಿ ಶ್ರೇಷ್ಠವೆಂದು ತಿಳಿಯಬೇಕು. ಇವು ಕುರುವಿಂದ ದೇಶಗಳಲ್ಲಿ ಹುಟ್ಟಿ ಜಹರಂಗ ರತ್ನಗಳೆಂಬ ಪ್ರಸಿದ್ಧಿಯನ್ನು ಪಡೆದಿವೆ.

೧೬. ಸೌಗಂಧಿಕಾ ದೇಶದಲ್ಲಿ ದೊರೆಯುವ ರತ್ನಗಳು ಕಷಾಯರಂಗವೆಂಬ ಪ್ರಸಿದ್ಧನಾಮಧೇಯವನ್ನು ಹೊಂದಿವೆ. ಇವು ಸ್ಫಟಿಕಗಳಿಂದಲೇ ಹುಟ್ಟುತ್ತವೆ. ಇವು ಬಹು ಸ್ವಚ್ಛವಾದ ಬಿಳೀಬಣ್ಣಗಳಿಂದ ಕೂಡಿ ಫಳಫಳನೆ ಹೊಳೆಯುತ್ತಿರುತ್ತವೆ.

೧೭. ಮುತ್ತಿನಮಣಿಗಳು ಕಪ್ಪೆಯಚಿಪ್ಪುಗಳಿಂದ ಹುಟ್ಟುತ್ತವೆ. ಕೆಲವು ಮುತ್ತುಗಳು ಮೀನುಗಳಿಂದಲೂ ಹುಟ್ಟುತ್ತವೆ. ಆದರೆ ಶಂಖದಿಂದ ಸಿಕ್ಕುವ ಮುತ್ತುಗಳು ಕಪ್ಪೆ ಮತ್ತು ಮೀನಿನ ಮುತ್ತುಗಳಿಗಿಂತ ಅಷ್ಟೇನೂ ಶ್ರೇಷ್ಠವಾದುವುಗಳಲ್ಲ.

ತೇಭ್ಯಃ ಪ್ರಶಸ್ತಾ ವಿಜ್ಞೇಯಾ ನಾಗಕುಂಭಸಮುದ್ಭವಾಃ ।
ನಿಷ್ಪ್ರಭಾಸ್ತೇ ಸಮುದ್ದಿಷ್ಟಾ ಶ್ರೇಷ್ಠಾಃ ಕ್ರೋಡಿಭವಾ ದ್ವಿಜ　　॥ ೧೮ ॥

ತೇಭ್ಯೋ ವೇಣುದಲಾಃ ಶ್ರೇಷ್ಠಾಸ್ತೇಭ್ಯೋ ಭುಜಗಸಂಭವಾಃ ।
ತೇಭ್ಯೋಽಪಿ ಭುವಿ ದುಷ್ಪ್ರಾಪ್ಯಂ ಮೌಕ್ತಿಕಂ ಮೇಘಸಂಭವಂ　　॥ ೧೯ ॥

ಧಾರಣಾತ್ತಸ್ಯ ನೃಪತೇಃ ಸರ್ವಸಿದ್ಧಿಃ ಪ್ರಕೀರ್ತಿತಾ ।
ಮೌಕ್ತಿಕಾನಾಂ ತು ಸರ್ವೇಷಾಂ ವೃತ್ತತ್ವಂ ಗುಣ ಉಚ್ಯತೇ　　॥ ೨೦ ॥

ಸುಷ್ಮಿತಾ ಚ ಸುಶುಕ್ಲತ್ವಂ ಮಹತ್ತ್ವಂ ಚ ಭೃಗೂತ್ತಮ ।
ಇಂದ್ರನೀಲಸ್ತು ಯಃ ಕ್ಷೀರಂ ರಾಜತೇ ಭಾಜನೇ ಸ್ಥಿತಂ　　॥ ೨೧ ॥

---

೧೮. ಆದರೆ ಈ ಮೂರುವಿಧ-ಮುತ್ತುಗಳಿಗಿಂತ ಆನೆಯ ತಲೆ-(ಕುಂಭಸ್ಥಳ) ಯಲ್ಲಿ ದೊರೆಯುವ ರತ್ನವು ಪರಮಶ್ರೇಷ್ಠವಾದುದು. ಹಂದಿಯ ತಲೆಗಳಲ್ಲೂ ಮುತ್ತುಗಳು ಸಿಕ್ಕುವುದುಂಟು. ಆದರೆ ಅವುಗಳಿಗೆ ಸುತರಾಂ ಕಾಂತಿಯಿಲ್ಲ.

೧೯. ಬಿದಿರುಮೆಳೆಗಳಲ್ಲಿಯೂ ಕೆಲವು ಮುತ್ತುಗಳು ಆಕಸ್ಮಿಕವಾಗಿ ಸಿಕ್ಕುವುದುಂಟು. ಇವು ಹಂದೀ ತಲೆಯ ಮುತ್ತಿಗಿಂತ ಕೊಂಚ ಉತ್ತಮವಾದುದು. ಇದಕ್ಕಿಂತ ಹಾವಿನಹೆಡೆಯಲ್ಲಿ ಸಿಕ್ಕುವ ರತ್ನವು ಬಹಳ ಶ್ರೇಷ್ಠವಾದುದು.

೨೦. ಮೇಲೆ ವಿವರಿಸಿದ ಎಲ್ಲಾ ರತ್ನಗಳಿಗಿಂತಲೂ ಮೇಘದಿಂದ ಮಳೆಯು ಸುರಿಯುವಾಗ ಎಲ್ಲೋ ಯಾವಾಗಲೋ ಒಂದು ರತ್ನವು ಮೇಲಿನಿಂದ ಕೆಳಕ್ಕೆ ಬೀಳುವುದುಂಟು. ಇದು ಸಿಕ್ಕುವುದು ಬಹು ಕಷ್ಟ. ಹಾಗೇನಾದರೂ ಅಂತಹ ಮೇಘರತ್ನವು ಸಿಕ್ಕುವುದಾದರೆ ಅಂತಹ ರತ್ನವನ್ನು ಮಹಾರಾಜನು ಅವಶ್ಯಕವಾಗಿ ಧರಿಸಬೇಕು. ಇದನ್ನು ಯಾವ ರಾಜನು ಧರಿಸುವನೋ, ಅವನು ಸಕಲ ಸಿದ್ಧಿಯನ್ನೂ ಹೊಂದುತ್ತಾನೆ. ಎಲ್ಲಾ ವಿಧವಾದ ವಜ್ರಗಳೂ ಗುಂಡಾಗಿಯೇ ಇರಬೇಕು. ಇದೇ ಅದರ ಗುಣವೆನಿಸುವುದು.

೨೧. ಇಂದ್ರನೀಲಮಣಿಯು ಒಳ್ಳೇ ಹಾಲಿನ ಬಣ್ಣದಂತೆ ಬೆಳ್ಳಗಿರುತ್ತದೆ. ಅದರ ಸೌಷ್ಠವವೂ, ಬಿಳುಪೂ, ಮಹತ್ವವೂ ಅಸಾಧಾರಣವಾದುದೆಂದು ತಿಳಿದಿರಬೇಕು.

**ರಂಜಯೇತ್ಸ್ವಪ್ರಭಾವೇನ ತಮಮೂಲ್ಯಂ ವಿನಿರ್ದಿಶೇತ್ ।**
**ನೀಲರಕ್ತಂ ತು ವೈಡೂರ್ಯಂ ಸರ್ವತಃ ಶ್ರೇಷ್ಠಮುಚ್ಯತೆ ॥ ೨೧ ॥**

**ಸರ್ವೇಷಾಮೇವ ರತ್ನಾನಾಂ ಧಾರ್ಯಂ ಕಕೆತನಂ ಸ್ಮೃತಂ ।**
**ಪುಷ್ಪರಾಗಾಸ್ತಥಾ ರಾಮ ಯೇ ಚಾನ್ಯೇ ಕೀರ್ತಿತಾ ಮಯಾ ॥ ೨೩ ॥**

**ಪ್ರಶಸ್ತರತ್ನೈರ್ಭೂಪಾನಾಂ ಮುಕುಟಾನ್ಯಂಗದಾನಿ ಚ ।**
**ಹಾರಾಣಿ ರಾಮ ಕಾರ್ಯಾಣಿ ಕೇಯೂರಾಭರಣಾನಿ ಚ ॥ ೨೪ ॥**

**ಅಪ್ರಶಸ್ತಾನಿ ರತ್ನಾನಿ ವರ್ಜನೀಯಾನಿ ದೂರತಃ ।**
**ಸರ್ವರತ್ನೋತ್ತಮಂ ರಾಜಾ ವಿವರ್ಣಂ ಮಲಿನಂ ತಥಾ ॥ ೨೫ ॥**

---

೨೨. ನೀಲರಕ್ತ (ಇಂದ್ರನೀಲಮಣಿ) ರತ್ನವೂ ವೈಡೂರ್ಯರತ್ನವೂ ಸಹ ಯಾವಾಗಲೂ ಶ್ರೇಷ್ಠವಾದ ರತ್ನಗಳು. ಇವು ತಮ್ಮ ನಿಸರ್ಗವಾದ ಪ್ರಭಾವದಿಂದ ಅಮೌಲ್ಯರತ್ನಗಳೆಂದು ಪ್ರಸಿದ್ಧವಾಗಿವೆ.

೨೩. ಪರಶುರಾಮ ! ಕೇಳು, ಮೇಲೆ ಹೇಳಿದ ಎಲ್ಲಾ ನವರತ್ನಗಳಿಗಿಂತ ಕಕತನ (ಮರಕತ), ಪುಷ್ಯರಾಗ-(ಸೀಮೆಕಮಲ) ಗಳು ಶ್ರೇಷ್ಠವಾದುವುಗಳು. ಇವುಗಳನ್ನು ತಪ್ಪದೆ ಧರಿಸಬೇಕು.

೨೪. ಪ್ರಶಸ್ತವಾದ ರತ್ನಗಳಿಂದಲೇ ವಾಜರ ಕಿರೀಟಗಳನ್ನೂ, ಬಾಹುಪುರಿಗಳನ್ನು ಮಾಡಿಸಬೇಕು. ಉಳಿದ ಸಮಸ್ತ ರತ್ನಗಳಿಂದಲೂ ಹಾರಗಳನ್ನೂ, ಇತರ ಆಭರಣಗಳನ್ನೂ ಮಾಡಿಸಬಹುದು.

ಟಿಪ್ಪಣಿ :—ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗ, ಮರಕತ, ಮಾಣಿಕ್ಯ, ಮುತ್ತು, ಹವಳ, ನೀಲ ಈ ಒಂಭತ್ತಕ್ಕೆ ನವರತ್ನಗಳೆಂದು ಹೆಸರು. ಈ ನವರತ್ನಗಳ ಲಕ್ಷಣಗಳನ್ನು ನವರತ್ನಪುಸ್ತಕವೆಂಬ ಗ್ರಂಥದಲ್ಲಿ ವಿಸ್ತಾರವಾಗಿ ವಿವರಿಸಿ ಹೇಳಿದ್ದಾರೆ. ಆ ಸಕಲಗ್ರಂಥಗಳಿಗೂ ಈ ವಿಷ್ಣುಧರ್ಮೋತ್ತರಪುರಾಣವೇ ಮೂಲ (ಆಧಾರ) ಪ್ರಮಾಣಗ್ರಂಥವೆಂದು ಭಾವಿಸಬೇಕು.

೨೫. ಇದುವರಿಗೆ ಹೇಳಿದ ಲಕ್ಷಣಗಳಲ್ಲಿ ಯಾವ ರತ್ನಗಳು ಅಪ್ರಶಸ್ತಗಳೋ ಅಂತಹವುಗಳನ್ನು ದೂರದಲ್ಲೇ ಬಿಟ್ಟುಬಿಡಬೇಕು. ಸರ್ವರತ್ನಗಳಲ್ಲೂ ಯಾವುವು ಉತ್ತಮವೆಂದು ಹೇಳಿದೆನೋ ಅಂಥವುಗಳನ್ನು ಅವಶ್ಯವಾಗಿ ಧರಿಸಬೇಕು.

ನ ಧಾರಯೇತ ಧರ್ಮಜ್ಞಃ ಸುಶುದ್ಧಂ ಧಾರಯೇತ್ಸದಾ ।
ಧೃತಿಃ ಪ್ರಶಸ್ತಾ ಭೃಗುವಂಶಚಂದ್ರ
ರತ್ನೋತ್ತಮಾನಾಂ ಸತತಂ ನೃಪಾಣಾಂ ।
ರತ್ನಾಂಶು ದಗ್ಧಂ ತು ನರಸ್ಯ ದೇಹಾತ್
ಅನರ್ಥಮಾಶು ಪ್ರಶಮಂ ಪ್ರಯಾತಿ ॥ ೨೬ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರತ್ನಲಕ್ಷಣಂ ನಾಮ
ಪಂಚದಶೋಽಧ್ಯಾಯಃ

---

೨೬. ವಿವರ್ಣವಾದ ಮತ್ತು ಮಲಿನವಾದ ಕೆಟ್ಟ ರತ್ನಗಳನ್ನು ಧರ್ಮಜ್ಞನಾದ ರಾಜನು ಖಂಡಿತವಾಗಿ ಧರಿಸಕೂಡದು. ಶುದ್ಧವಾದ ರತ್ನಗಳನ್ನೇ ಸರಿಯಾಗಿ ಪರೀಕ್ಷೆಮಾಡಿಸಿ ಉಪಯೋಗಿಸಬೇಕು. ಎಲೈ ಪರಶುರಾಮನೆ! ಕೇಳು. ಇಂತಹ ಸರ್ವೋತ್ತಮರತ್ನಗಳನ್ನಾವನು ಧರಿಸುವನೋ, ಅಂತಹ ಮಹಾತ್ಮನು ಆ ಮಹಾರತ್ನಗಳ ತೇಜಸ್ಸಿನಿಂದ ಸಕಲ ಅನರ್ಥಗಳನ್ನೂ ನಾಶಪಡಿಸಿಕೊಂಡು ಸೌಖ್ಯವನ್ನು ಹೊಂದುತ್ತಾನೆ.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ರತ್ನಲಕ್ಷಣವೆಂಬ ಹೆಸರಿನ
ಹದಿನೈದನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಷೋಡಶೋಽಧ್ಯಾಯಃ

---

**ಪುಷ್ಕರ ಉವಾಚ**

**ಧನುರ್ದ್ರವ್ಯತ್ರಯಂ ಲೋಹಂ ಶೃಂಗಂ ದಾರು ಚ ಭಾರ್ಗವ ।**
**ಜ್ಯಾದ್ರವ್ಯತ್ರಿತಯಂ ಚರ್ಮ ವಂಶಭಂಗಂ ತ್ವಚಸ್ತಥಾ ॥ ೧ ॥**

**ವಂಶತ್ವಗ್ವಂಶಚಾಪಂ ತು ಕರ್ತವ್ಯಂ ಭೃಗುನಂದನ ।**
**ಅನ್ಯೇಷು ರಾಮ ಚಾಪೇಷು ಶೇಷದ್ರವ್ಯಮಿದಂ ಭವೇತ್ ॥ ೨ ॥**

**ಪ್ರಮಾಣಂ ನಾತ್ರ ನಿರ್ದಿಷ್ಟಂ ಚಾಪಯೋಃ ಶಾರ್ಙ್ಗಲೋಹಯೋಃ ।**
**ದಾರು ಚಾಪಪ್ರಮಾಣಂ ತು ಶ್ರೇಷ್ಠಂ ಹಸ್ತಚತುಷ್ಟಯಂ ॥ ೩ ॥**

---

## ಹದಿನಾರನೆಯ ಅಧ್ಯಾಯವು.

೧. ಪುಷ್ಕರನು ಹೇಳುತ್ತಾನೆ.—ಇನ್ನು ಬಿಲ್ಲು, ಬತ್ತಳಿಕೆ, ಬಾಣಗಳ ವಿಷಯಗಳನ್ನು ತಿಳಿಸುತ್ತೇನೆ, ಕೇಳು. ಧನುಸ್ಸನ್ನು ದ್ರವ್ಯತ್ರಯದಿಂದಲೂ ತಯಾರು ಮಾಡಿಸಬೇಕು. ಧನುಸ್ಸು, ಲೋಹ. ಶೃಂಗ (ಕೊಂಬು), ದಾರು (ಹಗ್ಗ) ಗಳಿಂದ ನಿರ್ಮಿತವಾಗಬೇಕು. ಜ್ಯಾವನ್ನು ಚರ್ಮ, ಬಿದಿರು, ನರಗಳಿಂದ ನಿರ್ಮಿಸಬೇಕು.

೨. ಒಳ್ಳೇ ಬಿದಿರುಮೆಳೆಯಲ್ಲಿ ಹುಟ್ಟಿದ ಘಟ್ಟಿಯಾದ ಬಿದಿರಿನಿಂದ ಬಿಲ್ಲ (ಧನುಸ್ಸ)ನ್ನು ಮಾಡಿಸಬೇಕು. ಮೇಲೆ ಹೇಳಿದ ವಸ್ತುಗಳಿಂದ ಇತರ ವಿಧವಾದ ನಾನಾವಿಧ ಧನುಸ್ಸುಗಳನ್ನೂ ನಿರ್ಮಾಣಮಾಡಬಹುದು.

೩. ಶಾರ್ಙಲೋಹಗಳ ಸಂಬಂಧವಾದ ಬಿಲ್ಲುಗಳಿಗೆ ಪ್ರಮಾಣವಿಷ್ಟೇ ಇರಬೇಕೆಂದು ಹೇಳಿಲ್ಲ. ಮರಗಳಿಂದ ಮಾಡಿಸುವ ಧನುಸ್ಸು ನಾಲ್ಕುಮೊಳವಿರಬೇಕು.

**ತದರ್ಧಸಮಹೀನೇ ತು ಪ್ರೋಕ್ತೇ ಮಧ್ಯಕನೀಯಸೀ ।**
**ಮುಷ್ಟಿಗ್ರಾಹ್ಯಾಣಿ ವೃತ್ತಾನಿ ಮಧ್ಯೇ ಸರ್ವಾಣಿ ಕಾರಯೇತ್ ॥ ೪ ॥**

**ಸ್ವಲ್ಪಾ ಕೋಟಿಸ್ತು ವಾರ್ಕ್ಷಾಣಾಂ ಶಾರ್ಙ್ಗಲೋಹಮಯೀ ದ್ವಿಜ ।**
**ಕಾಮಿನೀ ಭ್ರೂಲತಾಕಾರಾ ಕೋಟಿಃ ಕಾರ್ಯಾ ಸುಸಂಸ್ಕೃತಾ ॥ ೫ ॥**

**ಪೃಥಗ್ವಾ ದಾರುಮಿಶ್ರೇ ವಾ ಲೋಹಶಾರ್ಙ್ಗೇ ತು ಕಾರಯೇತ್ ।**
**ಶಾರ್ಙ್ಗಂ ಸ್ನಾಯುಚಿತಂ ಕಾರ್ಯಂ ರುಕ್ಮಬಿಂದುವಿಭೂಷಿತಂ ॥ ೬ ॥**

**ಕುಟಿಲಸ್ಫುಟಿತಂ ಚಾಪಂ ಸಚ್ಛಿದ್ರಂ ಚ ನ ಶಸ್ಯತೇ ।**
**ಹಸ್ತಿಭಗ್ನಾ ದ್ರುಮಾ ಯೇ ಚ ವಿದ್ಯುದ್ದಗ್ಧಾಸ್ತಥಾ ಚ ಯೇ ॥ ೭ ॥**

---

೪. ಅದರಲ್ಲರ್ಧಪ್ರಮಾಣ ಬಿಲ್ಲಿನ ಮಧ್ಯಪ್ರದೇಶವಾಗಿರಬೇಕು. ಆಚೀಚೆ ಬಗ್ಗಿಸಿದ ಭಾಗವು ಸಮಸಮನಲ್ಲದೆ ಇದ್ದರೂ ಇರಬಹುದು. ಯಾವ ಧನುಸ್ಸನ್ನಾದರೂ ಮುಷ್ಟಿ (ಹಿಡಿ) ಯಲ್ಲಿ ಹಿಡಿದುಕೊಳ್ಳುವಂತಿರಬೇಕು. ಎಲ್ಲ ಬಿಲ್ಲುಗಳೂ ಮಧ್ಯದಲ್ಲಿ ಗುಂಡಾಗಿರಬೇಕು.

೫. ಶಾರ್ಙಲೋಹಮಯವಾದ ಧನುಸ್ಸಾದರೋ ಮರದ ಧನುಸ್ಸಿನಂತೆ ಸ್ವಲ್ಪ ಚಿಕ್ಕದಾಗಿಯೇ ಇರಬೇಕು. ಧನುಸ್ಸನ್ನು ಹೆಂಗಸರ ಹುಬ್ಬಿನಂತೆ ಬಗ್ಗಿಸಿ ಮಾಡಿಸಬೇಕು.

೬. ಶಾರ್ಙಲೋಹದಿಂದ ಬೇರೆ ಧನುಸ್ಸನ್ನಾಗಲಿ, ಮರಮಿಶ್ರವಾದ ಧನುಸ್ಸನ್ನಾಗಲಿ ಮಾಡಿಸಬೇಕು. ಶಾರ್ಙ (ಧನು)ವು ನರಗಳಿಂದ ಬಿಗಿಯಲ್ಪಡಬೇಕು, ಅಥವಾ ಚಿನ್ನದ ದಾರದಿಂದ ಕಟ್ಟಲ್ಪಟ್ಟರೂ ಸರಿ.

೭. ಕುಟಿಲ ಸ್ಫುಟಿತವಾದ ಚಾಪವೂ, ಚೂರುಚೂರು ಮರದಿಂದ ಕೂಡಿಸಿ ಬಗ್ಗಿಸಿದ ಚಾಪವೂ ಪ್ರಶಸ್ತವಾದದ್ದಲ್ಲ. ಆನೆಯ ಸೊಂಡಲಿನಿಂದ ಮುರಿಯಲ್ಪಟ್ಟ ಮರವೂ, ಮಿಂಚು ಬಡಿದು ಸುಟ್ಟುಹೋದ ಮರವೂ ಧನುಸ್ಸಿಗೆ ಯೋಗ್ಯವಲ್ಲ.

ಆರಾಮದೇವತಾವೇಶ್ಮತಾಪಸಾಶ್ರಮಸಂಭವಾಃ ।
ಶ್ಮಶಾನಸಂಭವಾ ಯೇ ಚ ನ ತೇ ಕಾರ್ಯಾಃ ಕಥಂಚನ ॥ ೮ ॥

ಪ್ರಾಣಿನಾಂ ಯಃ ಸಜಾತ್ಯೇನ ಶೃಙ್ಗೇ ಯುಧಿ ನಿಪಾತಿತಃ ।
ತಚ್ಛೃಂಗಂ ವರ್ಜಯೇಚ್ಚಾಪೇ ನಿತ್ಯಂ ಶಾರ್ಙ್ಗೇ ವಿಚಕ್ಷಣಃ ॥ ೯ ॥

ಲೋಹಾನಿ ರಾಮ ಚತ್ವಾರಿ ಶಸ್ಯಂತೇ ಚಾಪಕರ್ಮಣಿ ।
ಸುವರ್ಣಂ ರಜತಂ ತಾಮ್ರಂ ತಥಾ ಕೃಷ್ಣಾಯಸಂ ದ್ವಿಜ ॥ ೧೦ ॥

ಕಾಂಚನಂ ಚಾಪರತ್ನಂ ತು ಸರತ್ನಮಪಿ ಕಾರಯೇತ್ ।
ಮಾಹಿಷಂ ಶಾರಭಂ ಶಾರ್ಙ್ಗಂ ರೌಹೀಜಂ ಚಾಪಿ ಕಾರಯೇತ್ ॥ ೧೧ ॥

ವಾರ್ಕ್ಷಂ ಚಂದನಜಂ ಶ್ರೇಷ್ಠಂ ವೈತಸಂ ಧಾನ್ವತಂ ತಥಾ ।
ಸಾಲಶಾಲ್ಮಲಿಕಾಶಾನಾಂ ಕಕುಭಸ್ಯಾಂಜನಸ್ಯ ಚ ॥ ೧೨ ॥

---

೮. ತೋಟಗಳಲ್ಲಿ ಬೆಳೆಸಿದ ಮರಗಳೂ, ದೇವಸ್ಥಾನಗಳಲ್ಲಿರುವ ಮರಗಳೂ, ಋಷ್ಯಾಶ್ರಮದಲ್ಲಿರುವ ಮರಗಳೂ, ಶ್ಮಶಾನಪ್ರದೇಶದಲ್ಲಿರುವ ಮರಗಳೂ ಧನುರ್ನಿರ್ಮಾಣಕ್ಕೆ ಅರ್ಹವಾದವುಗಳಲ್ಲ.

೯. ಕೊಂಬುಳ್ಳ ಸಜಾತಿಪ್ರಾಣಿಗಳು ಒಂದಕ್ಕೊಂದು ಕಾದಾಡಿ (ಆನೆ ಮುಂತಾದುವು) ಯುದ್ಧದಲ್ಲಿ ಮಡಿದಿದ್ದರೆ ಅಂತಹವುಗಳ ಕೊಂಬುಗಳನ್ನು ಧನುಸ್ಸು ಮಾಡಲು ಉಪಯೋಗಿಸಬಾರದು.

೧೦. ಈ ಚಾಪವನ್ನು ನಿರ್ಮಿಸತಕ್ಕ ಸಂದರ್ಭದಲ್ಲಿ ನಾಲ್ಕು ವಿಧವಾದ ಲೋಹಗಳನ್ನು ಉಪಯೋಗಿಸಬೇಕು. ಅವಾವುವೆಂದರೆ ಚಿನ್ನ, ಬೆಳ್ಳಿ, ತಾಮ್ರ, ಕರೀ ಕಬ್ಬಿಣ.

೧೧. ಚಿನ್ನದ ಧನುಸ್ಸನ್ನು ವಜ್ರಗಳಿಂದ ಕೆತ್ತಿಸಬೇಕು. ಕೊಂಬಿನ ಸಂಬಂಧವಾದ ಧನುಸ್ಸುಗಳಲ್ಲಿ ಮಾಹಿಷ, ಶಾರಭ, ರೋಹೀಜಗಳು ಪ್ರಶಸ್ತವಾದುವು.

೧೨. ಅಥವಾ ಗಂಧದಮರ, ವೇತಸವೃಕ್ಷ, ಧಾನ್ವತವೃಕ್ಷಗಳಿಂದ ಧನುಸ್ಸು ಮಾಡಿಸತಕ್ಕದ್ದು ಮತ್ತೂ ಶ್ರೇಷ್ಠವಾದದ್ದು. ಸಾಲ, ಶಾಲ್ಮಲಿ (ಬೂರಗ), ಕಾಶ ವೃಕ್ಷಗಳಿಂದಲೂ, ಕಕುಭಾಂಜನಾದಿ ವೃಕ್ಷಗಳಿಂದಲೂ ಧನುಸ್ಸನ್ನು ಮಾಡಿಸಬೇಕು.

**ವಂಶಸ್ಯ ಚ ಮಹಾಭಾಗ ಸರ್ವಶ್ರೇಷ್ಠತಮಂ ವಿದುಃ ।**
**ಶರದ್ಗೃಹೀತೈಃ ಕಾಷ್ಠೈಸ್ತು ಚಾಪಂ ಕಾರ್ಯಂ ಪ್ರಯತ್ನತಃ ॥ ೧೩ ॥**

**ವಂಶಾನಾಮಪಿ ತಚ್ಛ್ರೇಷ್ಠಂ ಯತ್ರ ಗಂಗಾ ಮಹಾನದೀ ।**
**ಸಾಲಾನಾಮಪಿ ತಚ್ಛ್ರೇಷ್ಠಂ ಗೋಮತೀ ಯತ್ರ ಭಾರ್ಗವ ॥ ೧೪ ॥**

**ವಿತಸ್ತಾಕೂಲಜಂ ಶ್ರೇಷ್ಠಂ ವೇತಸೀನಾಂ ತಥೈವ ಚ ।**
**ಏವಂ ದ್ರವ್ಯಮಯಂ ಕಾರ್ಯಂ ಚಾಪಂ ಲಕ್ಷಣಸಂಯುತಂ ॥ ೧೫ ॥**

**ಗ್ರಹಣಂ ಲಕ್ಷಣಂ ಚಾಸ್ಯ ಭವಿಷ್ಯತಿ ಚ ಖಡ್ಗವತ್ ।**
**ಸುಖಗ್ರಾಹಂ ದೃಷ್ಟಿಕಾನ್ತಂ ಶರಮೋಕ್ಷಸುಖಂ ತಥಾ ॥ ೧೬ ॥**

---

೧೩. ಇಷ್ಟೆಲ್ಲಾ ಮರಗಳನ್ನು ನಾನು ಧನುಸ್ಸನ್ನು ಮಾಡಲು ಹೇಳಿರುವೆನಾದರೂ, ಎಲ್ಲಕ್ಕಿಂತ ಮುಖ್ಯವಾಗಿ ಬಿದಿರನ್ನು (ಹದವಾಗಿರುವುದನ್ನು) ತಂದು ಹಸೀದಾಗಿದ್ದಾಗಲೇ ಹದವಾಗಿ ಬಗ್ಗಿಸಿ ಬಿಲ್ಲು ಮಾಡಿಡಬೇಕಾದುದು ಪ್ರಶಸ್ತವಾದುದೆಂದು ತಿಳಿದುಕೋ.

೧೪. ಶರತ್ಕಾಲದಲ್ಲಿ ಸಂಗ್ರಹಿಸಿ ತಂದ ಮರಗಳಿಂದಲೇ ಧನುಸ್ಸನ್ನು ಮಾಡಬೇಕು. ಧನುಸ್ಸಿಗೆ ಯೋಗ್ಯವಾದ ಬಿದಿರುಗಳೆಂದರೆ ಗಂಗಾನದೀತೀರದಲ್ಲಿ ದೊರಕುವ ಬಿದಿರುಮೆಳೆಗಳಲ್ಲಿ ಸಿಕ್ಕುವ ಬಿದಿರುಗಳೇ ಶ್ರೇಷ್ಠವಾದುವು. ಸಾಲವೃಕ್ಷಗಳ ಧನುಸ್ಸನ್ನು ಗೋಮತೀನದೀತೀರದಲ್ಲಿ ಬೆಳೆದಿರುವ ಸಾಲವೃಕ್ಷಗಳಿಂದಲೇ ತಂದು ಮಾಡಬೇಕು.

೧೫. ವಿತಸ್ತಾನದೀತೀರದಲ್ಲಿ ಬೆಳೆದಿರುವ ವೇತಸವೃಕ್ಷಗಳನ್ನು ಧನುಸ್ಸಿಗೋಸ್ಕರ ಉಪಯೋಗಿಸತಕ್ಕದ್ದು ಮಹಾಶ್ರೇಷ್ಠವು. ಇದುವರೆಗೆ ಹೇಳಿದ ಲಕ್ಷಣಗಳುಳ್ಳ ಮರಗಳಿಂದ ಮಾಡಿದ ಧನುಸ್ಸು ಉತ್ತಮಜಾತಿಯವೆಂದು ತಿಳಿದುಕೋ.

೧೬. ಮೇಲೆ ಹೇಳಿದ ಲಕ್ಷಣಗಳಿಂದ ಕೂಡಿದ ಮರಗಳಲ್ಲಿ ಧನುಸ್ಸನ್ನು ಮಾಡಿಸಿದ ಬಳಿಕ, ಅವು ನೋಡುವುದಕ್ಕೆ ಅಂದವಾಗಿರಬೇಕು. ಕೈಯಲ್ಲಿ ಹಿಡಿಯಲು ಹದವಾಗಿರಬೇಕು. ಬಾಣಗಳನ್ನು ಜೋಡಿಸಿ, ಬಿಡುವಾಗ ಸುಖವಾಗಿರಬೇಕು. ಹದವಾದ ಖಡ್ಗದಂತೆ, ಹದವಾದ ಧನುಸ್ಸೂ ಸಹ ಸರಿಯಾದ ಹಿಡಿತದಲ್ಲಿ ಹಿಡಿಯುವಂತಿರಬೇಕು.

**ಶ್ಲಕ್ಷ್ಣಂ ಶ್ಲಿಷ್ಟಂ ಸುಸಂಸ್ಥಾನಂ ಸಾರವಂತಂ ಸುಸಂಹತಂ ।**
**ಅವನಾಮಸುಖಂ ನಿತ್ಯಂ ಪುಂನಾಮನವಲೋತ್ಕಟಂ ॥ ೧೭ ॥**

**ಏತದೀದೃಶಕಂ ಶ್ರೇಷ್ಠಂ ಚಾಪರತ್ನಂ ವಿದುರ್ಬುಧಾಃ ।**
**ರಾಜ್ಞಾ ಚಾಪಸ್ಯ ಕರ್ತವ್ಯಾ ಪೂಜಾ ಬಾಣವರಸ್ಯ ಚ ॥ ೧೮ ॥**

**ನಿತ್ಯಂ ದೇವಕುಲೇ ರಾಮ ಖಡ್ಗಸ್ಯ ಚ ವಿಶೇಷತಃ ।**
**ಅಯಸಶ್ಚಾಥ ವಂಶಸ್ಯ ಶರಸ್ಯಾಥ ಶರೋ ಭವೇತ್ ॥ ೧೯ ॥**

**ಶರವಂಶೌ ಗ್ರಹೀತವ್ಯೌ ಶರತ್ಕಾಲೇ ಭೃಗೂತ್ತಮ ।**
**ಶರಾಃ ಕಿರಾತಜಾಃ ಶ್ರೇಷ್ಠಾಃ ಕಾಂಚೀಪುರಸಮೀಪತಃ ॥ ೨೦ ॥**

---

೧೭. ಬಿಲ್ಲಿನ ತುದಿ ಸರಿಯಾಗಿರಬೇಕು. ಬಲವಾಗಿ ಕಟ್ಟಿರಬೇಕು. ಕಠಿನವಾಗಿರಬೇಕು. ಹದವಾಗಿ ಬಗ್ಗಿರಬೇಕು. ಇಂತು ಬಹು ಬಲವಾಗಿರುವ ಬಿಲ್ಲು ಶ್ರೇಷ್ಠವಾದುದು.

೧೮. ಇಂತಹ ಸಲಕ್ಷಣವಾದ ಧನುಸ್ಸುಗಳನ್ನು ಚಾಪರತ್ನಗಳೆಂದು ಪ್ರಾಜ್ಞರು ಹೇಳಿರುವರು. ಇಂತಹ ಚಾಪರತ್ನವನ್ನೂ ಬಾಣಗಳನ್ನೂ ಮಹಾರಾಜನು ಮಾಡಿಸಿ ಆಯುಧಶಾಲೆಯಲ್ಲಿರಿಸಿ ಪೂಜೆಮಾಡಬೇಕು.

೧೯. ಮತ್ತು ಕತ್ತಿಗಳನ್ನೂ ಸಹ ಪೂಜಿಸಬೇಕು. ಎಲೈ ಪರಶುರಾಮನೇ! ಇವು ದೇವಕುಲದಲ್ಲುತ್ಪನ್ನವಾಗಿರಬೇಕು. ಬಾಣಗಳನ್ನು ಕಬ್ಬಿಣದ ಸರಳುಗಳ ರೂಪವಾಗಿಯಾಗಲೀ, ಬಿದಿರನ್ನೂರೆದು ಹದವಾಗಿ ಮೊನೆಗಳನ್ನುಳ್ಳವುಗಳನ್ನಾಗಿಯಾಗಲೀ ಮಾಡಿಸಿಟ್ಟುಕೊಳ್ಳಬೇಕು.

೨೦. ಬಾಣಗಳಿಗೆ ಬೇಕಾದ ಬಿದಿರುಗಳನ್ನೂ ಸಹ ಶರತ್ಕಾಲದಲ್ಲಿಯೇ ಸಂಗ್ರಹಿಸಿಟ್ಟುಕೊಳ್ಳಬೇಕು. ಕಿರಾತದೇಶಗಳಲ್ಲಿಯೂ, ಕಾಂಚೀನಗರದ ಸಮೀಪವನದಲ್ಲಿಯೂ ಇರುವ ವನಗಳಲ್ಲಿ ಬೆಳೆದಿರುವ ಬಿದಿರುಮೆಳೆಗಳ ಬಾಣಗಳು ಬಹು ಒಳ್ಳೆಯವು.

ತೇ ಭ್ಯೋಽಪಿ ತೇ ಶ್ರೇಷ್ಠತಮಾಃ ಸ್ಕಂದಜನ್ಮಮಹೀಭವಾಃ ।
ಸ್ನಿಗ್ಧಾ ನಿಮಗ್ನಪರ್ವಾಣಃ ಸಾರವಂತಃ ಸಮಾಹಿತಾಃ ॥ ೨೧ ॥

ಋಜವೋ ಮಧುವರ್ಣಾಭಾಃ ಸುಜಾತಾಃ ಶಾರದಾ ದೃಢಾಃ ।
ಸ್ನಾಯುಶ್ಲಿಷ್ಟಾಃ ಸುನೇತ್ರಾಶ್ಚ ಸುಪುಂಖಾಃ ಕಲವಾಸಸಃ ॥ ೨೨ ॥

ತೈಲಧೌತಾಶ್ಚ ಕರ್ತವ್ಯಾ ರುಕ್ಮಪುಂಖ ವಿಭೂಷಣಾಃ ।
ತಥಾ ವಿಷಮಪರ್ವಾಣಃ ಫಲೈಶ್ಚ ವ್ರಣವರ್ಜಿತೈಃ ॥ ೨೩ ॥

ಏಕಂ ತ್ರಿಪುಂಖಂ ಕರ್ತವ್ಯಂ ರಾಜಹಂಸಚ್ಛದೋತ್ತರಂ ।
ರುಕ್ಮಪುಂಖಸುವರ್ಣಾಗ್ರಮಯಃಫಲಮನುತ್ತಮಂ ॥ ೨೪ ॥

---

೨೧. ಕುಮಾರಸ್ವಾಮಿಯು ಅವತರಿಸಿದ ಶರವಣವೆಂಬ ಸ್ಥಳದಲ್ಲಿ ಬೆಳೆದ ಬಿದಿರಂತೂ ಬಹಳ ಉತ್ತಮವಾದುವು. ಈ ಬಿದಿರುಗಳು ಬಹು ಮನೋಹರ ವಾಗಿರುವುವಲ್ಲದೆ ಬಗ್ಗಿಸುವುದಕ್ಕೆ ಅನುಕೂಲವಾಗಿರುವ ಗಿಣ್ಣುಗಳನ್ನು ಹೊಂದಿರುತ್ತವೆ. ಇವುಗಳಷ್ಟು ಬಲವಾದ ಬಿದಿರು ಇನ್ನೆಲ್ಲೂ ದೊರೆಯುವುದಿಲ್ಲ.

೨೨. ಬಿದಿರುಕೋಲುಗಳು ಋಜು (ಉದ್ದ)ವಾಗಿರಬೇಕು. ಜೇನುತುಪ್ಪದ ಬಣ್ಣದಂತೆ ಇರಬೇಕು. ಒಳ್ಳೇ ಜಾಗದಲ್ಲಿ ಬೆಳೆದಿರಬೇಕು. ಅದರ ಕಣ್ಣುಗಳು ಚೆನ್ನಾಗಿರಬೇಕು. ಸರಗಳನ್ನು ಕಟ್ಟಲು ಹದವಾಗಿರಬೇಕು.

೨೩. ಎಣ್ಣೆ ಬಣ್ಣಗಳನ್ನು ಧನುರ್ಬಾಣಗಳಿಗೆ ಬಳಿದಿರಬೇಕು. ಪ್ರತಿಯೊಂದಕ್ಕೂ ಚಿನ್ನದ ಗರಿಯನ್ನು ಹಾಕಿಸಬೇಕು. ಅವು ಕಚ್ಚುಕಚ್ಚಾಗಿರಕೂಡದು. ಗಿಣ್ಣುಗಳು ಬೆಸನಾಗಿರಬೇಕು.

೨೪. ಹಂಸಪಕ್ಷಿಯ-ಗರಿಯ ಬಣ್ಣದಂತೆ ಬಹು ಶುಭ್ರವಾದ ಮೂರು ರೆಕ್ಕೆಗಳನ್ನು ಬಾಣಗಳಿಗೆ ಹಾಕಿಸಿರಬೇಕು. ಅದರ ತುದಿಯು ಚಿನ್ನದಿಂದ ಬಲು ಮೊನೆಯಾಗಿ ಮಾಡಿಸಲ್ಪಟ್ಟಿರಬೇಕು.

ಸ್ನಾಯುಬದ್ಧಂ ಬಲಂ ತಸ್ಯ ರುಕ್ಮಬಂಧಂ ತು ಕಾರಯೇತ್ ।
ವಜ್ರೈಶ್ಚ ಲಕ್ಷಣೋಪೇತೈಶ್ಚಿತ್ರಿತಂ ತಂ ತು ಕಾರಯೇತ್ ॥ ೨೫ ॥

ಗ್ರಹಣಂ ತಸ್ಯ ಕರ್ತವ್ಯಂ ಸಾಂವತ್ಸರಕರಾನ್ನೃಪೈಃ ।
ತಸ್ಯ ಪೂಜಾ ಸದಾ ಕಾರ್ಯಾ ಸಾಽಭಿಷೇಕಸಮಾ ಭವೇತ್ ॥ ೨೬ ॥

ಯಾತ್ರಾಯಾ ಮಭಿಷೇಕೇ ಚ ಮಂಗಲೇಷು ಚ ಕರ್ಮಸು ।
ಸ ಪತಾಕೇ ತು ತಂ ಚಾಪಂ ಸಪತಾಕಂ ತು ಕಾರಯೇತ್ ।
ಮಂಗಲ್ಯಂ ತನ್ನರೇಂದ್ರಾಣಾಂ ಕಥಿತಂ ಭೃಗುನಂದನ ॥ ೨೭ ॥

ಯೇ ಚಾಪರತ್ನಂ ವಿನತಂ ತು ಭೂಪಾಃ ।
ಸುವರ್ಣರತ್ನೋಪಚಿತಂ ಸದೈವ ।

---

೨೫. ಧನುಸ್ಸನ್ನು ನರಗಳಿಂದ ಬಿಗಿದು ಬಗ್ಗಿಸಿರಬೇಕು. ಧನುಸ್ಸಿಗೆ ಚಿನ್ನದ ಕಟ್ಟನ್ನು ಹಾಕಿಸಿರಬೇಕು. ಆ ಚಿನ್ನದ ಕಟ್ಟಿಗೆಲ್ಲಾ ನವರತ್ನಗಳನ್ನು ಬಹು ವಿಚಿತ್ರವಾಗಿರುವಂತೆ ಕೆತ್ತಿಸಿ ಚಿತ್ರಕೆಲಸ ಮಾಡಿಸಿರಬೇಕು.

೨೬. ಅಂತಹ ಚಾಪರತ್ನವನ್ನು ಜೋಯಿಸನ ಕೈಯಿಂದ ರಾಜನು ಪರಿಗ್ರಹಿಸಿ ಅದನ್ನು ಪೂಜೆಮಾಡಬೇಕು. ಇಂತಹ ಧನುಸ್ಸನ್ನು ಪೂಜೆಮಾಡಿದರೆ ಒಬ್ಬ ರಾಜನಿಗೆ ಪಟ್ಟಾಭಿಷೇಕ ಮಾಡಿದಂತೆ ಆಗುತ್ತದೆ.

೨೭. ಯಾತ್ರೆ ಹೊರಡುವ ಸಮಯದಲ್ಲೂ, ಅಭಿಷೇಕ ಸಮಯದಲ್ಲಿಯೂ, ಮಂಗಳಕಾರ್ಯಗಳನ್ನಾರಂಭಿಸಿದಾಗಲೂ ಧನುಸ್ಸಿಗೆ ಬಾವುಟಗಳನ್ನು ಕಟ್ಟಿ ಪೂಜೆ ಮಾಡಿದರೆ ರಾಜರಿಗೆ ಶುಭವಾಗುವುದು.

೨೮. ಅಯ್ಯಾ! ಪರಶುರಾಮನೇ! ಕೇಳು. ಯಾವ ಮಹಾರಾಜನಾದವನು ಬಗ್ಗಿಸಿದ ಧನುಸ್ಸಿಗೆ ಸುವರ್ಣರತ್ನಗಳಿಂದ ಅಲಂಕಾರ ಮಾಡಿ, ಅದರೊಡನೆ ಬಾಣ

**ಬಾಣೇನಸಾಕಂ ಪರಿಪೂಜಯಂತಿ ।**
**ಭವಂತಿ ತೇ ರಾಮ ವಿಪನ್ನದುಃಖಾಃ ॥ ೨೮ ॥**

**ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಚಾಪಶರಲಕ್ಷಣಂ ನಾಮ ಷೋಡಶೋಽಧ್ಯಾಯಃ**

---

ವನ್ನೂ ಇಟ್ಟು ಭಕ್ತಿಯಿಂದ ಪೂಜಿಸುತ್ತ ಬರುವನೋ, ಅಂತಹ ಮಹಾರಾಜನು ಸಕಲ ದುಃಖಗಳನ್ನೂ ಕಳೆದುಕೊಂಡು ಸುಖವನ್ನನುಭವಿಸುತ್ತಾನೆ; ಕೇಳಯ್ಯಾ! ಹೀಗೆಂದು ಪರಶುರಾಮನಿಗೆ ಪುಷ್ಕರನು ನುಡಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಚಾಪಶರಲಕ್ಷಣವೆಂಬ ಹೆಸರಿನ ಹದಿನಾರನೆಯ ಅಧ್ಯಾಯ ಮುಗಿಯಿತು.



॥ ಶ್ರೀ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಸಪ್ತದಶೋಽಧ್ಯಾಯಃ

### ಪುಷ್ಕರ ಉವಾಚ

ಪುರಾ ಸುಮೇರುಶಿಖರೇ ಕಾಂಚನೇ ರತ್ನಪರ್ವತೇ ।
ಸ್ವರ್ಗಂಗಾಯಾಸ್ತಟೇ ಬ್ರಹ್ಮಾ ಯಜ್ಞಂ ಯಜತಿ ಭಾರ್ಗವ ॥ ೧ ॥

ತಸ್ಮಿನ್ಯಜ್ಞೇ ಸ ದದೃಶೇ ವಿಘ್ನಂ ಖೇ ಲೋಹದಾನವಂ ।
ವಿಘ್ನಸ್ಯ ಶಮನಂ ತಸ್ಯ ಚಿಂತಯಾಮಾಸ ತತ್ವವಿತ್ ॥ ೨ ॥

ತದಾ ಚಿಂತಯತಸ್ತಸ್ಯ ಪುರುಷಃ ಪಾವಕಾದ್ಬಭೌ ।
ನೀಲೋತ್ಪಲದಲಶ್ಯಾಮಃ ಸ್ವರುಚಾ ವಂಚಿತೇಕ್ಷಣಃ ॥ ೩ ॥

---

## ಹದಿನೇಳನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ.—ಕೇಳಯ್ಯಾ! ಪರಶುರಾಮ! ಈಗ ನಿನಗೊಂದು ಕಥೆಯನ್ನು ಹೇಳುತ್ತೇನೆ. ಪೂರ್ವಕಾಲದಲ್ಲಿ ಬ್ರಹ್ಮನು ದೇವಗಂಗಾನದಿಯ ತೀರದಲ್ಲಿರುವ ಕಾಂಚನಮಯವಾದ ರತ್ನಪರ್ವತವೆನಿಸಿದ ಮೇರುಪರ್ವತದ ಶಿಖರದಲ್ಲಿ ಒಂದಾನೊಂದು ಯಜ್ಞವನ್ನು ಮಾಡಲು ಆರಂಭಿಸಿದನು

೨. ಆರೀತಿ ಯಜ್ಞವನ್ನಾರಂಭಿಸಿದೊಡನೆಯೇ ಲೋಹರಾಕ್ಷಸನೆಂಬುವನು ಬಂದು ಯಜ್ಞಕ್ಕೆ ವಿಘ್ನಮಾಡಲು ಪ್ರಯತ್ನಪಟ್ಟನು. ಆಗ ತತ್ವವೇತ್ತನಾದಾ ಬ್ರಹ್ಮನು ಈ ವಿಘ್ನವನ್ನೆಂತು ಪರಿಹರಿಸಬೇಕೆಂದು ಆಲೋಚನೆಮಾಡತೊಡಗಿದನು.

೩. ಹೀಗೆ ಯೋಚನೆಮಾಡುತ್ತಿರುವಷ್ಟರಲ್ಲಿಯೇ ತನ್ನ ತೇಜಸ್ಸಿನಿಂದ ಜನರ ಕಣ್ಣನ್ನು ಕುಕ್ಕುವಂತೆ ಪ್ರಕಾಶಿಸುತ್ತಲಿದ್ದ ನೀಲೋತ್ಪಲದಳದಂತೆ ಶ್ಯಾಮಲವರ್ಣವುಳ್ಳ ಒಬ್ಬಾನೊಬ್ಬ ಮನುಷ್ಯನು ಯಜ್ಞಾಗ್ನಿಮಧ್ಯದಿಂದ ಮೇಲಕ್ಕೆದ್ದು ಬಂದನು.

ಪ್ರಾಂಶುಃ ಸುವದನಃ ಶ್ರೀಮಾನ್ಬಲೇನಾಪ್ರತಿಮೋ ಭುವಿ ।
ಸ ವವಂದೇ ತದಾ ಗತ್ವಾ ದೇವಂ ಕಮಲಸಂಭವಂ ॥ ೪ ॥

ಅಭ್ಯನಂದತ ಜಾತೇನ ತೇನದೇವಾಸ್ಸವಾಸವಾಃ ।
ತಸ್ಮಾತ್ಸ ನಂದಕೋ ನಾಮ ಖಡ್ಗರತ್ನಮಭೂತ್ತದಾ ॥ ೫ ॥

ತಂ ದೃಷ್ಟ್ವಾ ಭಗವಾನ್ಬ್ರಹ್ಮಾ ಕೇಶವಂ ವಾಕ್ಯಮಬ್ರವೀತ್ ।
ಖಡ್ಗಂ ಗೃಹ್ಣೀಷ್ವ ಗೋಪ್ತಾರಂ ಧರ್ಮಸ್ಯ ಜಗತಾಂ ಪತೇ ॥ ೬ ॥

ಯಜ್ಞವಿಘ್ನಕರಂ ಹತ್ವಾ ಖಡ್ಗೇನಾನೇನ ಕೇಶವ ।
ನಿಪಾತಯ ಮಹಾಬಾಹೋ ಬಲಿನಂ ಲೋಹದಾನವಂ ॥ ೭ ॥

---

೪. ಅವನು ಬಲು ಎತ್ತರವಾಗಿದ್ದನು. ಬಹು ಸೌಂದರ್ಯವಾದ ಮುಖವುಳ್ಳ ಆ ಅಪ್ರತಿಮ ಬಲಶಾಲಿಯು ಅಗ್ನಿಮಧ್ಯದಿಂದ ಮೇಲಕ್ಕೆ ಬಂದೊಡನೆಯೇ ಯಜ್ಞ ಯಜಮಾನನಾದ ಬ್ರಹ್ಮನ ಪಾದಗಳಿಗೆ ಸಾಷ್ಟಾಂಗವಾಗಿ ನಮಸ್ಕಾರಮಾಡಿದನು.

೫. ಈರೀತಿ ಎದ್ದುಬಂದ ಮನುಷ್ಯನನ್ನು ನೋಡಿ ಇಂದ್ರಾದಿ ಸಕಲದೇವತೆಗಳೂ ಪರಮಾನಂದಭರಿತರಾಗಿರುವುದರೊಳಗಾಗಿ ಆ ಅಗ್ನಿಪುತ್ರನಿಂದೊಂದು ಖಡ್ಗವು ಉತ್ಪನ್ನವಾಯಿತು. ಅದೇ ನಂದಕವೆಂಬ ಖಡ್ಗವು.

೬. ಈರೀತಿ ನಂದಕವು ಉತ್ಪನ್ನವಾದೊಡನೆಯೇ, ಅದನ್ನು ನೋಡಿ ಬ್ರಹ್ಮನು ಮಹಾವಿಷ್ಣುವನ್ನು ತನ್ನ ಹತ್ತಿರಕ್ಕೆ ಕರೆದು, ಇದನ್ನು ನಿನ್ನ ಕೈಗೆ ತೆಗೆದುಕೋ. ಇದರಿಂದ ಧರ್ಮವನ್ನು ಕಾಪಾಡು.

೭. ಈಗ ನಾನು ಮಾಡುತಲಿರುವ ಯಜ್ಞವನ್ನು ಹಾಳುಮಾಡುವುದಕ್ಕಾಗಿ ಇಲ್ಲಿಗೆ ಬಂದು ನಿಂತಿರುವ ಮಹಾಪ್ರಳಯರೂಪನಾದ ಲೋಹದಾನವನನ್ನು ನೀನು ಹಿಂದುಮುಂದು ನೋಡದೆ ಕೊಂದುಬಿಡು.

**ಇತ್ಯೇವಮುಕ್ತೋ ಜಗ್ರಾಹ ಗ್ರೀವಯಾ ತಂ ಜನಾರ್ದನಃ ।**
**ಗೃಹೀತಮಾತ್ರೇ ದೇವೇನ ವಿಕೋಶಃ ಸಮುಪದ್ಯತ ॥ ೮ ॥**

**ಖಡ್ಗಃ ಕಮಲಪತ್ರಾಕ್ಷೋ ನೀಲೋತ್ಪಲಸಮದ್ಯುತಿಃ ।**
**ರತ್ನಮುಷ್ಟಿರ್ಮಹಾನ್ರಾಮ ನಿರ್ಮಲಾಕಾಶ ಸನ್ನಿಭಃ ॥ ೯ ॥**

**ಏತಸ್ಮಿನ್ನಂತರೇ ತತ್ರ ವ್ಯದೃಶ್ಯತ ತದಾ ಮಹಾನ್ ।**
**ಕರಾಲಃ ಕೃಷ್ಣವದನಃ ಶತಬಾಹುರ್ಮಹೋದರಃ ॥ ೧೦ ॥**

**ಪ್ರಾಂಶುಃ ಸುವೃತ್ತದಂಷ್ಟ್ರಾಗ್ರೋ ಬಲವಾನ್ಲೋಹದಾನವಃ ।**
**ಯಜ್ಞವಿಘ್ನಾರ್ಥಿನಂ ಪ್ರಾಪ್ತಂ ಸ ದೃಷ್ಟ್ವಾ ಲೋಹದಾನವಂ ॥ ೧೧ ॥**

---

೮. ಬ್ರಹ್ಮನು ಹೀಗೆ ಹೇಳಿದೊಡನೆಯೇ ಮಹಾವಿಷ್ಣುವು ಆ ಕತ್ತಿಯ ಒರೆಯನ್ನು ಕೈಗೆ ತೆಗೆದುಕೊಂಡನು. ಕೈಗೆ ತೆಗೆದುಕೊಂಡೊಡನೆಯೇ ಆ ಕತ್ತಿಯ ಒರೆಯು ಕಳಚಿಹೋಯಿತು.

೯. ಆ ಕತ್ತಿಯು ಕಮಲಪತ್ರದಂತೆ ಪ್ರಕಾಶಿಸುತ್ತಿತ್ತು. ನೀಲೋತ್ಪಲ ಪುಷ್ಕರಕಾಂತಿಯನ್ನು ಅಣಕಿಸುತ್ತಿತ್ತು. ಅದಕ್ಕೆ ರತ್ನದ ಹಿಡಿಯನ್ನು ಹಾಕಿದ್ದರು. ಅದು ನಿರ್ಮಲವಾದ ಆಕಾಶದಂತೆ ಕಂಗೊಳಿಸುತಲಿದ್ದಿತು.

೧೦. ಆಗ ಖಡ್ಗಧಾರಿಯಾದ ಆ ಕೇಶವನ ಕಣ್ಣಿಗೆ ಬಲು ಕಪ್ಪಾಗಿಯೂ, ಕೃಷ್ಣಮುಖವುಳ್ಳವನಾಗಿಯೂ, ನೂರು ತೋಳುಗಳುಳ್ಳವನಾಗಿಯೂ, ದಪ್ಪಹೊಟ್ಟೆ ಯಿಂದಲೂ ಕೂಡಿದ್ದ ಬಹು ಭಯಂಕರನಾದ ಲೋಹದಾನವನು ದೃಗ್ಗೋಚರ ನಾದನು.

೧೧. ಆ ದಾನವನು ಬಲು ಎತ್ತರವಾಗಿದ್ದನು. ಅವನ ಕೋರೆದಾಡೆಗಳು ದುಂಡಾಗಿ ಕಾಣುತಲಿದ್ದುವು. ಮಹಾಪ್ರಬಲಶಾಲಿಯಾದಾ ಲೋಹದಾನವನು ಯಜ್ಞಶಾಲೆಗೆ ನುಗ್ಗಿ ಯಜ್ಞಪದಾರ್ಥಗಳನ್ನು ನಾಶಮಾಡಿ ವಿಘ್ನಮಾಡಲು ಪ್ರಯತ್ನಿಸಿದನು.

ಖಡ್ಗಮಾದಾಯ ವೇಗೇನ ಯಯೌ ತಂ ಪ್ರತಿ ಕೇಶವಃ ।
ಸ ಕೇಶವಮನಾದೃತ್ಯ ದೇವಾನ್ಶಕ್ರಪುರೋಗಮಾನ್ ॥ ೧೨ ॥

ವಿದ್ರಾವಯಾಮಾಸ ತದಾ ಗದಯಾ ಭೀಮವೇಗಯಾ ।
ತದಾ ಭಗ್ನೇಷು ದೇವೇಷು ಯುದ್ಧಂ ಕೃತ್ವಾ ಹರಿಶ್ಚಿರಂ ॥ ೧೩ ॥

ಖಡ್ಗೇನ ತಸ್ಯ ಗಾತ್ರಾಣಿ ಚಿಚ್ಛೇದ ಮಧುಹಾ ರಣೇ ।
ಖಡ್ಗಛಿನ್ನಾನಿ ಗಾತ್ರಾಣಿ ನಾನಾದೇಶೇಷು ಭೂತಲೇ ॥ ೧೪ ॥

ನಿಪೇತುಸ್ತಸ್ಯ ಧರ್ಮಜ್ಞ ಶತಶೋಽಥ ಸಹಸ್ರಶಃ ।
ನಂದಕಸ್ಯ ತು ಸಂಸ್ಪರ್ಶಾತ್ತಾನಿ ಗಾತ್ರಾಣಿ ಭಾರ್ಗವ ॥ ೧೫ ॥

ಲೋಹೀಭೂತಾನಿ ಸರ್ವಾಣಿ ಪ್ರಸಾದಾತ್ಕೇಶವಸ್ಯ ತು ।
ಹತಾಯಾಸ್ಮೈ ವರಂ ಪ್ರಾದಾದ್ಭಗವಾನ್ಮಧುಸೂದನಃ ॥ ೧೬ ॥

---

೧೨-೧೩. ಆಗ ಮಹಾವಿಷ್ಣುವು ಆ ದಾನವನ ಕತ್ತನ್ನು ಕತ್ತರಿಸಬೇಕೆಂದು ಅವನ ಹತ್ತಿರ ಓಡಿಹೋದನು. ಆ ರಾಕ್ಷಸನು ಮಹಾವಿಷ್ಣುವನ್ನು ಸ್ವಲ್ಪವೂ ಲಕ್ಷ್ಯಮಾಡದೆ ಕೈಯಲ್ಲೊಂದು ಗದೆಯನ್ನು ಹಿಡಿದು, ಅದರಿಂದ ದೇವತೆಗಳನ್ನು ಹೊಡೆಯಲಾರಂಭಿಸಲು ಅವರು ಯಜ್ಞಶಾಲೆಯನ್ನು ಬಿಟ್ಟು ಓಡಿಹೋಗತೊಡಗಿದರು. ಇಂದ್ರಾದಿದೇವತೆಗಳು ಹೀಗೆ ಓಡಿಹೋಗುತ್ತಿರಲು ಲೋಹದಾನವನು ಅವರನ್ನು ಬೆನ್ನಟ್ಟಿ ಹಿಡಿದು ಹೊಡೆದು ಬಲವಾಗಿ ಹಿಂಸಿಸಿದನು. ಆಗ ಮಹಾವಿಷ್ಣುವು ಅವನನ್ನು ಹಿಡಿದು ನಿಲ್ಲಿಸಿ ಅವನೊಡನೆ ಬಹಳಹೊತ್ತು ಯುದ್ಧವಾಡಿದನು.

೧೪. ಯುದ್ಧಾನಂತರದಲ್ಲಿ ಮಹಾವಿಷ್ಣುವು ಅಗ್ನಿಮುಖದಿಂದ ತನ್ನ ಕೈಗೆ ಬಂದಿದ್ದ ನಂದನ (ಖಡ್ಗ)ದಿಂದ ಅವನ ಕೈಯನ್ನೂ ತಲೆಯನ್ನೂ ಚೂರುಚೂರಾಗಿ ಕತ್ತರಿಸಿಬಿಟ್ಟನು. ಆ ರಾಕ್ಷಸನ ದೇಹದ ಚೂರುಗಳು ದಿಕ್ಕು-ದಿಕ್ಕುಗಳಲ್ಲಿ ಚೆದರಿ ಬಿದ್ದುವು.

೧೫. ನಂದಕದ ಸ್ಪರ್ಶಮಾತ್ರದಿಂದಲೇ ಲೋಹದಾನವನ ಶರೀರವು ನೂರಾರು ಸಾವಿರಾರು ಪಾಲಾಗಿ ಎಲ್ಲೆಲ್ಲಿಯೂ ರಾಶಿರಾಶಿಯಾಗಿ ಬಿದ್ದಿತು.

೧೬. ಈರೀತಿ ರಾಶಿರಾಶಿಯಾಗಿ ಬಿದ್ದ ಲೋಹದಾನವನ ದೇಹದ ಚೂರುಗಳೆಲ್ಲವೂ ಕೇಶವನ ಮಹಾಪ್ರಸಾದದಿಂದ ಲೋಹಗಳಾಗಿ ಪರಿಣಮಿಸಿದುವು. ಸತ್ತು ಬಿದ್ದ ಲೋಹದಾನವನಿಗೆ ಭಗವಂತನು ಆಗ ವರವನ್ನಿಂತು ಕೊಟ್ಟನು ;—

**ತ್ವದಂಗಾನಿ ಪವಿತ್ರಾಣಿ ಭವಿಷ್ಯಂತಿ ಮಹೀತಲೇ ।**
**ಆಯುಧಾನಿ ಚ ತ್ರೈಲೋಕೇ ಕರಿಷ್ಯಂತೀಹ ಮಾನವಾಃ ॥ ೧೭ ॥**

**ಏವಮುಕ್ತ್ವಾ ಹರಿರ್ದೇವೋ ಬ್ರಾಹ್ಮಣಂ ವಾಕ್ಯಮಬ್ರವೀತ್ ।**
**ವಿನಾ ವಿಘ್ನಂ ಮಖಮಿದಂ ಕುರುಶೀಘ್ರಂ ಜಗದ್ಗುರೋ ॥ ೧೮ ॥**

**ಏವಮುಕ್ತಸ್ತದಾ ಬ್ರಹ್ಮಾ ಯಜ್ಞೇನ ಮಧುಸೂಧನಂ ।**
**ಆತ್ಮನಾ ಪೂಜಯಾಮಾಸ ಸುಸಮಿದ್ಧ ಮನೋರಥಃ ॥ ೧೯ ॥**

**ಉತ್ಪತ್ತಿರುಕ್ತಾ ಖಡ್ಗಸ್ಯ ಲೋಹಸ್ಯ ಚ ಮಯಾ ತವ ।**
**ಅತಃ ಪರಂ ಪ್ರವಕ್ಷ್ಯಾಮಿ ಖಡ್ಗಲಕ್ಷಣಮುತ್ತಮಂ ॥ ೨೦ ॥**

---

೧೭. ನಿನ್ನೀ ಅಂಗದ ಚೂರುಗಳು ಲೋಕದಲ್ಲಿ ಪರಮಶ್ರೇಷ್ಠಗಳೆಂದು ಹೆಸರನ್ನು ಹೊಂದಲಿ. ನಿನ್ನೀ ದೇಹದ ಮೂಳೆಗಳಿಂದ ಮೂರು ಲೋಕದಲ್ಲೆಲ್ಲರೂ ಆಯುಧಗಳನ್ನು ಮಾಡಿಕೊಳ್ಳಲಿ.

೧೮. ಈ ಪ್ರಕಾರವಾಗಿ ಲೋಹನಿಗೆ ವರವನ್ನು ಕೊಟ್ಟಡನೆಯೇ ಆ ಪರಮಾತ್ಮನು ಬ್ರಹ್ಮನ ಕಡೆ ತಿರುಗಿಕೊಂಡು ಈ ಮಾತನ್ನು ಹೇಳಿದನು:—ಎಲೈ ಜಗದ್ಗುರುವಾದ ಪರಬ್ರಹ್ಮನೇ! ಇನ್ನು ಮುಂದೆ ನೀನು ಯಾವ ವಿಘ್ನವೂ ಇಲ್ಲದೆ ಯಜ್ಞವನ್ನು ನೆರವೇರಿಸು.

೧೯. ಮಹಾವಿಷ್ಣುವಿನಿಂದ ಹೇಳಲ್ಪಟ್ಟ ಈ ಮಾತನ್ನು ಕೇಳಿದೊಡನೆಯೇ ಬ್ರಹ್ಮನು ಪರಮಾನಂದಭರಿತನಾಗಿ ತನ್ನ ಮನೋರಥವು ಕೈಗೂಡಿದುದಕ್ಕಾಗಿ ಸಂತೋಷಪಡುತ್ತಾ ಪರಮಪುರುಷನಾದ ಮಹಾವಿಷ್ಣುವನ್ನು ಯಜ್ಞಮೂಲಕವಾಗಿ ಆರಾಧಿಸಿ ತೃಪ್ತಿಪಡಿಸಿದನು.

೨೦. ಎಲೈ ಪರಶುರಾಮನೆ! ಲೋಹವು ಉತ್ಪತ್ತಿಯಾದ ಚರಿತ್ರೆಯನ್ನು ನಿನಗೀಗ ತಿಳಿಸಿಯಾಯಿತು. ಇನ್ನು ಮುಂದೆ ನಿನಗೆ ಉತ್ತಮವಾದ ಖಡ್ಗದ ಲಕ್ಷಣವನ್ನು ಹೇಳುತ್ತೇನೆ, ಕೇಳೆಂದು ಪುಷ್ಕರನು ಪರಶುರಾಮನಿಗೆ ಹೇಳುತ್ತಾನೆ.

ಪ್ರಧಾನದೇಹಸಂಭೂತೈ ರ್ದೈರ್ಘತ್ಯಾಸ್ಥಿಭಿರರಿಂದಮ ।
ಲೋಹಂ ಪ್ರಧಾನಂ ಖಡ್ಗಾರ್ಥೇ ಪ್ರಶಸ್ತಂ ತದ್ವಿಶೇಷತಃ　　॥ ೨೦ ॥

ಕಟೀಕದೂರಋಷಿಕಂ ವಂಗೇ ಶೂರ್ಪಾರಕರೇಷು ಚ ।
ವಿದೇಹೇಷು ತಥಾಽಂಗೇಷು ಮಧ್ಯಮಂ ಗ್ರಾಮಚೇದಿಷು　　॥ ೨೨ ॥

ಸಹಗ್ರಾಮೇಷು ನೀಪೇಷು ತಥಾ ಕಾಲಂಜರೇಪಿ ಚ ।
ಲೋಹಂ ಪ್ರಧಾನಂ ತಜ್ಞಾನಾಂ ಖಡ್ಗಾನಾಂ ಶೃಣು ಲಕ್ಷಣಂ　　॥ ೨೩ ॥

ಕಟೀಕದೂರಜಾತಾ ಯೇ ದರ್ಶನೀಯಾಸ್ತು ತೇ ಸ್ಮೃತಾಃ ।
ಕಾಯಚ್ಛಿನ್ನಾಸ್ತು ಋಷಿಕಾ ಮರ್ಮಘ್ನಾ ಗುರವಸ್ತಥಾ　　॥ ೨೪ ॥

---

೨೧. ಲೋಹನ ಪ್ರಧಾನ ದೇಹಗಳ ಮೂಳೆಗಳಲ್ಲಿ ಮಾಡಲ್ಪಟ್ಟ ಖಡ್ಗಗಳು ವಿಶೇಷ ಪ್ರಶಸ್ತವಾದುವುಗಳೆಂದು ತಿಳಿದುಕೋ.

೨೨. ಸೊಂಟದ ಮೂಳೆಗಳೂ ಸಹ ಪ್ರಶಸ್ತವಾದುವುಗಳು. ಇವು ವಂಗ ದೇಶಗಳಲ್ಲಿಯೂ, ವಿದೇಹ ಮತ್ತು ಅಂಗದೇಶಗಳಲ್ಲಿಯೂ, ಮಧ್ಯಭಾಗದ ಮೂಳೆ ಯಿಂದುಂಟಾದ ಲೋಹಗಳು ಚೇದಿದೇಶದಲ್ಲೂ ದೊರೆಯುವುವು.

೨೩. ಮತ್ತು ಶ್ರೇಷ್ಠವಾದ ಖಡ್ಗಲೋಹಗಳು ಸಹಗ್ರಾಮಗಳಲ್ಲಿಯೂ, ನೀಪ, ಕಾಳಂಜರ ದೇಶಗಳಲ್ಲೂ ದೊರೆಯುವುವು. ಇಲ್ಲಿ ಸಿಕ್ಕುವ ಪರಮಶ್ರೇಷ್ಠವಾದ ಖಡ್ಗಗಳ ಲಕ್ಷಣವನ್ನು ಹೇಳುತ್ತೇನೆ, ಕೇಳು,

೨೪. ಕಟೀಕದೂರದೇಶದಲ್ಲಿ ಸಿಕ್ಕುವ ಲೋಹಗಳಾವುವುಂಟೋ, ಅವುಗಳು ನೋಡುವುದಕ್ಕೆ ಬಹಳ ಚೆನ್ನಾಗಿರುತ್ತವೆ. ಲೋಹನ ದೇಹವನ್ನು ಕತ್ತರಿಸಿದ ಚೂರುಗಳು ಋಷಿಕದೇಶದಲ್ಲೂ, ಮರ್ಮಭಾಗವನ್ನು ಕತ್ತರಿಸಿದುದರಿಂದ ಹುಟ್ಟಿದ ಲೋಹಗಳು ದಪ್ಪದಪ್ಪಗಾಗಿ ಈ ದೇಶದ ಎಲ್ಲಾ ಪ್ರದೇಶಗಳಲ್ಲೂ ಯಥೇಚ್ಛವಾಗಿ ಸಿಕ್ಕುತ್ತವೆ.

ತೀಕ್ಷ್ಣಶ್ಛೇದಸಹಾ ವಾಂಗಾ ದೃಢಾ ಶೂರ್ಪರಿಕೋದ್ಭವಾಃ ।
ಸುಹಸ್ತಾಶ್ಚೈವ ವಿಜ್ಞೇಯಾ ಪ್ರಭಾವಂತೋ ವಿದೇಹಜಾಃ ॥ ೨೫ ॥

ಅಂಗದೇಶೋದ್ಭವಾಸ್ತೀಕ್ಷ್ಣಾ ಶ್ಚೇದಿದೇಶ ಸಮುದ್ಭವಾಃ ।
ಕಾಲಿಂಜರಾ ಭಾರಸಹಾಸ್ತಥಾ ವಕ್ಷ್ಯಾಮಿ ಲಕ್ಷಣಂ ॥ ೨೬ ॥

ಸುಪ್ರಮಾಣಾಂಗುಲಾಸ್ತೇ ತು ಶ್ರೇಷ್ಠಾ ಖಡ್ಗಾಃ ಪ್ರಮಾಣತಃ ।
ಪ್ರಮಾಣಂ ತತ್ರ ವಿಜ್ಞಾಯ ತತೋ ಹೀನಂ ನಧಾರಯೇತ್ ॥ ೨೭ ॥

ಪ್ರಮಾಣಾಭ್ಯಧಿಕಂ ಚೈವ ಛಿನ್ನವಂಶಂ ತಥೈವ ಚ ।
ಶೀಘ್ರಃ ಸುಮಧುರಃ ಶಬ್ದೋ ಯಸ್ಯ ಖಡ್ಗಸ್ಯ ಭಾರ್ಗವ ॥ ೨೮ ॥

---

೨೫. ವಂಗದೇಶದಲ್ಲೂ, ಶೂರ್ಪರಿಕಾದೇಶದಲ್ಲೂ, ವಿದೇಹದೇಶದಲ್ಲೂ ಸಿಕ್ಕುವ ಖಡ್ಗಗಳು ತೀಕ್ಷ್ಣವಾದ ಅಲಗುಳ್ಳವುಗಳಾಗಿಯೂ, ಬಹು ದೃಢವಾಗಿಯೂ, ಮಹಾ ಪ್ರಕಾಶಮಾನವಾದವುಗಳಾಗಿಯೂ, ಕೈಯಲ್ಲಿ ಹಿಡಿಯಲು ಬಹು ಹದವಾಗಿಯೂ ಇರುತ್ತವೆ.

೨೬. ಅಂಗದೇಶದಲ್ಲಿ ದೊರೆಯುವ ಬಹು ತೀಕ್ಷ್ಣ (ಹರಿತ)ವಾದ ಖಡ್ಗಗಳ ಲಕ್ಷಣವನ್ನೂ, ಚೇದಿದೇಶದಲ್ಲಿ ಸಿಕ್ಕುವ ಕತ್ತಿಗಳ ವೃತ್ತಾಂತವನ್ನೂ, ಬಹು ಭಾರವಾಗಿರುವ ಕಾಳಿಂಜರ ದೇಶದ ಖಡ್ಗಗಳ ವಿಚಾರವನ್ನೂ ಈಗ ಹೇಳುತ್ತೇನೆ, ಕೇಳು.

೨೭. ಕೈಯಲ್ಲಿ ಹಿಡಿಯಲು ಬಹು ಹಿಡಿತವಾಗಿರಬೇಕು. ಸುಪ್ರಮಾಣಾಂಗುಳಿಗಳಿಂದ ಸಮಪ್ರಮಾಣವಾಗಿರಬೇಕು. ಇದಕ್ಕಿಂತ ಹೀನಪ್ರಮಾಣವುಳ್ಳ ಖಡ್ಗಗಳು ಒಳ್ಳೆಯವಲ್ಲ. ಅವನ್ನು ಕೈಯಲ್ಲೇ ಮುಟ್ಟಬಾರದು.

೨೮. ಪ್ರಮಾಣಕ್ಕಿಂತ ದೊಡ್ಡದಾಗಿರುವುದನ್ನೂ, ಬೆಸಿಗೆಹಾಕಿದ ಕತ್ತಿಯನ್ನೂ ಉಪಯೋಗಿಸಬಾರದು. ಯಾವ ಕತ್ತಿಯ ಏಟು ಒಳ್ಳೇ ಮಧುರಸ್ವರದಿಂದ ಕೂಡಿರುವುದೋ, ಬಲುಬೇಗ ಕತ್ತರಿಸಬಲ್ಲುದೋ ಅದು ಒಳ್ಳೆಯದು.

**ಕಿಂಕಿಣೀಸದೃಶಸ್ತಸ್ಯ ಧಾರಣಂ ಶ್ರೇಷ್ಠಮುಚ್ಯತೇ ।**
**ಖಡ್ಗಃ ಪದ್ಮಪಲಾಶಾಗ್ರೋ ಮಂಡಲಾಗ್ರಶ್ಚ ಶಸ್ಯತೇ ॥ ೨೯ ॥**

**ಕರವೀರಪಲಾಶಾಗ್ರ ಸದೃಶಸ್ಯ ವಿಶೇಷತಃ ।**
**ಮಹೀಘೃತಸುಗಂಧಶ್ಚ ಪದ್ಮೋತ್ಪಲಸುಗಂಧಿಕಃ ॥ ೩೦ ॥**

**ವರ್ಣತಶ್ಚೋತ್ಪಲಾಕಾರಃ ಸವರ್ಣೋ ಗಗನಸ್ಯ ಚ ।**
**ಸಮಾಂಗುಲಸ್ಥಾಃ ಶಸ್ಯಂತೆ ವ್ರಣಾಃ ಖಡ್ಗೇಷು ಭಾರ್ಗವ ॥ ೩೧ ॥**

**ಶ್ರೀವೃಕ್ಷಪರ್ವತಾಕಾರವಂಶಪದ್ಮನಿಭಾಶ್ಚ ಯೇ ।**
**ಮಂಗಲ್ಯಾನಾಂ ತಥಾऽನ್ಯೇಷಾಂ ಸದೃಶಾ ಯೇ ಚ ಭಾರ್ಗವ ॥ ೩೨ ॥**

---

೨೯. ಕಿರುಗಂಟೆಯನ್ನಲ್ಲಾಡಿಸಿದರೆ ಯಾವತರಹೆ ಸದ್ದು ಹೊರಡುವುದೋ, ಅಂತಹ ಶಬ್ದವನ್ನುಳ್ಳ ಕತ್ತಿಯು ಬಹಳ ಶ್ರೇಷ್ಠವಾದದ್ದು, ಪದ್ಮಪಲಾಶಾಗ್ರದಂತೆ ಶೋಭಿಸುವ ಕತ್ತಿಯೂ, ಮಂಡಲಾಗ್ರದಂತಿರುವ ಕತ್ತಿಯೂ ಶ್ರೇಷ್ಠವಾದುವುಗಳೆಂದು ತಿಳಿಯಬೇಕು.

೩೦. ಕಣಿಗಲೆ ಎಲೆ, ಮುತ್ತುಗದ ಎಲೆಗಳ ಅಂಚಿನಂತೆ ಅಂಚು (ಅಲುಗು)ಳ್ಳ ಕತ್ತಿಯು ಬಹಳ ಶ್ರೇಷ್ಠವಾದದ್ದು. ಕಾಯಿಸಿದ ತುಪ್ಪದಂತೆ ಸುವಾಸನೆಯುಳ್ಳ ಪದ್ಮೋತ್ಪಲಪುಷ್ಪಗಳಂತೆ ಸುಗಂಧವುಳ್ಳ ಕತ್ತಿಯು ಮತ್ತೂ ಉತ್ತಮವು.

೩೧. ಉತ್ಪಲಬಣ್ಣದ ಆಕಾರವಿರಬೇಕು. ಮೇಘದ ಬಣ್ಣದಂತೆ ಕಂಗೊಳಿಸುತಲಿರಬೇಕು. ಸಮಾಂಗುಲಗಳಿಂದ ಕೂಡಿರಬೇಕು. ಇಂತಹ ಖಡ್ಗಗಳು ಪ್ರಶಸ್ತವಯ್ಯಾ! ಭಾರ್ಗವರಾಮ!

೩೨. ಬಿಲ್ವಪತ್ರೆ ಮರದಂತೆಯೂ, ಬೆಟ್ಟದ ಆಕಾರದಂತೆಯೂ, ಪದ್ಮದಳಾಕಾರದಂತೆಯೂ, ಅರಳೀ ಎಲೆಯ ಆಕಾರದಂತೆಯೂ ಇರುವ ಖಡ್ಗಗಳು ಸರ್ವೋತ್ತಮವಾದುವುಗಳು. (ಮಂಗಲ್ಯಸ್ಸ್ಯಾತ್ತ್ರ್ಯಯಮಾಣಾಶ್ವತ್ಥಬಿಲ್ವಮಸೂದಕೆ ಎಂಬ ಕೋಶದಂತೆ ಮಂಗಲ್ಯವೆಂದರೆ ಅಶ್ವತ್ಥವೃಕ್ಷವೆಂದು ಹೆಸರು.)

**ಕಾಕೋಲೂಕಕಬಂಧಾಭಾ ವಿಷಮಾಂಗುಲಸಂಸ್ಥಿತಾಃ ।**
**ವಂಶಾನುಗಾಃ ಪ್ರಭೂತಾಶ್ಚ ನ ಶಸ್ತಾಸ್ತೇ ಕದಾಚನ ॥ ೩೩ ॥**

**ನ ಖಡ್ಗೇ ವದನಂ ಪಶ್ಯೇದ್ವೃಥಾ ವಿವೃಣುಯಾನ್ನ ಚ ।**
**ಉಚ್ಛಿಷ್ಟೋ ನ ಸ್ಪೃಶೇತ್ಖಡ್ಗಂ ನಿಶಿಕುರ್ಯಾನ್ನಚ ಶೀರ್ಷಕೆ ॥**
**ದಿವಾ ಚ ಪೂಜಯೇದೇನಂ ಗಂಧಮಾಲ್ಯಾನ್ನಸಂಪದಾ ॥ ೩೪ ॥**

**ಖಡ್ಗಂ ಪ್ರಶಸ್ತಂ ಮಣಿಹೇಮ ಚಿತ್ರಂ**
**ಕೋಶೇ ಸದಾ ಚಂದನಚೂರ್ಣಯುಕ್ತೇ ।**
**ಸಂಸ್ಥಾಪಯೇದ್ಭೂಮಿಪತಿಃ ಪ್ರಯತ್ನಾತ್**
**ರಕ್ಷೇತ್ತಥೈನಂ ಸ್ವಶರೀರವಚ್ಚ ॥೩೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಖಡ್ಗಲಕ್ಷಣಂ ನಾಮ ಸಪ್ತದಶೋಽಧ್ಯಾಯಃ**

---

೩೩. ಕಾಗೆ-ಗೂಬೆಗಳ ಆಕಾರ, ಮುಂಡದ ಆಕಾರ, ವಿಷಮಾಂಗಲಿಗಳು, ಬಿದಿರುಮೆಳೆಗಳಲ್ಲಿ ಹುಟ್ಟಿದವುಗಳು. ಇವುಗಳೆಲ್ಲಾ ಪ್ರಶಸ್ತವಾದುವುಗಳಲ್ಲ,

೩೪. ಕತ್ತಿಯಲ್ಲಿ ಮುಖವನ್ನು ನೋಡಿಕೊಳ್ಳಬಾರದು. ವ್ಯರ್ಥವಾಗಿ ಅದನ್ನು ಒರೆಯಿಂದೀಚೆಗೆ ತೆಗೆಯಬಾರದು. ಎಂಜಲಕೈಯಲ್ಲಿ ಕತ್ತಿಯನ್ನು ಮುಟ್ಟಬಾರದು. ರಾತ್ರಿಹೊತ್ತು ಕತ್ತಿಯನ್ನು ಹೆಗಲಮೇಲಿಟ್ಟುಕೊಳ್ಳಬಾರದು. ಪ್ರತಿದಿನವೂ ಹಗಲುಹೊತ್ತಿನಲ್ಲಿ ಗಂಧಪುಷ್ಪಾದಿಗಳಿಂದ ಕತ್ತಿಯನ್ನು ಪೂಜಿಸುತ್ತಿರಬೇಕು.

೩೫. ಮಹಾರಾಜನಾದವನು ಸುವರ್ಣರತ್ನಖಚಿತವಾದ ಹಿಡಿಯುಳ್ಳ ಖಡ್ಗವನ್ನು ಯಾವಾಗಲೂ ಒರೆಯಲ್ಲಿಯೇ ಇಟ್ಟು, ಅದರಲ್ಲಿ ಗಂಧದ ಹುಡಿಯನ್ನು ಹಾಕಿ ಮುಚ್ಚಿಟ್ಟಿರಬೇಕು. ತನ್ನ ದೇಹವನ್ನು ಹೇಗೆ ಕಾಪಾಡಿಕೊಳ್ಳುತ್ತಿರುವನೋ, ಅದೇ ಮೇರೆ ಕತ್ತಿಯನ್ನೂ ಕಾಪಾಡಿಕೊಂಡಿರಬೇಕಯ್ಯಾ! ಪರಶುರಾಮ! ಹೀಗೆಂದು ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಖಡ್ಗಲಕ್ಷಣವೆಂಬ ಹೆಸರಿನ ಹದಿನೇಳನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಅಷ್ಟಾದಶೋಽಧ್ಯಾಯಃ

### ಪುಷ್ಕರ ಉವಾಚ

ಇತಿ ಸಂಭೃತಸಂಭಾರೋ ರಾಜ್ಞಸ್ಸಾಂವತ್ಸರಸ್ತಥಾ ।
ಕಾಲೇಭಿಷೇಚನಂ ಕುರ್ಯಾತ್ತಂ ಕಾಲಂ ಕಥಯಾಮಿ ತೇ ॥ ೧ ॥

ಮೃತೇ ರಾಜ್ಞಿ ನ ಕಾಲಸ್ಯ ನಿಯಮೋಽತ್ರ ವಿಧೀಯತೇ ।
ತತ್ರಾಸ್ಯ ಸ್ನಪನಂ ಕಾರ್ಯಂ ವಿಧಿವತ್ತಿಲಸರ್ಷಪೈಃ ॥ ೨ ॥

ಘೋಷಯಿತ್ವಾ ಜಯಂ ಚಾಸ್ಯ ಸಾಂವತ್ಸರಪುರೋಹಿತೌ ।
ಅನ್ಯಾಸನೋಪವಿಷ್ಟಸ್ಯ ದರ್ಶಯೇತಾಂ ಜನಂ ಶನೈಃ ॥ ೩ ॥

---

### ಹದಿನೆಂಟನೆಯ ಅಧ್ಯಾಯವು.

೧. ಪುಷ್ಕರನು ಹೇಳುತ್ತಾನೆ.—ಎಲೈ ಪರಶುರಾಮನೇ ! ಕೇಳು. ಇದು ವರಿಗೆ ನಾನು ಹೇಳಿದ ಸಕಲ ಸಲ್ಲಕ್ಷಣವುಳ್ಳ ಸಂಭಾರಗಳನ್ನು ಸಿದ್ಧಪಡಿಸಿಕೊಟ್ಟು ಜೋಯಿಸನು ಶುಭಲಗ್ನವನ್ನು ಕಂಡುಹಿಡಿದು, ಅಂತಹ ಶುಭದಿವಸದಲ್ಲಿ ಮಹಾ ರಾಜನಿಗೆ ಪಟ್ಟಾಭಿಷೇಕ ಮಾಡಬೇಕು. ಆ ಪಟ್ಟಾಭಿಷೇಕ ಕಾಲವನ್ನು ನಿನಗೆ ಹೇಳುತ್ತೇನೆ.

೨. ಹೊಸದಾಗಿ ರಾಜನನ್ನು ಗೊತ್ತುಮಾಡಿ ಪಟ್ಟಾಭಿಷೇಕ ಮಾಡಬೇಕಾದರೆ ಶುಭಮುಹೂರ್ತವನ್ನು ನೋಡಬೇಕೇ ಹೊರತು, ಹಿಂದಿನ ರಾಜನು ಮೃತನಾದ ಕಾಲದಲ್ಲಿ ಆತನ ಮಗನಿಗೆ ಪಟ್ಟಾಭಿಷೇಕ ಮಾಡಬೇಕಾದ ಸಂದರ್ಭದಲ್ಲಿ ಮುಹೂರ್ತ ವನ್ನು ನೋಡಬೇಕಾದ್ದೇ ಇಲ್ಲಾ. ಅಂತಹ ಸಂದರ್ಭದಲ್ಲಿ ಎಳ್ಳು, ಸಾಸುವೆಗಳನ್ನರೆದು ತಲೆಗೆ ಹಚ್ಚಿಕೊಂಡು ಸ್ನಾನಮಾಡಿ ಶುದ್ಧಿಯನ್ನು ಹೊಂದಬಹುದು.

೩. ಆ ಸಮಯದಲ್ಲಿ ಪುರೋಹಿತರೂ, ಜೋಯಿಸರೂ ಸಹ ಜಯಘೋಷ ವನ್ನು ಮಾಡಿ ರಾಜನನ್ನು ಬೇರೊಂದಾಸನದಲ್ಲಿ ಕುಳ್ಳಿರಿಸಿ ಇವನೇ ಮುಂದಿನ ರಾಜನೆಂದು ಜನರಿಗೆ ತೋರಿಸಬೇಕು.

**ಸ ಸಾಂತ್ವಯಿತ್ವಾ ಸ್ವಜನಂ ಮುಕ್ತ್ವಾ ಬಂಧನಗಾಂಸ್ತಥಾ ।**
**ಅಭಯಂ ಘೋಷಯಿತ್ವಾ ಚ ಕಾಲಾಕಾಂಕ್ಷೀ ತಥಾ ಭವೇತ್ ॥ ೪ ॥**

**ನಾಭಿಷೇಚ್ಯೋ ನೃಪಶ್ಚೈತ್ರೇ ನಾಧಿಮಾಸೇ ಚ ಭಾರ್ಗವ ।**
**ನ ಪ್ರಸುಪ್ತೇ ತಥಾ ವಿಷ್ಣೌ ವಿಶೇಷಾತ್ಪ್ರಾವೃಷಿ ದ್ವಿಜ ॥ ೫ ॥**

**ನ ಚ ಭೌಮದಿನೇ ರಾಮ ಚತುರ್ಥ್ಯಾಂ ನ ತಥೈವ ಚ ।**
**ನವಮ್ಯಾಂ ನಾಭಿಷೇಕ್ತವ್ಯಃ ಚತುರ್ದಶ್ಯಾಂ ಚ ಭಾರ್ಗವ ॥ ೬ ॥**

**ಧ್ರುವಾಣಿ ವೈಷ್ಣವಂ ಶಾಕ್ರಂ ಹಸ್ತಪುಷ್ಯೇ ತಥೈವ ಚ ।**
**ನಕ್ಷತ್ರಾಣಿ ಪ್ರಶಸ್ಯಂತೇ ಭೂಮಿಪಾಲಾಭಿಷೇಚನೇ ॥ ೭ ॥**

**ನಾಗಶ್ಚತುಷ್ಪದಂ ವಿಷ್ಟಿಃ ಕಿಂಸ್ತುಘ್ನಃ ಶಕುನಿಸ್ತಥಾ ।**
**ಕರಣಾನಿ ನ ಶಸ್ಯಂತೇ ವ್ಯತೀಪಾತದಿನಂ ತಥಾ ॥ ೮ ॥**

---

೪. ಆಗ ಹೊಸದಾಗಿ ಪಟ್ಟಾಭಿಷಿಕ್ತನಾಗುವ ರಾಜನು ತನ್ನ ಸ್ವಜನಗಳನ್ನು ಸಮಾಧಾನಪಡಿಸಿ ಅವರಿಗೆ ಅಭಯವನ್ನಿತ್ತು, ಕಾರಾಗೃಹದಲ್ಲಿದ್ದವರನ್ನೆಲ್ಲಾ ಬಿಡುಗಡೆ ಮಾಡಿಸಿ, ಸಮಯವನ್ನು ನಿರೀಕ್ಷಿಸಿಕೊಂಡಿರಬೇಕು.

೫. ಚೈತ್ರಮಾಸ, ಅಧಿಕಮಾಸಗಳು, ಚಾತುರ್ಮಾಸ್ಯ, ಅದರಲ್ಲೂ ವರ್ಷ ಋತುವಿನಲ್ಲಿ ಪಟ್ಟಾಭಿಷೇಕಕ್ಕೆ ಮುಹೂರ್ತವನ್ನಿಡಕೂಡದು.

೬. ಮಂಗಳವಾರ ಪಟ್ಟಾಭಿಷೇಕಕ್ಕೆ ಯೋಗ್ಯವಾದ ದಿವಸವಲ್ಲ. ಚತುರ್ಥಿ, ನವಮಿ, ಚತುರ್ದಶಿಗಳು ಪಟ್ಟಾಭಿಷೇಕಾರ್ಹವಾದ ದಿವಸಗಳಲ್ಲ.

೭. ಧೃವನಕ್ಷತ್ರಗಳು, ಶ್ರವಣ, ವಿಶಾಖೆ, ಜ್ಯೇಷ್ಠಾ, ಹಸ್ತ, ಪುಷ್ಯ ನಕ್ಷತ್ರಗಳಲ್ಲಿ ಪಟ್ಟಾಭಿಷೇಕವನ್ನು ಮಾಡಬಹುದು.

೮. ನಾಗ, ಚತುಷ್ಪಾತ್, ಕಿಂಸ್ತುಘ್ನ, ಶಕುನಿ ಮೊದಲಾದ ಕರಣಗಳಿರುವ ದಿನಗಳಲ್ಲಿಯೂ; ವ್ಯತೀಪಾತ, ವೈಧೃತಿ ದಿವಸಗಳಲ್ಲಿಯೂ ಪಟ್ಟಾಭಿಷೇಕವನ್ನು ನಡೆಸಕೂಡದು.

**ನಕ್ಷತ್ರಮುಲ್ಕಾಭಿಹತಮುತ್ಪಾತಾಭಿಹತಂ ತಥಾ ।**
**ಸೌರಸೂರ್ಯಕುಜಾಕ್ರಾಂತಂ ಪರಿವಿಷ್ಟಿಂ ಚ ಭಾರ್ಗವ ॥ ೯ ॥**

**ಮುಹೂರ್ತಾಶ್ಚೋಕ್ತನಕ್ಷತ್ರಾಃ ಸತಾಂ ಮಾನ ಹಿತಪ್ರದಾಃ ।**
**ಕುಜಹೋರಾ ತಥಾ ನೇಷ್ಟಾ ಸರ್ವತ್ರ ಕುಲಿಕಸ್ತಥಾ ॥ ೧೦ ॥**

**ವೃಷೋಽಥ ಕೀಟಸಿಂಹೌ ಚ ಕುಂಭೋ ಲಗ್ನೇ ಚ ಶಸ್ಯತೇ ।**
**ಏತೇಷಾಂ ಜನ್ಮಲಗ್ನಾಭ್ಯಾಂ ಯಃ ಸ್ಯಾದುಪಚಯಸ್ಥಿತಃ ॥ ೧೧ ॥**

**ತಾರಾ ದ್ವಿತೀಯಾ ಷಷ್ಠೀ ಚ ಚತುರ್ಥೀ ಚಾಷ್ಟಮೀ ಚ ಯಾ ।**
**ನವಮೀ ಚ ತಥಾ ಶಸ್ತಾ ಅನುಕೂಲಶ್ಚ ಚಂದ್ರಮಾಃ ॥ ೧೨ ॥**

**ಸೌಮ್ಯಾಃ ಕೇಂದ್ರಗತಾ ಲಗ್ನಾ ಶುಭಾಶ್ಚೈವ ತ್ರಿಕೋಣಯೋಃ ।**
**ಪಾಪಾಶ್ಚೋಪಚಯಸ್ಥಾನೇ ಶಸ್ತೋ ಲಗ್ನೇ ದಿವಾಕರಃ ॥ ೧೩ ॥**

---

೯. ಉಲ್ಕಾ, ಉತ್ಪಾತಗಳಿಂದ ದಗ್ಧಯೋಗವೆನಿಸಿದ ನಕ್ಷತ್ರಗಳೂ ; ಶನಿ, ಸೂರ್ಯ, ಕುಜರಿಂದಾಕ್ರಾಂತವಾದ ಪರಿವೇಷವಿರುವ ದಿವಸಗಳೂ ನಿಷಿದ್ಧವು.

೧೦. ಮುಹೂರ್ತಕ್ಕೆ ಉಕ್ತವಾದ ನಕ್ಷತ್ರಗಳನ್ನು ಜೋಯಿಸರಿಂದ ತಿಳಿದು ಲಗ್ನವಿಡಿಸಬೇಕು. ಇವು ಸಜ್ಜನರ ಮಾನಹಿತಗಳನ್ನುಂಟುಮಾಡತಕ್ಕವು. ರಾಹು ಕಾಲ, ಗುಳಿಕಕಾಲಗಳಲ್ಲಿ ಮುಹೂರ್ತವಿಡಿಸಕೂಡದು.

೧೧. ವೃಷಭಲಗ್ನ, ವೃಶ್ಚಿಕಲಗ್ನ, ಸಿಂಹ ಕುಂಭ ಲಗ್ನಗಳು, ಪಟ್ಟಾಭಿಷೇಕಕ್ಕೆ ಪ್ರಶಸ್ತವಾದುವುಗಳು. ಈ ಲಗ್ನಗಳು ಜನ್ಮಲಗ್ನಗಳಿಗಿಂತ ಉಚ್ಚಸ್ಥಾನಗಳಲ್ಲಿರಬೇಕು.

೧೨. ಎರಡನೆಯದಾದ ಸಂಪತ್ತಾರೆ, ಆರನೆಯ ಸಾಧನತಾರೆ, ನಾಲ್ಕನೆಯ ಕ್ಷೇಮತಾರೆ, ಎಂಟನೆಯ ಮಿತ್ರತಾರೆ, ಒಂಭತ್ತನೆಯ ಪರಮಮೈತ್ರತಾರೆಗಳು ; ಇಂತಹ ತಾರಾಬಲವೂ, ಚಂದ್ರಬಲವೂ ಕೂಡಿದ ದಿವಸ ಪಟ್ಟಾಭಿಷೇಕಕ್ಕೆ ಪ್ರಶಸ್ತ.

೧೩. ಲಗ್ನದಿಂದ ೧-೪-೭-೧೦ ನೆಯ ಮನೆಗಳಿಗೆ ಕೇಂದ್ರವೆಂದು ಹೆಸರು. ಕೇಂದ್ರಾಧಿಪತಿಗಳು ಸೌಮ್ಯರಾಗಿಯೂ, ಶುಭಕರರಾಗಿಯೂ ಇರಬೇಕು. ಲಗ್ನದಲ್ಲಿ ಸೂರ್ಯನಿದ್ದರೆ ಬಹಳ ಶುಭವು.

**ಲಗ್ನೇ ನವಾಂಶಃ ಕ್ಷಿತಿಜಸ್ಯ ವರ್ಜ್ಯೋ**
**ವರ್ಗಸ್ತಥಾ ತಸ್ಯ ಮಹಾನುಭಾವ ।**
**ಸೂರ್ಯಸ್ಯ ವರ್ಗಃ ಸಕಲಃ ಪ್ರಶಸ್ತೋ**
**ರಾಜ್ಞೋಽಭಿಷೇಕೇ ಸಗ್ರಹೋ ನೃಪಾಣಾಂ ॥ ೧೪ ॥**

**ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಅಭಿಷೇಕಕಾಲನಿರ್ಣಯಂ ನಾಮ ಅಷ್ಟಾದಶೋಽಧ್ಯಾಯಃ**

---

೧೪. ಲಗ್ನದಲ್ಲಿ ಅಂಗಾರಕನಿರುವಾಗ ಅವನ ನವಾಂಶವೂ ; ಅಂಗಾರಕಾಷ್ಟಕ ವರ್ಗವೂ, ಅಂದರೆ ಅಂಗಾರಕನಿಂದ ೧-೨-೪-೭-೮-೯-೧೦-೧೧ ನೆಯ ಸಕಲ ವರ್ಗಗಳೂ, ಸಕಲಗ್ರಹಗಳ ಸಹಿತವಾಗಿ ಪಟ್ಟಾಭಿಷೇಕಕ್ಕೆ ಅರ್ಹವಾದವುಗಳೆಂದು ತಿಳಿಯಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಅಭಿಷೇಕಕಾಲನಿರ್ಣಯವೆಂಬ ಹೆಸರಿನ ಹದಿನೆಂಟನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕೋನವಿಂಶತಿತಮೋಽಧ್ಯಾಯಃ

---

**ಪುಷ್ಕರ ಉವಾಚ**

**ಕಾರ್ಯಾ ಪೌರಂದರೀ ಶಾನ್ತಿಃ ಪ್ರಾಗೇವಾಸ್ಯ ಪುರೋಧಸಾ ।**
**ಪ್ರಾಪ್ತೇಽಭಿಷೇಕದಿವಸೇ ಸೋಪವಾಸಃ ಪುರೋಹಿತಃ ॥ ೧ ॥**

**ಸೋಷ್ಣೀಷಃ ಶ್ವೇತವಸನಃ ಸಿತಚಂದನಭೂಷಿತಃ ।**
**ಸಿತಮಾಲ್ಯೋಪವೀತಶ್ಚ ಸರ್ವಾಭರಣಭೂಷಿತಃ ॥ ೨ ॥**

---

## ಹತ್ತೊಂಭತ್ತನೆಯ ಅಧ್ಯಾಯವು.

೧. ಪುಷ್ಕರನು ಹೇಳುತ್ತಾನೆ.—ಪಟ್ಟಾಭಿಷೇಕಕ್ಕಿಂತ ಮುಂಚೆ ಪುರಂದರ ಶಾಂತಿಯೆಂಬ ಕರ್ಮವು ನಡೆಯಬೇಕು. ಇದನ್ನು ಪುರೋಹಿತನೇ ನಡೆಸಬೇಕು. ಇದನ್ನು ಅಭಿಷೇಕದ ದಿನ ಮೊದಲೇ ಮಾಡಬೇಕು. ಅದಕ್ಕಿಂತ ಮುಂಚೆ ಪುರೋಹಿತನು ಉಪವಾಸವಾಗಿದ್ದು ಮಾಡಬೇಕು.

೨. ಈ ಶಾಂತಿಕರ್ಮವನ್ನು ಮಾಡುವಾಗ ಪುರೋಹಿತನು ತಲೆಗೆ ಶಾಲು ರುಮಾಲನ್ನು ಸುತ್ತಿರಬೇಕು. ಬಿಳೀಧೋತ್ರದ ಜೋಡಿಯನ್ನು ಉಟ್ಟು ಹೊದ್ದಿರಬೇಕು. ಬಿಳೀಗಂಧವನ್ನು ಮೈಗೆ ಲೇಪಿಸಿಕೊಂಡಿರಬೇಕು. ಮಲ್ಲಿಗೆಹೂವಿನ ಹಾರವನ್ನು ಕತ್ತಿಗೆ ಹಾಕಿಕೊಂಡಿರಬೇಕು. ಸರ್ವಾಭರಣಗಳಿಂದ ಭೂಷಿತನಾಗಿರಬೇಕು.

ವೇದಿಮುಲ್ಲಿಖ್ಯ ಯತ್ನೇನ ಕೃತ್ವಾ ಚ ವಿಧಿವತ್ತತಃ ।
ಜುಹುಯಾದ್ವೈಷ್ಣವಾನ್ಮಂತ್ರಾನ್ಸ್ತಥಾ ಶಾಕ್ರಾನ್ವಿಚಕ್ಷಣಃ ॥ ೩ ॥

ಸಾವಿತ್ರಾನ್ವೈಶ್ವದೇವಾಂಶ್ಚ ಸೌಮ್ಯಾಂ ಚ ವಿಧಿವತ್ತತಃ ।
ಶರ್ಮವರ್ಮಗಣಂ ಚೈವ ತಥಾ ಸ್ವಸ್ತ್ಯಯನಂ ಗಣಂ ॥ ೪ ॥

ಆಯುಷ್ಯಮಭಯಂ ಚೈವ ತಥಾ ಚೈವಾಪರಾಜಿತಂ ।
ಸಪಾತವಂತಂ ಕಲಶಂ ತಥಾ ಕುರ್ಯಾಚ್ಚ ಕಾಂಚನಂ ॥ ೫ ॥

ವಹ್ನೇರ್ದಕ್ಷಿಣಪಾರ್ಶ್ವಸ್ಥಃ ಶ್ವೇತಚಂದನಭೂಷಿತಃ ।
ಶ್ವೇತಾನುಲೇಪನಃ ಸ್ರಗ್ವೀ ಸರ್ವಾಭರಣಭೂಷಿತಃ ॥ ೬ ॥

ಆಸನಸ್ಥಮುಖಂ ಪಶ್ಯೇನ್ನಿಮಿತ್ತಾನಿ ಹುತಾಶನೇ ॥ ೭ ॥

---

೩. ವಿಧಿವಿಹಿತವಾಗಿ ಯಜ್ಞವೇದಿಯ ಮೇಲೆ ಉದಗಾಯಾಮವಾಗಿ ಉಲ್ಲೇಖನಗಳನ್ನು ಮಾಡಿ ಅದರಮೇಲೆ ಅಗ್ನಿಪ್ರತಿಷ್ಠೆಯಂ ಮಾಡಿ, ವಿಷ್ಣುದೇವತಾಕವಾದ ಮತ್ತು ಇಂದ್ರದೇವತಾಕವಾದ ಮಂತ್ರಗಳಿಂದ ಹೋಮಮಾಡಬೇಕು.

೪. ಸವಿತೃಮಂತ್ರ, ವೈಶ್ವದೇವಮಂತ್ರ, ಶರ್ಮವರ್ಮ ಮಂತ್ರಗಳಿಂದಲೂ ಹೋಮಮಾಡಿ ಕೊನೆಯಲ್ಲಿ ಶಾಂತಿಸೂಕ್ತಗಳನ್ನೂ, ಸ್ವಸ್ತ್ಯಯನಾದಿ ಮಂತ್ರಗಳನ್ನೂ ಪಠಿಸಬೇಕು.

೫. ಆಯುಷ್ಯಸೂಕ್ತ, ಅಭಯಸೂಕ್ತ, ಅಪರಾಜಿತಸೂಕ್ತಗಳನ್ನೆಲ್ಲಾ ಪಾರಾಯಣಮಾಡಬೇಕು. ಕಲಶವನ್ನು ಚಿನ್ನದಿಂದ ಮಾಡಿಸಬೇಕು.

೬. ಹವನಗಳು ಮುಗಿದಮೇಲೆ ಪುರೋಹಿತನು ಯಜ್ಞೇಶ್ವರನ ದಕ್ಷಿಣ ಪಾರ್ಶ್ವದಲ್ಲಿ ಶ್ವೇತಚಂದನಭೂಷಿತನಾಗಿಯೂ, ಶ್ವೇತಮಾಲ್ಯಗಳಿಂದಲಂಕೃತನಾಗಿಯೂ, ಸರ್ವಾಭರಣಭೂಷಿತನಾಗಿಯೂ ನಿಂತುಕೊಳ್ಳಬೇಕು.

೭. ಹಾಗೆ ನಿಂತುಕೊಂಡು ಯಜ್ಞೇಶ್ವರನಲ್ಲಿ ಕಂಡುಬರುವ ಶುಭಶಕುನಗಳನ್ನು ನಿರೀಕ್ಷಿಸುತ್ತಲಿರಬೇಕು. ಹಸೆಯಮಣೆಯಮೇಲೆ ಮಹಾರಾಜನನ್ನು ಕೂರಿಸಿ ಮಹಾರಾಜನ ಮುಖವನ್ನು ನೋಡುತ್ತಲಿರಬೇಕು.

**ಪಶ್ಯೇಯುರನ್ಯೇ ಚ ತಥಾ ನೃಸಿಂಹ**
**ದೈವಜ್ಞವಾಕ್ಯಾನ್ನಿಪುಣಂ ಸ್ವರೂಪಂ ।**
**ಸಾಂವತ್ಸರಸ್ಯಾಥ ಸದಸ್ಯಮುಖ್ಯಾಃ**
**ಸದಸ್ಯಮುಖ್ಯಾಶ್ಚ ಪುರೋಹಿತಸ್ಯ** **॥ ೮ ॥**

**ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಪುರಂದರಶಾನ್ತಿರ್ನಾಮ ಏಕೋನವಿಂಶತಿತಮೋಽಧ್ಯಾಯಃ**

---

೮. ಎಲೈ ನರಸಿಂಹರೂಪಿಯಾದ ಪರಶುರಾಮನೇ! ಕೇಳು. ಜೋಯಿಸರು ಹೇಳುವ ಮಾತನ್ನನುಸರಿಸಿ ಎಲ್ಲರ ಮುಖವನ್ನೂ ರಾಜನು ಸಂದರ್ಶಿಸಬೇಕು. ಅಲ್ಲಿ ಸೇರಿರುವ ಸಮಸ್ತ ಸದಸ್ಯರೂ ಜೋಯಿಸರ ಮುಖವನ್ನು ನೋಡಬೇಕು. ಮತ್ತು ಪುರೋಹಿತರ ಮುಖವನ್ನು ನೋಡಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಪುರಂದರ ಶಾಂತಿಯೆಂಬ ಹೆಸರಿನ ಹತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.



|| ಶ್ರೀಃ ||

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ವಿಶಂತಿತಮೋಽಧ್ಯಾಯಃ

---

**ಪುಷ್ಕರ ಉವಾಚ**

**ಪ್ರದಕ್ಷಿಣಾವರ್ತಶಿಖ ಸ್ತಪ್ತಜಾಂಬೂನದಪ್ರಭಃ ।**
**ರಥೌಘವೇಘನಿರ್ಘೋಷೋ ವಿಧೂಮಶ್ಚ ಹುತಾಶನಃ ॥ ೧ ॥**

**ಅನುಲೋಮಸುಗಂಧಶ್ಚ ಸ್ವಸ್ತಿಕಾಕಾರಸನ್ನಿಭಃ ।**
**ವರ್ಧಮಾನಾಕೃತಿಶ್ಚೈವ ನಂದ್ಯಾವರ್ತನಿಭಸ್ತಥಾ ॥ ೨ ॥**

---

## ಇಪ್ಪತ್ತನೆಯ ಅಧ್ಯಾಯವು.

೧. ಪುಷ್ಕರನು ಪುನಃ ಹೇಳುತ್ತಾನೆ.—ಹಿಂದಿನ ಅಧ್ಯಾಯದಲ್ಲಿ ಯಜ್ಞೇಶ್ವರನಲ್ಲಿ ಕಂಡುಬರುವ ಶುಭಲಕ್ಷಣಗಳೆಂದು ಹೇಳಿದೆನಷ್ಟೆ? ಆ ಶುಭಲಕ್ಷಣಗಳನ್ನೀಗ ವಿವರಿಸುತ್ತೇನೆ, ಕೇಳು. ಉರಿಯು ಪ್ರದಕ್ಷಿಣಾಕಾರವಾಗಿ ಸುತ್ತುತ್ತಿರಬೇಕು. ಉರಿಯು (ಜ್ವಾಲೆಯು) ಮೇಲಕ್ಕೇಳುತಲಿರುವಾಗ ಮಿಸುನಿಯ ಬಣ್ಣದಂತೆ ಕಾಣುತ್ತಲಿರಬೇಕು. ಹೊಗೆ ಇರಬಾರದು. ರಥದಗಾಲಿ ಉರುಳುತ್ತಿರುವಾಗ, ಮೋಡ ಗುಡುಗಿದಾಗ, ಹೇಗೆ ಸದ್ದಾಗುವುದೋ ಅದರ ಸದ್ದಿನಂತೆ ಸದ್ದಾಗುತ್ತಿರಬೇಕು.

೨. ಮೇಲೆಮೇಲಕ್ಕೆ ಉರಿಯು ಸುತ್ತಿಸುತ್ತಿ ಏರುತ್ತಿರುವಾಗ ಹೋಮ ಮಾಡಿದ ತುಪ್ಪದ ಘಮಘಮಿಸುತ್ತಿರುವ ಸುವಾಸನೆಯು ಎಲ್ಲೆಲ್ಲೂ ವ್ಯಾಪಿಸಿ ಸ್ವಸ್ತಿಕಾಕಾರವಾಗಿ ಕಾಣುತ್ತಲಿರಬೇಕು. ಮತ್ತು ಆ ಹುತಾಶನ ಜ್ವಾಲೆಯು ವರ್ಧಮಾನಾಕಾರವಾಗಿಯೂ ನಂದ್ಯಾವರ್ತಾಕಾರವಾಗಿಯೂ ಕಾಣುತ್ತಲಿರಬೇಕು.

**ಪ್ರಸನ್ನಾರ್ಚಿರ್ಮಹಾಜ್ವಾಲಃ ಸ್ಫುಲಿಂಗರಹಿತೋ ಹಿತಃ ।**
**ಸ್ವಾಹಾವಸಾನೇ ಜ್ವಲನಃ ಸ್ವಯಂ ದೇವಮುಖಂ ಹವಿಃ　　॥ ೩ ॥**

---

೩. ಹೀಗೆ ಹೊರಟ ಉರಿಯು ಪ್ರಸನ್ನವಾಗಿರಬೇಕು. ಸುತ್ತಲೂ ಕಿಡಿಗಳು ಹಾರುತ್ತಿರಬಾರದು. ಬಹುಹಿತವಾಗಿರಬೇಕು. "ಸ್ವಾಹಾ" ಎಂದು ಹವಿರ್ದ್ರವ್ಯವನ್ನು ಹೋಮಮಾಡಿ ಮಂತ್ರೋಚ್ಚಾರಣೆ ಮಾಡಿದೊಡನೆಯೇ, ಯಜ್ಞೇಶ್ವರನು ದೇವಮುಖದಿಂದ ಪ್ರತ್ಯಕ್ಷನಾಗಿ ಹವಿಸ್ಸನ್ನು ತಾನೇ ಸ್ವೀಕರಿಸಬೇಕು

ಟಿಪ್ಪಣಿ :—ಈ ಕಲಿಯುಗದಲ್ಲಿಯೂ ಸಹ ನಿಯಮದಿಂದ ಹೋಮಮಾಡಿದ ಸಂದರ್ಭದಲ್ಲಿ ಪೂರ್ಣಾಹುತಿ ಮುಂತಾದ ಸಮಯಗಳಲ್ಲಿ ಯಜ್ಞೇಶ್ವರನು ಪ್ರತ್ಯಕ್ಷನಾಗಿ ಬಂದು ಹವಿಸ್ಸನ್ನು ಸ್ವೀಕರಿಸುವ ಸಂಗತಿಯನ್ನು ಅನೇಕರು ಅನೇಕ ಗ್ರಂಥಗಳಲ್ಲಿ ಓದಿರಬಹುದು. ತ್ರೇತಾಯುಗದಲ್ಲಿ ದಶರಥನು ಪುತ್ರಕಾಮೇಷ್ಟಿಯನ್ನು ಮಾಡಿದಾಗ ಯಜ್ಞೇಶ್ವರನು ಪಾಯಸದ ಬಟ್ಟಲನ್ನು ಕೊಟ್ಟು, ಅನುಗ್ರಹಿಸಿದ ವೃತ್ತಾಂತವನ್ನು ಎಲ್ಲರೂ ತಿಳಿದಿದ್ದಾರೆ. ಇದು ಯುಗಾಂತರದ ಮಾತಾಯಿತು. ಈ ಕಲಿಯುಗದಲ್ಲಿಯೂ ಸಹ ಅಪ್ಪಯ್ಯದೀಕ್ಷಿತರು ಯಜ್ಞಮಾಡಿದಾಗ ಅಗ್ನಿಯು ಪ್ರತ್ಯಕ್ಷನಾಗಿ ಪೂರ್ಣಾಹುತಿಯ ಕಾಲದಲ್ಲಿ ಸಮರ್ಪಿಸಿದ-(ಹೋಮಮಾಡಿದ) ವಸ್ತ್ರಾಭರಣಗಳನ್ನು (ಸ್ವೀಕರಿಸಿ) ಜ್ವಲನಮಾಡಿದುದು, ಆ ಬಳಿಕ ಆ ವೃತ್ತಾಂತವನ್ನು ಮಹಾರಾಜನು ಕೇಳಿ, ದೀಕ್ಷಿತರಿಗೆಂದು ಉಡುಗೊರೆಯಾಗಿ ಕಳುಹಿಸಿದ್ದ ಶಾಲು ಜೋಡಿ, ಮಗುಟ, ಕಲಾಬತ್ತುಶೀರೆ, ಸುವರ್ಣಹಾರಗಳನ್ನು ಬೆಂಕಿಯಲ್ಲಿ ಸುಡಬಹುದೆ? ಎಂದು ನುಡಿದ ಅಜ್ಞಾನದ ಮಾತನ್ನು ಕೇಳಿ, ದೀಕ್ಷಿತರು ನಸುನಗುತ್ತಾ ಯಜ್ಞೇಶ್ವರನನ್ನು ಪ್ರಾರ್ಥಿಸಿದಾಗ, ಆ ಕೂಡಲೆ ಯಜ್ಞೇಶ್ವರನು ಪ್ರತ್ಯಕ್ಷನಾಗಿ ತನಗೆ ಕೊಟ್ಟಿದ್ದ (ಹೋಮಮಾಡಿದ್ದ) ಅನರ್ಘ್ಯವಸ್ತ್ರಾಭರಣಗಳನ್ನು ರಾಜನು ನೋಡುತ್ತಿದ್ದಾಗಲೇ ದೀಕ್ಷಿತರ ವಶಕ್ಕೆ ತಂದುಕೊಟ್ಟ ವೃತ್ತಾಂತವೂ, ಅಪ್ಪಯ್ಯದೀಕ್ಷಿತರ ಚರಿತ್ರೆಯಲ್ಲಿ ವಿವರಿಸಲ್ಪಟ್ಟಿದೆ. ಕಂಚೀಕಾಮಕೋಟಿಜಗದ್ಗುರು ಸಂಸ್ಥಾನದ ಅನುಗ್ರಹದಿಂದ ದೊರೆತ ಈ ಚರಿತ್ರೆಯ ಸಂಸ್ಕೃತಗ್ರಂಥವನ್ನು ಸುಮಾರು ೧೫ ವರ್ಷದ ಹಿಂದೆ ತರ್ಜುಮೆಮಾಡಿ ಕನ್ನಡದಲ್ಲಿ ಬರೆದಿದ್ದೇನೆ. ಇದು ಒಂದು ಉದಾಹರಣೆಯಾಯಿತು. ನಮ್ಮ ಹಿಂದಿನ ಮುಮ್ಮಡಿಕೃಷ್ಣರಾಜಒಡೆಯರವರ ತಂದೆಯವರಾದ ಖಾಸಾ ಚಾಮರಾಜೇಂದ್ರಒಡೆಯರು ಪುತ್ರಪ್ರಾಪ್ತಿಗಾಗಿ ಹೋಮಮಾಡಿದಾಗ ಅಗ್ನಿಮಧ್ಯದಿಂದ ಯಜ್ಞೇಶ್ವರನು ಬಂದು ಹೋಮವನ್ನು ಸ್ವೀಕರಿಸಿದ ಸಂಗತಿಯೂ ಸಹ ಜನಜನಿತವಾಗಿ ಮೈಸೂರು ಇತಿಹಾಸದಲ್ಲಿ ಇಂದಿಗೂ ಕೇಳಿಬರುತ್ತಲಿದೆ.

**ಯದಾಭುಂಕ್ತೇ ಮಹಾಭಾಗ ತದಾ ರಾಜ್ಞೋ ಹಿತಂ ಭವೇತ್ ।**
**ಹವಿಷಸ್ತು ಯದಾ ವಹ್ನೇರ್ನಸ್ಯಾತ್ಸಿಮಿ ಸಿಮಾಯಿತಂ ॥ ೪ ॥**

**ನ ವ್ರಜೇಯುಶ್ಚ ಮಧ್ಯೇನ ಮಾರ್ಜಾರಮೃಗಪಕ್ಷಿಣಃ ।**
**ಪಿಪೀಲಿಕಾಶ್ಚ ಧರ್ಮಜ್ಞ ತದಾ ಭೂಯಾಜ್ಜಯೀ ನೃಪಃ ॥ ೫ ॥**

**ಮುಕ್ತಾಹಾರಮೃಣಾಲಾಭೇ ವಹ್ನೌ ರಾಜ್ಞಾಂ ಜಯೋ ಭವೇತ್ ।**
**ತಥೈವ ಚ ಜಯಂ ಬ್ರೂಯಾತ್ಪ್ರಸ್ತರಸ್ಯ ಪ್ರದಾಯಿನಿ ॥ ೬ ॥**

**ಸಂಕ್ಷೇಪತಸ್ತೇಽಭಿಹಿತಂ ಮಯಾದ್ಯ**
**ಯಲ್ಲಕ್ಷಣಂ ಚಾರು ಹುತಾಶನಸ್ಯ ।**

---

೪. ಈ ಪ್ರಕಾರವಾಗಿ ಯಜ್ಞೇಶ್ವರನು ತಾನೇ ಪ್ರತ್ಯಕ್ಷನಾಗಿ ಹೋಮ ದ್ರವ್ಯವನ್ನು ಸ್ವೀಕರಿಸಿದರೆ ಮಹಾರಾಜನಿಗೆ ಬಹಳ ಹಿತವೆಂದು ತಿಳಿಯಬೇಕು. ಹವಿಸ್ಸು ಹುತವಾಗುತ್ತಿರುವಲ್ಲಿ ಸಿಮಿಸಿಮಿ ಎಂಬ ಸದ್ದಿಲ್ಲದೆ ಚೆನ್ನಾಗಿ ಪಚನವಾಗಬೇಕು.

೫. ಹೋಮಮಾಡುತ್ತಿರುವಾಗ ಮಧ್ಯದಲ್ಲಿ ಬೆಕ್ಕು ಅಥವಾ ಮೃಗಪಕ್ಷಿಗಳಾವುವೂ ಹೋಗಬಾರದು. ಇರುವೆಗಳು ಸಾಲುಗಟ್ಟಿ ಹೋಗಬಾರದು. ಈರೀತಿ ಯಾವುದೂ ಇಲ್ಲದೆ ಇದ್ದರೆ ರಾಜನಿಗೆ ವಿಜಯವೆಂದು ಭಾವಿಸಬೇಕು.

೬. ಅಗ್ನಿಯಲ್ಲಿ ಜ್ವಾಲೆಯು ಮುತ್ತಿನಹಾರದಂತೆಯೂ, ತಾವರೆದಂಟಿನ ಕಾಂತಿಯಂತೆಯೂ ತೋರಿಬರುತ್ತಿದ್ದರೆ ರಾಜನು ವಿಜಯಶಾಲಿಯಾಗುವನೆಂಬ ಸೂಚನೆಯೆಂದು ತಿಳಿಯಬೇಕು. ಅಗ್ನಿಯ ಪರಿಸ್ತರಣ (ಪ್ರಸ್ತರ)ದ ಲಕ್ಷಣವನ್ನು ನೋಡಿದ ಮಾತ್ರದಿಂದಲೇ ಮಹಾರಾಜನಿಗೆ ಜಯವಾಗುವ ಲಕ್ಷಣಗಳು ಅದರಲ್ಲಿ ಕಾಣಬರುವುವು.

೭. ಅಯ್ಯಾ ಪರಶುರಾಮನೇ! ಹುತಾಶನನ ಮನೋಹರವಾದ ಸಲ್ಲಕ್ಷಣಗಳನ್ನೀಗ ನಿನಗೆ ಸೂಕ್ಷ್ಮವಾಗಿ ವಿವರಿಸಿರುತ್ತೇನೆ. ಸಕಲ ವಿಧವಾದ ಅಗ್ನಿಕರ್ಮ

**ಸರ್ವಾಗ್ನಿಕರ್ಮಸ್ವಥ ತೇನ ವಿದ್ವಾನ್**
**ಭೂಯಾತ್ತ್ರಿಲೋಕೇ ತು ಜಯೀ ದ್ವಿಜೇಂದ್ರ　　॥ ೭ ॥**

**ಇತಿ ಶ್ರೀವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ವಹ್ನಿಲಕ್ಷಣಂ ನಾಮ ವಿಂಶತಿತಮೋಽಧ್ಯಾಯಃ**

---

ಗಳಲ್ಲಿಯೂ ಇಂತಹ ಶುಭಲಕ್ಷಣಗಳು ಕಂಡುಬಂದರೆ, ಯಜಮಾನನು ಶುಭಪರಂಪರೆಯನ್ನು ಹೊಂದುತ್ತಾನೆಂದು ತಿಳಿದುಕೋ; ಹೀಗೆಂದು ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಮಹಾಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ವಹ್ನಿಲಕ್ಷಣವೆಂಬ ಹೆಸರಿನ ಇಪ್ಪತ್ತನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕವಿಂಶತಿತಮೋಽಧ್ಯಾಯಃ

### ಪುಷ್ಕರ ಉವಾಚ

ಸ್ನಾನಂ ಸಮಾಚರೇದ್ರಾಜ್ಞೋ ಹೋಮಕಾಲೇ ಪುರೋಹಿತಃ ।
ಆದೌ ತು ಸ್ವೇಚ್ಛಯಾ ಸ್ನಾತಃ ಪುನರ್ಮೃದ್ಭಿಃ ಸಮಾಚರೇತ್ ॥ ೧ ॥

ಪರ್ವತಾಗ್ರಮೃದಾ ತಾವನ್ಮೂರ್ಧಾನಂ ಶೋಧಯೇನ್ನೃಪಃ ।
ವಲ್ಮೀಕಾಗ್ರಮೃದಾ ಕರ್ಣೌ ಚಂಧನೈಃ ಕೇಶವಾಲಕಾನ್ ॥ ೨ ॥

---

### ಇಪ್ಪತ್ತೊಂದನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನನ್ನು ಕುರಿತು ಪುನಃ ಹೇಳುತ್ತಾನೆ:— ಹೋಮಮಾಡುವುದಕ್ಕಿಂತ ಮುಂಚಿತವಾಗಿ ಪುರೋಹಿತನು ಮಹಾರಾಜನಿಗೆ ಸ್ನಾನ ಮಾಡಿಸಬೇಕು. ಈ ರೀತಿ ಸ್ನಾನಮಾಡಿಸುವುದಕ್ಕಿಂತ ಮೊದಲೇ ಒಂದು ಬಾರಿ ರಾಜನು ತಾನೇ ಸ್ವೇಚ್ಛೆಯಿಂದೊಮ್ಮೆ ಸ್ನಾನಮಾಡಬೇಕು. ಸ್ನಾನಮಾಡುವಾಗ ಉಪಯೋಗಿಸುವ ಮೃತ್ತಿಕೆಯ ಲಕ್ಷಣವನ್ನೀಗ ಹೇಳುತ್ತೇನೆ, ಕೇಳು.

೨. ಬೆಟ್ಟದ ತುದಿಯಲ್ಲಿರುವ ಮಣ್ಣನ್ನು ತಂದು, ಅದನ್ನು ಚೆನ್ನಾಗಿ ತಲೆಗೆ ಉಜ್ಜಿಕೊಂಡು ಸ್ನಾನಮಾಡಬೇಕು. ಹುತ್ತದ ಮಣ್ಣಿನಿಂದ ಎರಡು ಕಿವಿಗಳನ್ನೂ ಚೆನ್ನಾಗಿ ತಿಕ್ಕಿ ಸ್ನಾನಮಾಡಬೇಕು. ವಿಷ್ಣುದೇವಸ್ಥಾನದಿಂದ ತಂದ ಗಂಧದಿಂದ ಜುಟ್ಟನ್ನೂ ಕೂದಲತುದಿಗಳನ್ನೂ ಚೆನ್ನಾಗಿ ಉಜ್ಜಿ ಮಜ್ಜನಮಾಡಬೇಕು.

**ಚಂದ್ರಾಲಯಮೃದಾ ಗ್ರೀವಾಂ ಹೃದಯಂ ತು ನೃಪಾಜಿರಾತ್ ।**
**ಕರಿದಂತೋದ್ಧೃತಮೃದಾ ದಕ್ಷಿಣಂ ತು ತಥಾ ಭುಜಂ ॥ ೩ ॥**

**ವೃಷಶೃಂಗೋದ್ಧೃತಮೃದಾ ವಾಮಂ ಚೈವ ತದಾ ಭುಜಂ ॥ ೪ ॥**

**ಸರೋಮೃದಾ ತಥಾ ಪೃಷ್ಠಂ ಚೋದರಂ ಸಾಂಗಮೇ ಮೃದಾ ।**
**ನದೀಕೂಲದ್ವಯಮೃದಾ ಪಾರ್ಶ್ವೇ ಸಂಶೋಧಯೇತ್ತಥಾ ॥ ೫ ॥**

**ಅಶ್ವಸ್ಥಾನಾತ್ತಥಾ ಜಂಘೇ ರಾಜಾ ಸಂಶೋಧಯೇದ್ಬುಧಃ ।**
**ರಥಚಕ್ರೋದ್ಧೃತಮೃದಾ ತಥೈವಚ ಕರದ್ವಯಂ ॥ ೬ ॥**

**ಮೃತ್ಸ್ನಾತಃ ಸಪನೀಯಃಸ್ಯಾತ್ಪಂಚಗವ್ಯಜಲೇನ ತು ।**
**ತತೋ ಭದ್ರಾಸನಗತಂ ಮುಖ್ಯಾಮಾತ್ಯಚತುಷ್ಟಯಂ ॥ ೭ ॥**

---

೩. ಚಂದ್ರಾಲಯದಿಂದ ತಂದ ಮೃತ್ತಿಕೆಯಿಂದ ಕತ್ತನ್ನು ಚೆನ್ನಾಗಿ ಉಜ್ಜಬೇಕು. ಅರಮನೆಯ ಹತ್ತಿರವಿರುವ ಮಣ್ಣಿನಿಂದ ಎದೆಯನ್ನುಜ್ಜಬೇಕು. ಆನೆಯ ಕೊಂಬಿನಿಂದ ಮಿಾಟ ತೆಗೆದ ಮಣ್ಣಿನಿಂದ ಬಲಭುಜವನ್ನು ಚೆನ್ನಾಗಿ ಉಜ್ಜಬೇಕು.

೪. ಎತ್ತಿನಕೊಂಬಿನಿಂದ ಮಿಾಟ ತೆಗೆದ ಮಣ್ಣಿನಿಂದ ಎಡಭುಜವನ್ನು ಚೆನ್ನಾಗಿ ಉಜ್ಜಿಕೊಂಡು ಸ್ನಾನಮಾಡಬೇಕು.

೫. ಸರೋವರದ ಮಣ್ಣಿನಿಂದ ಬೆನ್ನನ್ನು ಚೆನ್ನಾಗಿ ತಿಕ್ಕಬೇಕು. ನದೀ ಸಂಗಮದಲ್ಲಿ ಸಿಕ್ಕುವ ಮಣ್ಣನ್ನು ತಂದು ಹೊಟ್ಟೆಯನ್ನು ಚೆನ್ನಾಗಿ ಉಜ್ಜಬೇಕು. ನದೀತೀರದಲ್ಲಿ ದೊರೆಯುವ ಮಣ್ಣನ್ನು ತೆಗೆದುಕೊಂಡು ಬಂದು ಎರಡು ಪಕ್ಕೆಗಳನ್ನೂ ಚೆನ್ನಾಗಿ ಉಜ್ಜಬೇಕು.

೬. ಬುದ್ಧಿಶಾಲಿಯಾದ ದೊರೆಯು ಅಶ್ವಾಲಯದ ಮಣ್ಣನ್ನು ತಂದು ಎರಡು ಮೊಣಕಾಲುಗಳನ್ನೂ ಚೆನ್ನಾಗಿ ಉಜ್ಜಬೇಕು. ಬಂಡಿಯ ಅಡಿಯಮಣ್ಣನ್ನು ತಂದು ಎರಡು ಕೈಗಳನ್ನು ಚೆನ್ನಾಗಿ ಉಜ್ಜಿ ತೊಳೆಯಬೇಕು.

೭. ಈ ರೀತಿ ಮೃತ್ತಿಕೆಗಳಿಂದ ಸ್ನಾನಮಾಡಿ ಶುದ್ಧನಾದ ಬಳಿಕ ಪಂಚಗವ್ಯವನ್ನು ಬೆರಸಿದ ನೀರಿನಿಂದ ಪುನಃ ಸ್ನಾನಮಾಡಬೇಕು. ಇಂತು ಸ್ನಾನಮಾಡಿದ ಬಳಿಕ ಶುಭ್ರವಾದ ಬಟ್ಟೆಯಲ್ಲಿ ಮೈಯೊರಿಸಿಕೊಂಡವನಾಗಿ ರಾಜನು ತನ್ನ ಮುಖ್ಯರಾದ ನಾಲ್ಕುಜನ ಮಂತ್ರಿಗಳ ಜತೆಯಲ್ಲಿ ಬಂದು ಸಿಂಹಾ (ಭದ್ರಾ)ಸನದಲ್ಲಿ ಮಂಡಿಸಬೇಕು. ಆ ನಾಲ್ಕುಜನ ಮಂತ್ರಿಗಳೂ ನಾಲ್ಕು ವರ್ಣಾಶ್ರಮದವರಾಗಿರಬೇಕು.

**ವರ್ಣಪ್ರಧಾನಂ ಭೂಪಾಲ ಮಭಿಷಿಂಚೇದ್ಯಥಾವಿಧಿ ।**
**ಪೂರ್ವತೋ ಹೇಮಕುಂಭೇನ ಘೃತಪೂರ್ಣೇನ ಬ್ರಾಹ್ಮಣಃ ॥ ೮ ॥**
**ರೂಪ್ಯಕುಂಭೇನ ಯಾಮ್ಯೇನ ಕ್ಷೀರಪೂರ್ಣೇನ ಕ್ಷತ್ರಿಯಃ ।**
**ದಧ್ನಾ ಚ ತಾಮ್ರಕುಂಭೇನ ವೈಶ್ಯಃ ಪಶ್ಚಿಮತೋ ದ್ವಿಜ ॥ ೯ ॥**
**ಮಾಹೇಯೇನ ಜಲೇನೋದಕ್ ಶೂದ್ರಾಮಾತ್ಯೋಽಭಿಷೇಚಯೇತ್ ।**
**ತತೋಽಭಿಷೇಕಂ ನೃಪತೇರ್ಬಹ್ವೃಚಪ್ರವರೋ ದ್ವಿಜಃ ॥ ೧೦ ॥**
**ಕುರ್ವೀತ ಮಧುನಾ ರಾಮ ಛಂದೋಗಶ್ಚ ಕುಶೋದಕೈಃ ।**
**ಸಮ್ಪಾತವಂತಂ ಕಲಶಂ ತಥಾ ನುತ್ವಾ ಪುರೋಹಿತಃ ॥ ೧೧ ॥**

---

೮. ಆ ಸಮಯದಲ್ಲಿ ಸಕಲವರ್ಣಾಶ್ರಮಧರ್ಮದ ಜನರೂ ಅಲ್ಲಿ ಸಿದ್ಧರಾಗಿರಬೇಕು. ಇಂತು ಮಹಾಸಭೆಯು ನಡೆದಿರುವ ಸಮಯದಲ್ಲಿ ನಿಷ್ಠನಾದ ಬ್ರಾಹ್ಮಣ ಮಂತ್ರಿಯು ಒಂದು ಚಿನ್ನದ ಬಿಂದಿಗೆಯ ತುಂಬಾ ತುಪ್ಪವನ್ನು ತುಂಬಿಕೊಂಡು ಪೂರ್ವದಿಕ್ಕಿನಿಂದ ಬಂದು, ಆ ತುಪ್ಪವನ್ನು ಮಹಾರಾಜನ ಶಿರಸ್ಸಿನ ಮೇಲೆ ಅಭಿಷೇಕ ಮಾಡಬೇಕು.

೯. ಆ ಬಳಿಕ ಒಬ್ಬ ವೀರಕ್ಷತ್ರಿಯನಾದ ಕ್ಷತ್ರಿಯ ಮಂತ್ರಿಯು ಒಂದು ಬೆಳ್ಳಿಯ-ಕೊಡದ ತುಂಬಾ ಹಾಲನ್ನು ತುಂಬಿ ತೆಗೆದುಕೊಂಡು ದಕ್ಷಿಣದಿಕ್ಕಿನಿಂದ ಬಂದು ರಾಜನ ತಲೆಯ ಮೇಲೆ ಆ ಕ್ಷೀರದಿಂದ ಅಭಿಷೇಕಮಾಡಬೇಕು. ಕ್ಷೀರಾಭಿಷೇಕವಾದ ಬಳಿಕ ಓರ್ವ ಸ್ವಧರ್ಮನಿರತನಾದ ವೈಶ್ಯಮಂತ್ರಿಯು ಒಂದು ತಾಮ್ರದ ಬಿಂದಿಗೆಯ ತುಂಬಾ ಮೊಸರನ್ನು ತುಂಬಿಕೊಂಡು ಪಶ್ಚಿಮದಿಕ್ಕಿನಿಂದ ಬಂದು ಆ ದಧಿಯಿಂದ ರಾಜನ ತಲೆಯ ಮೇಲೆ ಅಭಿಷೇಕಮಾಡಬೇಕು.

೧೦. ಆ ಬಳಿಕ ಶೂದ್ರಾಮಾತ್ಯನು ಮಣ್ಣಿನ ಹರವಿಯ ತುಂಬಾ ಶುದ್ಧೋದಕವನ್ನು ತುಂಬಿಕೊಂಡು ಉತ್ತರದಿಕ್ಕಿನಿಂದ ಬಂದು ಆ ಜಲದಿಂದ ರಾಜನ ಶಿರಸ್ಸಿನ ಮೇಲೆ ಅಭಿಷೇಕಮಾಡಬೇಕು. ಈರೀತಿ ಅಮಾತ್ಯಾಭಿಷೇಕಾನಂತರ ಒಬ್ಬ ಋಗ್ವೇದಾಧ್ಯಾಯಿಯಾದ ಬ್ರಾಹ್ಮಣನು ಜೇನುತುಪ್ಪವನ್ನು ಅಭಿಷೇಕಮಾಡಬೇಕು. (ಋಗ್ವೇದಿಗಳಿಗೆ ಬಹ್ವೃಚರೆಂದು ಹೆಸರು.)

೧೧. ಬಳಿಕ ಒಬ್ಬ ಸಾಮಗನು ಸಾಮವೇದವನ್ನು ಪಾರಾಯಣಮಾಡುತ್ತಾ ಕುಶೋದಕಗಳಿಂದ ರಾಜನಿಗೆ ಅಭಿಷೇಕಮಾಡಬೇಕು. ಈ ರೀತಿ ಅಭಿಷೇಕವಾದ ಬಳಿಕ ಅಭಿಷೇಕಾರ್ಥವಾಗಿ ಅಲ್ಲಿ ಸಿದ್ಧಪಡಿಸಲ್ಪಟ್ಟ ಉಳಿದಕಲಶಗಳಿಗೆ ಪುರೋಹಿತನು ನಮಸ್ಕರಿಸಬೇಕು.

**ವಿಧಾಯ ವಹ್ನಿರಕ್ಷಾಂತು ಸದಸ್ಯೇಷು ಯಥಾವಿಧಿ ।**
**ರಾಜಸೂಯಾಭಿಷೇಕೇತು ಯೇ ಮಂತ್ರಾಃ ಪರಿಕೀರ್ತಿತಾಃ　　॥ ೧೨ ॥**

**ತೈಸ್ತು ದದ್ಯಾನ್ಮಹಾಭಾಗ ಬ್ರಾಹ್ಮಣಾನಾಂ ಸ್ವನೇನ ತು ।**
**ತತಃ ಪುರೋಹಿತೋ ಗಚ್ಛೇದ್ವೇದಿಮೂಲಂ ತದೈವ ತು　　॥ ೧೩ ॥**

**ವಿಭೂಷಿತಂ ತು ರಾಜಾನಂ ಸರ್ವತೋಭದ್ರ ಆಸನೇ ।**
**ಶತಚ್ಛಿದ್ರೇಣ ಪಾತ್ರೇಣ ಸೌವರ್ಣೇನ ಯಥಾವಿಧಿ　　॥ ೧೪ ॥**

**ಅಭಿಷಿಂಚತಿ ಧರ್ಮಜ್ಞ ಯಜುರ್ವೇದವಿಶಾರದಃ ।**
**ಯಾ ಓಷಧೀ ರೌಷಧೀಭಿಃ ಸರ್ವಾಭಿಃ ಸುಸಮಾಹಿತಃ　　॥ ೧೫ ॥**

---

೧೨. ಪುರೋಹಿತನು ಅಗ್ನಿಯನ್ನು ಜಾಗರೂಕನಾಗಿ ಸಂರಕ್ಷಿಸಿಕೊಂಡಿದ್ದು, ಸದಸ್ಯರೆಲ್ಲರೂ ಸೇರಿದ್ದ ಆ ಸಮಯದಲ್ಲಿ ರಾಜನಿಗೆ ರಕ್ಷೆಯನ್ನಿಡಬೇಕು. ಆ ರಕ್ಷಾ ಮಂತ್ರಗಳೆಲ್ಲವೂ ರಾಜಸೂಯಯಾಗಕಾಲದಲ್ಲಿ ಧರ್ಮರಾಜನಿಗೆ ಪಟ್ಟಾಭಿಷೇಕಾರ್ಥ ವಾಗಿ ಬ್ರಾಹ್ಮಣರಿಂದ ಪಠಿಸಲ್ಪಟ್ಟ ಮಂತ್ರಗಳು.

೧೩. ಈ ಮಂತ್ರಗಳನ್ನು ಉಚ್ಚಸ್ವರದಿಂದ ಬ್ರಾಹ್ಮಣರು ಪಠಿಸುತ್ತಾ ಅಭಿಷೇಕ ಮಾಡಬೇಕು. ಪಟ್ಟಾಭಿಷೇಕ ಮಂತ್ರಗಳು ಪೂರೈಸಿದೊಡನೆಯೇ ಪುರೋಹಿತನು ಹಸೇ ಜಗುಲಿಯ ಹತ್ತಿರಕ್ಕೆ ಬರಬೇಕು.

೧೪. ಸರ್ವತೋಭದ್ರದ ರಂಗವಲ್ಲಿಯನ್ನಿಟ್ಟು ಅಲ್ಲಿ ಒಂದು ಪೀಠವನ್ನು ಹಾಕಿ, ಆ ಪೀಠದ ಮೇಲೆ ಸರ್ವಾಭರಣಭೂಷಿತನಾದ ಮಹಾರಾಜನನ್ನು ಕುಳ್ಳಿರಿಸಿ, ಅವನ ತಲೆಯ ಮೇಲೆ ಚಿನ್ನದ ಶತಚ್ಛಿದ್ರ (ವಂದರಿ)ವನ್ನು ಪುರೋಹಿತನು ಹಿಡಿದು ಕೊಂಡು ನಿಂತುಕೊಳ್ಳಬೇಕು.

೧೫. ಆಗ ಯಜುರ್ವೇದವನ್ನು ಚೆನ್ನಾಗಿ ಅಧ್ಯಯನಮಾಡಿದ ಬ್ರಾಹ್ಮಣನು ಆ ಸ್ಥಳಕ್ಕೆ ಬಂದು ಪಟ್ಟಾಭಿಷೇಕ ಮಂತ್ರಗಳನ್ನು ಹೇಳಲಾರಂಭಿಸಿದೊಡನೆ ಶತಚ್ಛಿದ್ರದ ಮೇಲೆ ಜಲವನ್ನು ಸುರಿಯಬೇಕು (ಅಭಿಷೇಕ ಮಾಡಬೇಕು). ಆ ಮಂತ್ರಗಳಾವು ವೆಂದರೆ;—ಯಾ ಓಷಧೀಸ್ಸೋಮರಾಜ್ಞೀಃ—ಓಷಧಿರಸಗಳಿಂದ ಅಭಿಷೇಕಮಾಡ ಬೇಕಾದ ಮಂತ್ರವು, ರಥೇ ಅಕ್ಷೇನ ಎಂಬುದಾಗಿರುತ್ತದೆ.

ರಥೇ ಅಕ್ಷೇತಿ ಗಂಧೈಶ್ಚ ಆಬ್ರಹ್ಮನ್ಬ್ರಾಹ್ಮಣೇತಿ ಚ ।
ಬೀಜೈಃ ಪುಷ್ಪೈಃ ತಥಾಚೈನಂ ರಾಮ ಪುಷ್ಪವತೀತಿ ಚ ॥ ೧೬ ॥

ತೇನೈವ ಚಾಭಿಮಂತ್ರೇಣ ಫಲೈಸ್ತಮಭಿಷೇಚಯೇತ್ ।
ಆಶುಃ ಶಿಶಾನ ಇತ್ಯೇವ ಸರ್ವರತ್ನೈಶ್ಚ ಭಾರ್ಗವ ॥ ೧೭ ॥

ಯೇ ದೇವಾಃ ಪುರಸ್ಸದೇತಿ ಕುಶಾಭಿಃ ಪರಿಮಾರ್ಜಯೇತ್ ।
ಋಗ್ವೇದಕ್ರಮತೋ ರಾಜ್ಞೋ ರೋಚನಾಯ್ಯಾ ಯಥಾವಿಧಿ ॥ ೧೮ ॥

ಮೂರ್ಧಾನಂ ಚ ತಥಾ ಕಂಠೇ ಗಂಧದ್ವಾರೇತಿಸಂಸ್ಪೃಶೇತ್ ।
ತತೋ ಬ್ರಾಹ್ಮಣಮುಖ್ಯಾಶ್ಚ ಕ್ಷತ್ರಿಯಾಶ್ಚ ವಿಶಸ್ತಥಾ ॥ ೧೯ ॥

---

೧೬. ಆ ಬ್ರಹ್ಮನ್ ಬ್ರಾಹ್ಮಣೋ ವಿದ್ವಾನ್ ಎಂಬ ಮಂತ್ರದಿಂದ ಗಂಧೋದಕಾಭಿಷೇಕವನ್ನು ಮಾಡಬೇಕು. ಪುಷ್ಪವತೀ ಎಂಬ ಮಂತ್ರದಿಂದಲೂ ಬೀಜಮಂತ್ರಗಳಿಂದಲೂ ಪುಷ್ಪೋದಕಗಳಿಂದಲೂ ಅಭಿಷೇಕಮಾಡಬೇಕು.

೧೭. ಮೇಲೆಹೇಳಿದ ಮಂತ್ರವನ್ನೇ ಮತ್ತೊಮ್ಮೆ ಹೇಳಿಕೊಂಡು ಫಲೋದಕಗಳಿಂದ ಅಭಿಷೇಕಮಾಡಬೇಕು. ಆ ಬಳಿಕ ಆಶುಶ್ಶಿಶಾನೋವೃಷಭೋನಇಧ್ಮೋ ಎಂಬ ಮಂತ್ರವನ್ನು ಹೇಳುತ್ತಾ ಸರ್ವರತ್ನೋದಕಗಳಿಂದ ಅಭಿಷೇಕವನ್ನು ಮಾಡಬೇಕು.

೧೮. ಅನಂತರ ಯೇ ದೇವಾಃ ಪುರಸ್ಸರಃ, ಎಂಬ ಮಂತ್ರವನ್ನು ಪುರಶ್ಚರಣೆ ಮಾಡುತ್ತಾ ಕುಶೋದಕಗಳಿಂದ ಪರಿಮಾರ್ಜನೆ ಮಾಡಬೇಕು. ಆ ಬಳಿಕ ಋಗ್ವೇದ ಮಂತ್ರಗಳಿಂದ ಯಥಾವಿಧಿಯಾಗಿ ರೋಚನಾಯಾ, ಎಂಬ ಮಂತ್ರದಿಂದ ಅಭಿಷೇಕ ಮಾಡಬೇಕು.

೧೯. ಅನಂತರದೋಳ್ ಗಂಧದ್ವಾರಾಂದುರಾಧರ್ಷಾಂ ಎಂಬ ಮಂತ್ರವನ್ನು ಹೇಳಿ ಮಹಾರಾಜನ ತಲೆಯನ್ನೂ ಕತ್ತನ್ನೂ ಪುರೋಹಿತನು ಸ್ಪರ್ಶಮಾಡಬೇಕು. ಇಷ್ಟು ಕ್ರಮವಾದ ಮೇಲೆ ಮುಖ್ಯಮುಖ್ಯರಾದ ಬ್ರಾಹ್ಮಣರೂ, ಕ್ಷತ್ರಿಯರೂ, ವೈಶ್ಯರೂ, ಶೂದ್ರರೂ, ನರನಾರಿಯರೂ ಸಹ ಆ ಪಟ್ಟಾಭಿಷೇಕ ಸ್ಥಳಕ್ಕೆ ಬರಬೇಕು.

**ಶೂದ್ರಾಶ್ಚ ವಾರಮುಖ್ಯಾಶ್ಚ ನಾನಾತೀರ್ಥಸಮುದ್ಭವೈಃ ।**
**ನಾದೇಯೈಃ ಸಾರಸ್ಯೈಃ ಕೌಪ್ಯೈರ್ನಾನಾಕಲಶಸಂಸ್ಥಿತೈಃ ॥ ೨೦ ॥**

**ಚತುಸ್ಸಾಗರಜೈರ್ಲಾಭಾದಲಾಭಾದ್ದ್ವಿಜಕಲ್ಪಿತೈಃ ।**
**ಗಂಗಾಯಮುನಯೋಶ್ಚೈವ ನಿರ್ಝರೈಶ್ಚ ತಥೋದ್ಭಿಜ್ಜೈಃ ॥ ೨೧ ॥**

**ಛತ್ರಪಾಣಿರ್ಭವೇತ್ಕಶ್ಚಿತ್ಕೇಚಿಚ್ಚಾಮರಪಾಣಯಃ ।**
**ಅಮಾತ್ಯಮುಖ್ಯಾಸ್ತಂ ಕಾಲಂ ಕೇಚಿದ್ವೇತ್ರ ಕರಾಸ್ತಥಾ ॥ ೨೨ ॥**

**ಶಂಖಭೇರೀನಿನಾದೇನ ಬಂದಿನಾಂ ನಿಸ್ವನೇನ ಚ ।**
**ಗೀತವಾದಿತ್ರಘೋಷೇಣ ದ್ವಿಜಕೋಲಾಹಲೇನ ಚ ॥ ೨೩ ॥**

---

೨೦. ಹಾಗೆ ಎಲ್ಲರೂ ಸೇರಿದ ಬಳಿಕ ನಾನಾ ತೀರ್ಥಗಳಿಂದ ತಂದಿದ್ದ ಸುಗಂಧ ಭರಿತವಾದ ಜಲಗಳಿಂದಲೂ, ನಾನಾ ಕಲಶಗಳಲ್ಲಿ ತುಂಬಿಟ್ಟಿರುವ ಕೂಪಜಲಗಳಿಂದಲೂ ಎಲ್ಲರೂ ರಾಜನಿಗೆ ಅಭಿಷೇಕಮಾಡಬೇಕು.

೨೧. ನಾಲ್ಕು ಸಮುದ್ರಗಳಿಂದಲೂ ನೀರನ್ನು ತರಿಸಬೇಕು. ಅವು ಸಿಕ್ಕಲಿ ಅಥವಾ ಸಿಕ್ಕದಿರಲಿ ಬ್ರಾಹ್ಮಣರ ಹಸ್ತಗಳಿಂದ ಶುದ್ಧೋದಕವನ್ನು ತರಿಸಿ ಕಲಶಗಳಲ್ಲಿ ತುಂಬಿಸಿದರೂ ಸಾಕು. ಗಂಗಾಯುಮುನಾ-ನದಿಗಳ ನೀರನ್ನು ತರಿಸಬೇಕು. ಬುಗ್ಗೆಗಳಲ್ಲಿ ಹೊರಡುವ ನೀರನ್ನೂ, ಝುರಿಗಳಲ್ಲಿ ಹರಿಯುವ ನೀರನ್ನೂ ತರಿಸಬೇಕು. ಚಿಲುಮೆಗಳಲ್ಲಿ ತೋಡಿ ತೆಗೆದ ನೀರನ್ನೂ ತರಿಸಿಡಬೇಕು.

೨೨. ಪಟ್ಟಾಭಿಷೇಕವಾಗುತ್ತಿರುವಾಗ ಒಬ್ಬನು ಶ್ವೇತಛತ್ರಿಯನ್ನು ಹಿಡಿದು ನಿಂತಿರಬೇಕು. ಇಬ್ಬರು ಉಭಯ ಪಾರ್ಶ್ವಗಳಲ್ಲಿಯೂ ಚಾಮರಗಳನ್ನು ಹಿಡಿದು ಬೀಸುತ್ತಾ ನಿಂತಿರಬೇಕು. ಆ ಕಾಲದಲ್ಲಿ ಅಮಾತ್ಯಮುಖ್ಯರೆಲ್ಲರೂ ಸಿದ್ಧರಾಗಿ ನಿಂತಿರಬೇಕು. ಮುಂದುಗಡೆ ಕಟ್ಟಿಗೆಯುವರು ಕೈಕಟ್ಟಿಕೊಂಡು ಕಾದು ನಿಂತಿರಬೇಕು.

೨೩. ಶಂಖಭೇರೀನಿನಾದಗಳಾಗುತ್ತಿರಬೇಕು. ವಂದಿಮಾಗಧರು ಹೊಗಳುತ್ತಿರಬೇಕು. ಗೀತ ಮಂತ್ರ ಘೋಷಗಳಾಗುತ್ತಿರಬೇಕು. ದ್ವಿಜರ ಕೋಲಾಹಲದಿಂದ ಅಂದರೆ ವೇದಘೋಷಗಳಿಂದ ಸಭೆಯು ತುಂಬಿರಬೇಕು.

ರಾಜಾನಮಭಿಷಿಂಚೇಯುಸ್ಸಮೇತ್ಯ ಸಹಿತಾ ಜನಾಃ ।
ಸರ್ವೈಃ ಸ್ತುತೋಽಭಿಷಿಕ್ತಶ್ಚ ಸಂಮಿಶ್ರಜಲಮಿಶ್ರಿತಂ ॥ ೨೪ ॥

ಸರ್ವೌಷಧಿಯುತಂ ಪುಣ್ಯಂ ಸರ್ವಗಂಧಯುತಂ ತಥಾ ।
ರತ್ನಬೀಜಸಮಾಯುಕ್ತಂ ಫಲಬೀಜಯುತಂ ತಥಾ ॥ ೨೫ ॥

ಊರ್ಜಿತಂ ಸಿತಸೂತ್ರೇಣ ವೇಷ್ಟಿತಗ್ರೀವಮೇವ ಚ ।
ಶ್ವೇತವಸ್ತ್ರಾಮ್ರಪತ್ರೈಶ್ಚ ಸಂವೀತಂ ಸುವಿಭೂಷಿತಂ ॥ ೨೬ ॥

ಕ್ಷೀರವೃಕ್ಷಲತಾಛತ್ರಂ ಸುದೃಢಂ ಕಾಂಚನಂ ನವಂ ।
ಆದಾಯ ಕಲಶಂ ರಾಜ್ಞಾ ಸ್ವಯಂ ಸಾಂವತ್ಸರಸ್ತಥಾ ॥ ೨೭ ॥

---

೨೪. ಅಂತಹ ಶುಭಸಮಯದಲ್ಲಿ ಸಕಲಜನರೂ ಸೇರಿ ಮಹಾರಾಜನಿಗೆ ಪಟ್ಟಾಭಿಷೇಕಮಾಡಬೇಕು. ಈ ರೀತಿಯಾಗಿ ಸಮ್ಮಿಶ್ರ ಜಲಮಿಶ್ರಿತ ತೀರ್ಥಗಳಿಂದ ರಾಜನು ಸರ್ವರಿಂದಲೂ ಸ್ತುತನಾಗಿ ಪಟ್ಟಾಭಿಷಿಕ್ತನಾಗಬೇಕು.

೨೫. ವಿಧಿವಿಹಿತವಾದ ಕಲಶಗಳಲ್ಲಿ ಸರ್ವೌಷಧರಸಗಳೂ, ಪುಣ್ಯಜಲಗಳೂ ಸರ್ವಗಂಧೋದಕಗಳೂ, ರತ್ನಬೀಜಸಮಾಯುಕ್ತ ಜಲಗಳೂ, ಫಲಬೀಜಯುತ ತೀರ್ಥಗಳೂ ಸಿದ್ಧಪಡಿಸಲ್ಪಟ್ಟಿರಬೇಕು.

೨೬. ಎಲ್ಲ ಕಲಶಗಳ ಕತ್ತುಗಳಿಗೂ ಹಸೀನೂಲನ್ನು ಸುತ್ತಿರಬೇಕು. ಆ ಕಲಶ ಗಳಿಗೆಲ್ಲಾ ಶುಭ್ರವಾದ ವಸ್ತ್ರಗಳನ್ನು ಸುತ್ತಿರಬೇಕು. ಬೆಳ್ಳಗೆ ಕಲಶದ ಸುತ್ತಲೂ ಸುಣ್ಣವನ್ನೂ ಅರಿಶಿನವನ್ನೂ ಬಳಿದಿರಬೇಕು.

೨೭. ಕ್ಷೀರವೃಕ್ಷದ ಬಳ್ಳಿಗಳಿಂದ ಕಲಶಗಳನ್ನು ಸುತ್ತಿರಬೇಕು. ಪ್ರಧಾನ ಕಲಶವನ್ನು ಮಾತ್ರ ಚಿನ್ನದಿಂದ ದೃಢವಾಗಿ ಮಾಡಿಸಿ ಅದನ್ನು ಜೋಯಿಸರೇ ತೆಗೆದುಕೊಂಡು ಅಭಿಷೇಕಮಾಡಬೇಕು.

**ಮಂತ್ರಾವಸಾನೇ ಕಲಶಂ ದದ್ಯಾದ್ಭೃಗುಕುಲೋದ್ವಹ ।**
**ತಥಾ ಪಶ್ಯೇನ್ಮುಖಂ ರಾಜಾ ದರ್ಪಣೇ ಚಾಥ ಸರ್ಪಿಷಿ ॥ ೨೮ ॥**

**ಸೋಷ್ಣೀಷಃ ಸಿತವಸ್ತ್ರಶ್ಚ ಮಂಗಲಾಲಂಭನಂ ತತಃ ।**
**ಕೃತ್ವಾ ಸಂಪೂಜಯೇದ್ವಿಷ್ಣುಂ ಬ್ರಹ್ಮಾಣಂ ಶಂಕರಂ ತಥಾ ॥ ೨೯ ॥**

**ಲೋಕಪಾಲಾನ್ಗ್ರಹಾಂಶ್ಚೈವ ನಕ್ಷತ್ರಾಣಿ ಚ ಭಾರ್ಗವ ।**
**ತತಃ ಸ್ವಪೂಜಾಂ ಕುರ್ವೀತ ಶಯನೀಯಂ ತತೋ ವ್ರಜೇತ್ ॥ ೩೦ ॥**

**ವ್ಯಾಘ್ರಚರ್ಮೋತ್ತರಂ ರಮ್ಯಂ ಸಿತವಸ್ತ್ರೋತ್ತರಚ್ಛದಂ ।**
**ಪುರೋಧಾ ಮಧುಪರ್ಕೇಣ ತತ್ರಸ್ಥಂ ತಂ ಸಮರ್ಚಯೇತ್ ॥ ೩೧ ॥**

---

೨೮. ಅಭಿಷೇಕಮಂತ್ರವು ಮುಗಿದ ಮೇಲೆ ಆ ಪ್ರಧಾನ ಸುವರ್ಣಕಲಶವನ್ನು ಮಹಾರಾಜನು ಜೋಯಿಸರಿಗೆ ಕೊಟ್ಟುಬಿಡಬೇಕು. ಈ ರೀತಿ ಕಲಶದಾನ ಮಾಡಿದ ಬಳಿಕ ಮಹಾರಾಜನು ಕನ್ನಡಿಯಲ್ಲೂ ತುಪ್ಪದಲ್ಲೂ ತನ್ನ ಮುಖವನ್ನೂ ನೋಡಿಕೊಳ್ಳಬೇಕು.

೨೯. ಅನಂತರ ಮಹಾರಾಜನು ಮೊದಲು ಉಟ್ಟಿದ್ದ ವಸ್ತ್ರಗಳನ್ನು ವಿಸರ್ಜಿಸಿ ಹೊಸ ಪಂಚೆಗಳನ್ನುಟ್ಟುಕೊಂಡು ತಲೆಗೆ ರುಮಾಲನ್ನು ಇಟ್ಟುಕೊಳ್ಳಬೇಕು. ಬಳಿಕ ಪುಣ್ಯಾಹವಾಚನವಾಗಬೇಕು. ಪುಣ್ಯಾಹ (ಮಂಗಳಾಲಂಭನ)ವಾದೊಡನೆಯೇ ತ್ರಿಮೂರ್ತಿಗಳ (ಬ್ರಹ್ಮವಿಷ್ಣುಮಹೇಶ್ವರರ)ನ್ನು ಪೂಜಿಸಬೇಕು.

೩೦. ಬಳಿಕ ಲೋಕಪಾಲಕರನ್ನೂ, ನವಗ್ರಹಗಳನ್ನೂ, ನಕ್ಷತ್ರಗಳನ್ನೂ ಪೂಜೆಮಾಡಿ, ಆಮೇಲೆ ಆತ್ಮ (ಸ್ವ)ಪೂಜೆಯನ್ನು ಮಾಡಿಕೊಳ್ಳಬೇಕು. ಇಷ್ಟಾದ ಬಳಿಕ ಹಸೇಮಣೆಯ ಮೇಲೆ ಹೋಗಿ ಕುಳಿತುಕೊಳ್ಳಬೇಕು.

೩೧. ಹಸೆಯಮೇಲೆ ವ್ಯಾಘ್ರಚರ್ಮವನ್ನು ಹಾಸಿ, ಅದರ ಮೇಲೆ ಬೆಳ್ಳಗಿರುವ ಪಂಚೆಯನ್ನು ಹಾಸಿ, ಅದರ ಮೇಲೆ (ರಾಜನನ್ನು ಪುರೋಹಿತನು ಕೂರಿಸಬೇಕು. ಆಸನಾಸೀನನಾದೊಡನೆ ರಾಜನು ಪುರೋಹಿತನನ್ನು ಪೂಜಿಸಬೇಕು.)

ರಾಜಾ ಚೈವಾರ್ಚಯೇತ್ತತ್ರ ಸಾಂವತ್ಸರಪುರೋಹಿತೌ ।
ಮಧುಪರ್ಕೇಣ ಧರ್ಮಜ್ಞಸ್ತತಸ್ತಸ್ಯ ಸದೈವ ಹಿ ॥ ೩೨ ॥

ಪಟ್ಟಬಂಧಂ ಪ್ರಕುರ್ವೀತ ಮುಕುಟಸ್ಯ ಚ ಬಂಧನಂ ।
ತತಃ ಸ ಬದ್ಧಮುಕುಟಃ ಕಾಲೇ ಪೂರ್ವಂ ಮಯೇರಿತಂ ॥ ೩೩ ॥

ಪರಾರ್ಧ್ಯಾಸ್ತರಣೋಪೇತೇ ಪಂಚಚರ್ಮೋತ್ತರಚ್ಛದೇ ।
ಧ್ರುವಾ ದ್ಯೌ ರಿತಿ ಮಂತ್ರೇಣ ಸೋಪವೇಶ್ಯ ಪುರೋಧಸಾ ॥ ೩೪ ॥

ವೃಕಸ್ಯ ವೃಷದಂಶಸ್ಯ ದ್ವೀಪಿನಶ್ಚ ಭೃಗೂತ್ತಮ ।
ತೇಷಾಮುಪರಿ ಸಿಂಹಸ್ಯ ವ್ಯಾಘ್ರಸ್ಯ ಚ ತತಃ ಪರಂ ॥ ೩೫ ॥

---

೩೨. ಬಳಿಕ ಜೋಯಿಸರನ್ನೂ ಸಹ ಮಧುಪರ್ಕಾದಿಗಳಿಂದ ಶಾಸ್ತ್ರೋಕ್ತವಾಗಿ ಪೂಜಿಸಬೇಕು. ಆ ಬಳಿಕ ಧರ್ಮಜ್ಞನಾದ ಪುರೋಹಿತನು ಮಹಾರಾಜನಿಗೆ ಮಕುಟ ಬಂಧನವನ್ನೂ ಪಟ್ಟಬಂಧನವನ್ನೂ ಮಾಡಬೇಕು.

೩೩-೩೪. ಈರೀತಿ ಮುಕುಟಪಟ್ಟಬಂಧನವಾದ ಬಳಿಕ, ನಾನು ಹಿಂದೆ ಹೇಳಿರುವ ಲಕ್ಷಣವುಳ್ಳ ಪರಮಶ್ರೇಷ್ಠವಾದ ಸಿಂಹಾಸನದ ಮೇಲೆ ಹಾಸಿದ ಪಂಚ ಚರ್ಮೋತ್ತರಚ್ಛದದ ಮೇಲೆ ಮಹಾರಾಜನನ್ನು ಕುಳ್ಳಿರಿಸಬೇಕು. ಸಿಂಹಾಸನದ ಮೇಲೆ ರಾಜನು ಕುಳಿತುಕೊಳ್ಳುವ ಸಮಯದಲ್ಲಿ ಪುರೋಹಿತನು

ಧ್ರುವಾದ್ಯೌಧ್ರುರ್ವಾಪೃಥಿವೀಧ್ರುವಾಸಃ ಪರ್ವತಾ ಇಮೇ ।
ಧ್ರುವಂ ವಿಶ್ವಮಿದಂಜಗತ್ ಧ್ರುವೋರಾಜಾವಿಶಾಮಯಂ ॥ ೧೧ ॥

ಧ್ರುವಂತೇರಾಜಾವರುಣೋ ಧ್ರುವಂದೇವೋಬೃಹಸ್ಪತಿಃ ।
ಧ್ರುವಂತಇಂದ್ರಶ್ಚಾಗ್ನಿಶ್ಚ ರಾಷ್ಟ್ರಂಧಾರಯತಾಂಧ್ರುವಂ ॥ ೨೧ ॥

ಎಂಬ ಮಂತ್ರವನ್ನು ಹೇಳಿ ಮಹಾರಾಜನನ್ನು ಕುಳ್ಳಿರಿಸಬೇಕು.

೩೫. ಪಂಚಚರ್ಮೋತ್ತರಚ್ಛದದ ಅರ್ಥವನ್ನಿಲ್ಲಿ ವಿವರಿಸಲಾಗುವುದು ;— ಐದು ಚರ್ಮಗಳೆಂದರೆ ತೋಳ, ಬೆಕ್ಕು, ಆನೆ, ಸಿಂಹ, ಹುಲಿ ಈ ಐದು ಮೃಗ ಚರ್ಮಗಳಿಗೂ ಪಂಚಚರ್ಮಗಳೆಂದು ಹೆಸರು.

ತತ್ರೋಪವಿಷ್ಟಸ್ಯ ತತಃ ಪ್ರತೀಹಾರಃ ಪ್ರದರ್ಶಯೇತ್ ।
ಅಮಾತ್ಯಾಂಶ್ಚ ತಥಾ ಪೌರಾನ್ನೈಗಮಾಂಶ್ಚ ವಣಿಗ್ವರಾನ್ ॥ ೩೬ ॥

ತತಃ ಪ್ರಕೃತಯಶ್ಚಾನ್ಯಾ ಯಥಾವದನುಪೂರ್ವಶಃ ।
ತತೋ ಗೃಹಾವರಾಸ್ತ್ರೇಭತುರಂಗಕನಕೋತ್ತಮೈಃ ॥ ೩೭ ॥

ಗೋಜಾವಿಗ್ರಹದಾನೈಶ್ಚ ಸಾಂವತ್ಸರಪುರೋಹಿತೌ ।
ಪೂಜಯಿತ್ವಾ ತತಃ ಪಶ್ಚಾತ್ಪೂಜಯೇದ್ಬ್ರಾಹ್ಮಣತ್ರಯಂ ॥ ೩೮ ॥

ಅನೇನೈವ ವಿಧಾನೇನ ಯೇನ ರಾಜಾಭಿಷೇಚಿತಃ ।
ತತಸ್ತ್ವಮಾತ್ಯಾನ್ಸಂಪೂಜ್ಯ ಸಾಂವತ್ಸರಪುರೋಧಸಃ ॥ ೩೯ ॥

---

೩೬. ಈರೀತಿ ಸಿಂಹಾಸನದ ಮೇಲೆ ಹಾಸಿದ ಪಂಚಚರ್ಮೋತ್ತರಚ್ಛದದ ಮೇಲೆ ಕುಳಿತುಕೊಂಡ ಮಹಾರಾಜನಿಗೆ ಪ್ರತೀಹಾರಿಯು ಎದುರಾಗಿ-ಬಂದು ನಿಂತು ಅಮಾತ್ಯರ ಮತ್ತು ಪೌರಸದಸ್ಯರ, ವೈದಿಕಮುಖ್ಯರ, ವರ್ತಕಶ್ರೇಷ್ಠರ ನಾಮೋಚ್ಚಾರಣೆ-ಮಾಡಿ ಅವರನ್ನು ಒಬ್ಬೊಬ್ಬರನ್ನಾಗಿ ನಿರ್ದೇಶಿಸಿ ತೋರಿಸಬೇಕು.

೩೭. ಇನ್ನೂ ಊರಿನ ಇತರ ದೊಡ್ಡಮನುಷ್ಯರುಗಳನ್ನೂ ತೋರಿಸಬೇಕು. ಎಲ್ಲ ಜನರ ಪರಿಚಯವಾದ ಬಳಿಕ ಮಹಾರಾಜನು ಗೃಹದಾನ, ವಸ್ತ್ರದಾನ, ಗಜದಾನ, ಅಶ್ವದಾನ, ಕನಕದಾನಾದಿಗಳನ್ನು ಮಾಡಬೇಕು.

೩೮-೩೯. ಇದರಂತೆ ಗೋದಾನ, ಅಜದಾನ, ವಿಗ್ರಹದಾನಾದಿಗಳನ್ನು ಮಾಡಿ, ಪುರೋಹಿತರನ್ನೂ ಜೋಯಿಸರನ್ನೂ ಪೂಜೆಮಾಡಿ, ಅನಂತರ ಅಲ್ಲಿ ಸೇರಿರುವ ಸಮಸ್ತ ಬ್ರಾಹ್ಮಣೋತ್ತಮರನ್ನೂ ಯಥಾವಿಧಿಯಾಗಿ ಪೂಜಿಸಿ, ಅವರೆಲ್ಲರಿಗೂ ಒಬ್ಬರಿಗೂ ತಪ್ಪದಂತೆ ಗೋದಾನ, ವಸ್ತ್ರದಾನ, ತಿಲದಾನ, ರೂಪ್ಯದಾನ, ಅನ್ನದಾನ, ಫಲದಾನ, ಕಾಂಚನದಾನ, ಗೋರಸ (ಹಾಲು-ಮೊಸರು ತುಪ್ಪಗಳ) ದಾನಗಳನ್ನು ಮಾಡಬೇಕು.

**ತತೋ ಬ್ರಾಹ್ಮಣಮುಖ್ಯಾನಾಂ ಪೂಜ್ಯಾ ತು ಸಮಾಚರೇತ್ ।**
**ಗೋವಸ್ತ್ರತಿಲರೂಪ್ಯಾನ್ನ ಫಲಕಾಂಚನಗೋರಸೈಃ ॥ ೪೦ ॥**

**ಮೋದಕಾಕ್ಷತಪುಷ್ಪೈಶ್ಚ ಮಹೀದಾನೈಶ್ಚ ಪಾರ್ಥಿವಃ ।**
**ಮಂಗಲಾಲಂಭನಂ ಕೃತ್ವಾ ಗೃಹೀತ್ವಾ ಸಶರಂ ಧನುಃ ॥ ೪೧ ॥**

**ವಹ್ನಿಂ ಪ್ರದಕ್ಷಿಣೀಕೃತ್ಯ ಪ್ರಣಿಪತ್ಯ ತಥಾ ಗುರುಂ ।**
**ಪೃಷ್ಠತೋ ವೃಷಮಾಲಭ್ಯ ಗಾಂ ಸವತ್ಸಾಂ ಚ ಪಾರ್ಥಿವ ॥ ೪೨ ॥**

**ಪೂಜಯಿತ್ವಾ ಚ ತುರಗಂ ಮಂತ್ರಿತಂ ಚಾಭಿಷೇಚಿತಂ ।**
**ಮಂತ್ರಿತಂ ದಕ್ಷಿಣೇ ಕರ್ಣೇ ಸ್ವಯಂ ವೇದವಿದಾ ತತಃ ॥ ೪೩ ॥**

---

೪೦. ಈ ರೀತಿಯಾಗಿ ಮಹಾರಾಜನು ಈ ವಿಧಿಯನ್ನನುಸರಿಸಿ ಪಟ್ಟಾಭಿಷಿಕ್ತನಾದ ಬಳಿಕ ಅಮಾತ್ಯರುಗಳನ್ನೂ ಜೋಯಿಸಪುರೋಹಿತರನ್ನೂ ತೃಪ್ತಿಕರವಾಗಿ ಪೂಜೆಮಾಡಬೇಕು.

೪೧. ಬಳಿಕ ಮೋದಕ (ಭಕ್ಷ್ಯ) ದಾನ, ಅಕ್ಷತದಾನ, ಪುಷ್ಪದಾನ, ಭೂದಾನಗಳನ್ನು ಮಾಡಿ ಮಂಗಳಾಲಂಭನವನ್ನು ನೆರವೇರಿಸಿದ ಬಳಿಕ ಕೈಯಲ್ಲಿ ಧನುರ್ಬಾಣಗಳನ್ನು ತೆಗೆದುಕೊಳ್ಳಬೇಕು.

೪೨. ಈರೀತಿ ಧನುರ್ಬಾಣಧಾರಿಯಾಗಿ ರಾಜನು ಯಜ್ಞೇಶ್ವರನನ್ನು ಪ್ರದಕ್ಷಿಣೆಮಾಡಿ ನಮಸ್ಕರಿಸಿ, ಬಳಿಕ ಗುರುವಿಗೆ ನಮಸ್ಕಾರಮಾಡಿ ತನ್ನ ಹಿಂದುಗಡೆ ಒಂದು ವೃಷಭವನ್ನೂ, ಸವತ್ಸವಾದ ಧೇನುವನ್ನೂ (ಕರುವಿನಿಂದ ಕೂಡಿದ ಹಸು) ನಿಲ್ಲಿಸಿಕೊಂಡು, ಅದರ ಮುಂದೆ ತಾನೂ ತನ್ನ ಮುಂದೆ ಮಂತ್ರಿತವಾದ ಪಟ್ಟದ ಕುದುರೆಯೂ ನಿಂತಿರಲು ;

೪೩. ಆ ಕುದುರೆಯನ್ನು ಪೂಜೆಮಾಡಿ ವೇದವಿದನಾದ ಬ್ರಾಹ್ಮಣನು, ಆ ಕುದುರೆಯ ಬಲದಕಿವಿಯಲ್ಲಿ ವೇದಮಂತ್ರಗಳನ್ನು ಹೇಳಿಯಾದಮೇಲೆ.

**ಆರುಹ್ಯ ರಾಜಮಾರ್ಗೇಣ ಸ್ವಪುರಂತಂ ಪರಿಭ್ರಮೇತ್ ।**
**ಮುಖ್ಯಾಮಾತ್ಯೈಶ್ಚ ಸಾಮನ್ತೈಃ ಸಾಂವತ್ಸರಪುರೋಹಿತೈಃ ॥ ೪೪ ॥**

**ಸಹಿತಃ ಕುಂಜರಾರೂಢೈರಭಿಗಚ್ಛೇಚ್ಚ ದೇವತಾಃ ।**
**ತಾಸಾಂ ಸಂಪೂಜನಂ ಕೃತ್ವಾ ನಗರೇ ಯಾ ನಿವೇಶಿತಾಃ ॥ ೪೫ ॥**

**ಪ್ರವಿಶೇತ ಗೃಹಂ ರಾಜಾ ಪ್ರಹೃಷ್ಟನರವಾಹನಃ ।**
**ದಾನಮಾನಾದಿ ಸತ್ಕಾರೈ ರ್ಗೃಹ್ಣೀಯಾತ್ಪ್ರಕೃತೀಸ್ತತಃ ॥ ೪೬ ॥**

---

೪೪. ಆ ಕುದುರೆಯ ಮೇಲೆ ಹತ್ತಿ ರಾಜಮಾರ್ಗದಲ್ಲಿ ಪ್ರದಕ್ಷಿಣಾಕಾರವಾಗಿ ಸುತ್ತಿಕೊಂಡು (ಮೆರವಣಿಗೆಯಿಂದ) ಬರಬೇಕು. ಮೆರವಣಿಗೆಯ ಜತೆಯಲ್ಲಿ ಅಮಾತ್ಯರೂ, ಸಾಂವತ್ಸರ ಪುರೋಹಿತರೂ, ಸಾಮಂತನರಪತಿಗಳೂ ಬರಬೇಕು.

೪೫. ಸಾಮಂತರಾಜರೆಲ್ಲರೂ ವರಸೆಯಾಗಿ ಗಜಾರೂಢರಾಗಿ ಹೊರಡಬೇಕು. ಮೆರವಣಿಗೆ ಬರುತ್ತಿದ್ದಾಗ ದಾರಿಯಲ್ಲಿ ಸಿಕ್ಕುವ ಸಕಲದೇವಸ್ಥಾನಗಳ ಬಳಿಯಲ್ಲೂ ಇಳಿದು, ದೇವಸ್ಥಾನದೊಳಕ್ಕೆ ಹೋಗಿ, ಆ ದೇವರುಗಳಿಗೆಲ್ಲಾ ಮಂಗಳಾರತಿ ಮಾಡಿಸಿ, ಪೂಜಾನಂತರ ದೇವರಪ್ರಸಾದವನ್ನು ಸ್ವೀಕರಿಸಬೇಕು. ಈರೀತಿ ಊರಲ್ಲಿರುವ ಎಲ್ಲ ದೇವಾಲಯಗಳಿಗೂ ಹೋಗಿ ಪೂಜೆಮಾಡಬೇಕು.

೪೬. ಮೆರವಣಿಗೆ ಬಂದು ಅರಮನೆಬಾಗಿಲಿಗೆ ತಲಪಿದೊಡನೆಯೇ ಕುದುರೆಯಿಂದ ಕೆಳಕ್ಕಿಳಿದು ನರವಾಹನನಾಗಿ ಅರಮನೆಯೊಳಕ್ಕೆ ಪ್ರವೇಶಿಸಬೇಕು. ತನ್ನ ಜತೆಯಲ್ಲಿ ಬಂದಿದ್ದವರಿಗೆಲ್ಲರಿಗೂ ದಾನಮಾನಾದಿ ಸತ್ಕಾರಗಳನ್ನು ಮಾಡಿ, ಅವರನ್ನು ಮನೆಗಳಿಗೆ ಕಳುಹಿಸಿಕೊಡಬೇಕು.

**ಸಂಪೂಜಿತಾಸ್ತಾಸ್ತು ವಿಸರ್ಜಯಿತ್ವಾ**
**ಗೃಹೇ ಸ್ವಕೇ ಸ್ಯಾನ್ಮುದಿತೋ ಮಹಾತ್ಮಾ**
**ವಿಧಾನಮೇತತ್ಸಮವಾಪ್ಯ ರಾಜಾ**
**ಕೃತ್ಸ್ನಾಂ ಸಪೃಥ್ವೀಂ ವಶಗಾಂ ಹಿ ಕುರ್ಯಾತ್ ॥ ೪೭ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಜ್ಯಾಭಿಷೇಕವಿಧಿರ್ನಾಮ ಏಕವಿಂಶತಿತಮೋಽಧ್ಯಾಯಃ**

---

೪೭. ಅವರೆಲ್ಲರೂ ಮನೆಗಳಿಗೆ ಹೊರಟುಹೋದ ಬಳಿಕ ಸಂತೋಷಚಿತ್ತನಾಗಿ ತನ್ನ ಅರಮನೆಯಲ್ಲಿ ಆಯಾಕಾಲೀನಕೃತ್ಯಗಳನ್ನು ಮಾಡುತ್ತಾ ಶಾಂತಾತ್ಮನಾಗಿರಬೇಕು. ಎಲೈ ಪರಶುರಾಮನೆ! ಕೇಳು. ಯಾವ ಮಹಾರಾಜನು ಈ ವಿಧಾನದಿಂದ ನಡೆದುಕೊಳ್ಳುತ್ತಾನೆಯೋ, ಅಂತಹ ರಾಜನು ಸಕಲವಾದೀ ಭೂಲೋಕವನ್ನೂ ತನ್ನ ಅಧೀನವಾಗಿ ಮಾಡಿಕೊಳ್ಳಲು ಶಕ್ತನಾಗುವನು.

ಇಂತೆಂಬಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ರಾಜ್ಯಾಭಿಷೇಕವಿಧಿಯೆಂಬ ಹೆಸರಿನ ಇಪ್ಪತ್ತೊಂದನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ದ್ವಾವಿಂಶತಿತಮೋಽಧ್ಯಾಯಃ

---

**ರಾಮ ಉವಾಚ**

**ಮಂತ್ರೇಣ ಯೇನ ಧರ್ಮಜ್ಞ ಕುರ್ಯಾದ್ರಾಜ್ಞೋಽಭಿಷೇಚನಂ ।**
**ತಮಹಂ ಶ್ರೋತುಮಿಚ್ಛಾಮಿ ತ್ವತ್ತೋ ವರುಣನಂದನ ॥ ೧ ॥**

**ಪುಷ್ಕರ ಉವಾಚ**

**ಶೃಣುಷ್ವಾವಹಿತೋ ಮಂತ್ರಂ ರಾಮ ಕಲ್ಮಷನಾಶನಂ ।**
**ಯೇನಾಭಿಷಿಕ್ತೋ ನೃಪತಿಶ್ಚಿರಂ ಯಶಸಿ ತಿಷ್ಠತಿ ॥ ೨ ॥**

---

## ಇಪ್ಪತ್ತೆರಡನೆಯ ಅಧ್ಯಾಯವು.

೧. ಪುಷ್ಕರನನ್ನು ಕುರಿತು ಪುನಃ ಪರಶುರಾಮನು ಪ್ರಶ್ನೆಮಾಡುತ್ತಾನೆ.— ಅಯ್ಯಾ! ಪುಷ್ಕರನೇ! ಯಾವ ಯಾವ ಮಂತ್ರಗಳಿಂದ ಮಹಾರಾಜನಿಗೆ ಅಭಿಷೇಕ ಮಾಡಬೇಕೋ ಅವುಗಳನ್ನೆಲ್ಲಾ ನಿನ್ನ ಮುಖದಿಂದ ಕೇಳಬೇಕೆಂದು ಅಪೇಕ್ಷೆಪಡುತ್ತೇನೆ. ಅದಕ್ಕೆ ಪುಷ್ಕರನು ಉತ್ತರಹೇಳುತ್ತಾನೆ :—

೨. ಎಲೈ ಪರಶುರಾಮನೇ! ಕೇಳು, ಯಾವ ಯಾವ ಮಂತ್ರಗಳಿಂದ ಮಹಾರಾಜನು ಅಭಿಷೇಕಮಾಡಲ್ಪಡುವನೋ ಆ ಸಕಲ ಮಂತ್ರಗಳೂ ಪಾಪಪರಿಹಾರಕವಾದುವೆಂದು ತಿಳಿದು ಅವುಗಳನ್ನು ಸಾವಧಾನವಾದ ಮನಸ್ಸಿನಿಂದ ಕೇಳು. ಈ ಮಂತ್ರಗಳಿಂದಭಿಷಿಕ್ತನಾದ ರಾಜನು ಮಹಾಕೀರ್ತಿಶಾಲಿಯಾಗುತ್ತಾನೆ.

ರಾಜ್ಞೋಽಭಿಷೇಕಶಬ್ದಾಂತೇ ದೈವವಿತ್ಕುಶವಾರಿಣಾ ।
ಕುಂಭಾದಭ್ಯುಕ್ಷಣಂ ಕುರ್ಯಾರ್ನ್ಮಂತ್ರಾಂತೇ ಸಕಲಂ ನ್ಯಸೇತ್ ॥ ೩ ॥

ಸುರಾಸ್ತ್ವಾಮಭಿಷಿಂಚಂತು ಬ್ರಹ್ಮವಿಷ್ಣುಮಹೇಶ್ವರಾಃ ।
ವಾಸುದೇವೋ ಜಗನ್ನಾಥಸ್ತಥಾ ಸಂಕರ್ಷಣೋ ವಿಭುಃ ॥ ೪ ॥

ಪ್ರದ್ಯುಮ್ನಶ್ಚಾನಿರುದ್ಧಸ್ತು ಭವಂತು ವಿಜಯಾಯ ತೇ ।
ಆಖಂಡಲೋಽಗ್ನಿರ್ಭಗವಾನ್ಯಮೋ ವೈ ನೈಋತಿಸ್ತಥಾ ॥ ೫ ॥

ವರುಣಃ ಪವನಶ್ಚೈವ ಧನಾಧ್ಯಕ್ಷಸ್ತಥಾ ಶಿವಃ ।
ಬ್ರಹ್ಮಣಾ ಸಹಿತಃ ಶೇಷೋ ದಿಕ್ಪಾಲಾಃ ಪಾಂತು ತೇ ಸದಾ ॥ ೬ ॥

---

೩. ರಾಜನಿಗೆ ಅಭಿಷೇಕಮಾಡುವಾಗ ಅಭಿಷೇಕಶಬ್ದದ ಕೊನೇಭಾಗದಲ್ಲಿ ಜೋಯಿಸನು ದರ್ಭಜಲದಿಂದ (ಕುಶೋದಕ) ಮಹಾರಾಜನಿಗೆ ಪ್ರೋಕ್ಷಣೆ ಮಾಡುತ್ತಲೇ ಇರಬೇಕು. ಮಂತ್ರೋಚ್ಚಾರಣೆಯಾದ ಬಳಿಕ ಆ ದರ್ಭೆಗಳನ್ನು ಕೆಳಗಿಟ್ಟು ಬಿಡಬೇಕು. ಮಂತ್ರಮುಗಿದಾಗಲೆಲ್ಲಾ ಕಲಶಕ್ಕೆ ದರ್ಭಾಗ್ರವನ್ನದ್ದಿ ಆ ಜಲದಿಂದ ಪ್ರೋಕ್ಷಿಸಬೇಕು. ಆ ಮಂತ್ರಗಳನ್ನೂ ಮಂತ್ರಾರ್ಥವನ್ನೂ ಕೇಳು.

೪. ಬ್ರಹ್ಮ, ವಿಷ್ಣು, ಮಹೇಶ್ವರರೇ ಮೊದಲಾದ ಸಕಲ ದೇವತೆಗಳೂ, ನಿನಗೆ ಈಗ ಅಭಿಷೇಕ (ಪಟ್ಟಾಭಿಷೇಕ) ಮಾಡಲಿ. ವಿಭುವಾದ ವಾಸುದೇವನೂ. ಜಗನ್ನಾಥನಾದ ಸಂಕರ್ಷಣನೂ ನಿನಗೆ ಅಭಿಷೇಕಮಾಡಲಿ.

೫. ನೀನು ವಿಜಯಿಯಾಗಿರಬೇಕೆಂದು ಹರಸಿ ಪ್ರದ್ಯುಮ್ನನೂ, ಅನಿರುದ್ಧನೂ, ಇಂದ್ರನೂ, ಅಗ್ನಿಯೂ, ಭಗವಾನ್ ಯಮಧರ್ಮರಾಜನೂ, ನಿಋಋತಿಯೂ, ನಿನಗೆ ಅಭಿಷೇಕಮಾಡಲಿ.

೬. ವರುಣನೂ. ವಾಯುವೂ, ಧನಾಧ್ಯಕ್ಷನಾದ ಕುಬೇರನೂ, ಈಶಾನನೂ, ಬ್ರಹ್ಮನಿಂದೊಡಗೂಡಿದ ಆದಿಶೇಷನೂ. ದಿಕ್ಪಾಲಕರೂ ನಿನ್ನನ್ನು ಸರ್ವದಾ ಸಂರಕ್ಷಿಸಲಿ.

ಭದ್ರೋ ಧರ್ಮೋ ಮನುರ್ದಕ್ಷೋ ರುಚಿಃ ಶ್ರದ್ಧಾ ಚ ಪಾರ್ಥಿವ ।
ಭೃಗುರತ್ರಿರ್ವಸಿಷ್ಠಶ್ಚ ಸನಕಶ್ಚ ಸನಂದನಃ ॥ ೭ ॥

ಸನತ್ಕುಮಾರಶ್ಚ ತಥಾ ಭಗವಾನಪಿ ಚಾಂಗಿರಾಃ ।
ಪುಲಹಶ್ಚ ಪುಲಸ್ತ್ಯಶ್ಚ ಮರೀಚಿಃ ಕಶ್ಯಪಃ ಪ್ರಭುಃ ॥ ೮ ॥

ಏತೇ ತ್ವಾಮಭಿಷಿಂಚಂತು ಪ್ರಜಾಧ್ಯಕ್ಷಾಸ್ಸಮಾಗತಾಃ ।
ಪ್ರಭಾಸುರೋ ಬರ್ಹಿಷದೋ ಹ್ಯಗ್ನಿಷ್ವಾತ್ತಾಸ್ತಥೈವ ಚ ॥ ೯ ॥

ಕ್ರವ್ಯಾದಾಶ್ಚೋಪಹೂತಾಶ್ಚ ಆಜ್ಯಪಾಶ್ಚ ಸುಕಾಲಿನಃ ।
ಏತೇತ್ವಾಮಭಿಷಿಂಚಂತು ಪಿತರಶ್ಚಾಗ್ನಿಭಿಸ್ಸಹ ॥ ೧೦ ॥

ಲಕ್ಷ್ಮೀರ್ದೇವೀ ಸತೀ ಖ್ಯಾತಿರನಸೂಯಾ ತಥಾ ಸ್ಮೃತಿಃ ।
ಸಂಭೂತಿಸ್ಸನ್ನತಿಶ್ಚೈವ ಕ್ಷಮಾ ಪ್ರೀತಿಸ್ತಥೈವ ಚ ॥ ೧೧ ॥

---

೭. ಭದ್ರನೂ, ಧರ್ಮನೂ, ಮನುವೂ, ರಕ್ಷನೂ, ರುಚಿಯೂ, ಶ್ರದ್ಧೆಯೂ, ಭೃಗುವೂ, ಅತ್ರಿಯೂ, ವಸಿಷ್ಠನೂ, ಸನಕನೂ, ಸನಂದನನೂ, ಸನತ್ಕುಮಾರನೂ ನಿನ್ನನ್ನು ಸಲಹಲಿ.

೮. ಭಗವಾನ್ ಆಂಗೀರಸರೂ, ಪುಲಹನೂ, ಪುಲಸ್ತ್ಯನೂ, ಮರೀಚಿಯೂ, ಕಶ್ಯಪನೂ, ಭೃಗುವೂ ನಿನ್ನನ್ನು ಕಾಪಾಡಲಿ.

೯. ಈಗ ನಾನು ಹೇಳಿದ ಪ್ರಜಾಧ್ಯಕ್ಷರಾದ ಸಕಲ ದೇವತೆಗಳೂ, ಸಕಲ ಮುನಿಗಳೂ ಇಲ್ಲಿಗೆ ಬಂದು ನಿನ್ನನ್ನು ಹರಸಲಿ.

೧೦. ಪ್ರಭಾಸುರ, ಬರ್ಹಿಷದ, ಅಗ್ನಿಷ್ವಾತ್ತರೇ ಮೊದಲಾದ ಪಿತೃದೇವತೆಗಳೂ; ಕ್ರವ್ಯಾದ, ಉಪಹೂತ, ಆಜ್ಯಪ, ಸುಕಾಲಿ :—ನಾಮಕರಾದ ಸಕಲ ಪಿತೃದೇವತೆಗಳೂ ಸಹ ತಮ್ಮ ತಮ್ಮ ಅಗ್ನಿಗಳೊಡನೆ ಕೂಡಿ ಇಲ್ಲಿಗೆ ಬಂದು ನಿನ್ನನ್ನಭಿಷೇಕಮಾಡಿ ಹರಸಲಿ.

ಸ್ವಾಹಾ ಸ್ವಧಾ ಚ ತ್ವಾಂರಾಜನ್ನಭಿಷಿಂಚಂತು ಮಾತರಃ ।
ಕೀರ್ತಿರ್ಲಕ್ಷ್ಮೀರ್ಧೃತಿರ್ಮೇಧಾ ಪುಷ್ಟಿಃ ಶ್ರದ್ಧಾ ಕ್ರಿಯಾ ತಥಾ ॥ ೧೨ ॥

ಬುದ್ಧಿರ್ಲಜ್ಜಾ ವಪುಃ ಶಾನ್ತಿಸ್ತುಷ್ಟಿಃ ಸಿದ್ಧಿಶ್ಚ ಪಾರ್ಥಿವ ।
ಏತಾಸ್ತ್ವಾಮಭಿಷಿಷಿಂಚಂತು ಧರ್ಮಪತ್ನ್ಯಃ ಸಮಾಗತಾಃ ॥ ೧೩ ॥

ಅರುಂಧತೀ ವಸುರ್ಜಾಮಿ ಲಂಬಾಭಾನುರ್ಮರುತ್ವತೀ ।
ಸಂಕಲ್ಪಾ ಚ ಮುಹೂರ್ತಾ ಚ ಸಾಧ್ಯಾ ವಿಶ್ವಾಸ್ತಥೈವ ಚ ॥ ೧೪ ॥

ಧರ್ಮಪತ್ನ್ಯಸ್ತಥಾಽನ್ಯಾಸ್ತ್ವಾಮಭಿಷಿಂಚಂತು ಪಾರ್ಥಿವ ।
ಅದಿತಿಶ್ಚ ದಿತಿಸ್ತಾಮ್ರಾ ಹ್ಯರಿಷ್ಟಾ ಸುರಸಾ ಮುನಿಃ ॥ ೧೫ ॥

ಕದ್ರೂಃ ಕ್ರೋಧವಶಾ ಪ್ರಾಧಾ ವಿನತಾ ಸುರಭಿಸ್ತ್ರಿಭಿಃ ।
ಏತಾಸ್ತ್ವಾಮಭಿಷಿಂಚಂತು ಕಶ್ಯಪಸ್ಯ ಪ್ರಿಯಾಃ ಸ್ತ್ರಿಯಃ ॥ ೧೬ ॥

---

೬. ಮಹಾಕಾಳಿ, ಮಹಾಲಕ್ಷ್ಮಿ, ಮಹಾಸರಸ್ವತೀ ನಾಮಕರಾದ ಶಕ್ತಿತ್ರಯ, ದೇವತೆಗಳೂ ; ಖ್ಯಾತಿ, ಅನಸೂಯಾ, ಧೃತಿ, ಸ್ಮೃತಿ, ಸಂಭೂತಿ, ಸನ್ನತಿ, ಕ್ಷಮಾ ಪ್ರೀತಿಯರೆಂಬ ದೇವಿಯರೂ ನಿನ್ನನ್ನು ಸಲಹಲಿ.

೧೨. ಸ್ವಾಹಾದೇವಿಯೂ, ಸ್ವಧಾದೇವಿಯೂ ನಿನ್ನನ್ನು ಸಂರಕ್ಷಿಸಲಿ. ಈಗ ನಾನು ಮುಂದೆಹೇಳುವ ಮಾತೃದೇವತೆಯರು ನಿನ್ನನ್ನು ಕಾಪಾಡಲಿ. ಅವರ ಹೆಸರನ್ನು ಅನುಕ್ರಮವಾಗಿ ಹೇಳಿಕೊಂಡು ಹೋಗುತ್ತೇನೆ.

೧೩-೧೬. ಕೀರ್ತಿ, ಲಕ್ಷ್ಮಿ, ಧೃತಿ, ಮೇಧಾ, ಪುಷ್ಟಿ, ಶ್ರದ್ಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ತುಷ್ಟಿ, ಸಿದ್ಧಿ ; ಇವರೆಲ್ಲರೂ ಧರ್ಮರಾಜನ ಪತ್ನಿಯರು. ಇವರೆಲ್ಲರೂ ಇಲ್ಲಿಗೆ ಬಂದು ನಿನ್ನನ್ನಭಿಷೇಕಮಾಡಿ ಹರಸಲಿ. ಮತ್ತು ಅರುಂಧತೀ -ವಸು- ಜಾಮೀ- ಲಂಬಾ-ಭಾನು-ಮರುದ್ವತೀ-ಸಂಕಲ್ಪಾ-ಮುಹೂರ್ತಾ-ಸಾಧ್ಯಾ-ವಿಶ್ವಾ, ಇವರೂ ಕೂಡ ಧರ್ಮರಾಯನ ಪತ್ನಿಯರೂ ಲೋಕಮಾತೃಕೆಯರೂ ಆಗಿದಾರೆ· ಇವರೆಲ್ಲರೂ ನಿನ್ನನ್ನು ಅಭಿಷೇಕಮಾಡಿ ಹರಸಲಯ್ಯಾ! ಮಹಾರಾಜ ! ! ಅದಿತಿ- ದಿತಿ- ತಾಮ್ರಾ- ಅರಿಷ್ಟಾ- ಸುರಸಾ-ಮುನಿ-ಕದ್ರೂ-ಕ್ರೋಧವಶಾ-ಪ್ರಾಧಾ-ವಿನತಾ-ಸುರಭಿ-ತ್ರಿಭಿ ಇವರೆಲ್ಲರೂ ಕಶ್ಯಪಮಹರ್ಷಿಯ ಪ್ರಾಣಕಾಂತೆಯರು. ಇವರೆಲ್ಲರೂ ನಿನಗೆ ಪಟ್ಟಾಭಿಷೇಕಮಾಡಲಿ.

ಪತ್ನೀ ತೇ ಬಹುಪುತ್ರಸ್ಯ ಸುಪ್ರಭಾ ಯಾ ಚ ಭಾಮಿನೀ ।
ಸಮಾಯಾತ್ವಭಿಷೇಕಾಯ ವಿಜಯಾಯ ಚ ಪಾರ್ಥಿವ ॥ ೧೭ ॥

ಕೃಶಾಶ್ವಪತ್ನೀ ಚ ತಥಾ ಸುಪ್ರಭಾ ಚ ಜಯಾತಥಾ ।
ಅಸ್ತ್ರಗ್ರಾಮಸ್ತಯೋಃ ಪುತ್ರೋ ವಿಜಯಂ ವಿದಧಾತು ತೇ ॥ ೧೮ ॥

ಮನೋರಮಾ ಭಾನುಮತೀ ವಿಶಾಲಾ ಯಾ ಚ ಬಾಹುದಾ ।
ಅರಿಷ್ಟನೇಮೀ ಪತ್ನ್ಯಸ್ತ್ವಾಮಭಿಷಿಂಚಂತು ಪಾರ್ಥಿವ ॥ ೧೯ ॥

ಕೃತ್ತಿಕಾ ರೋಹಿಣೀ ದೇವೀ ಇಲ್ವಲಾ ಬಾಹುರೇವ ಚ ।
ಪುನರ್ವಸುಶ್ಚ ತಿಷ್ಯಶ್ಚ ತಥಾಽಶ್ಲೇಷಾ ಚ ಪಾರ್ಥಿವ ॥ ೨೦ ॥

---

೧೭. ಬಹುಪುತ್ರನೆಂಬುವನ ಪತ್ನಿಯಾದ ಸುಪ್ರಭಾದೇವಿಯೆಂಬುವಳಾವಳುಂಟೋ ಆಕೆಯು ಈ ಪಟ್ಟಾಭಿಷೇಕಸಮಯದಲ್ಲಿ ಇಲ್ಲಿಗೆ ಬಂದು ನಿನಗೆ ವಿಜಯವಾಗಲೆಂದು ಹರಕೆಮಾಡಿ ಹೋಗಲಿ.

೧೮. ಕುಶಾಶ್ವನ ಪತ್ನಿಯರಾದ ಸುಪ್ರಭಾ, ಜಯಾ ಎಂಬುವರಿಬ್ಬರೂ ಅವರ ಮಗನಾದ ಅಸ್ತ್ರಗ್ರಾಮನೆಂಬ ಮಹಾಶಯನೂ ಇಲ್ಲಿಗೆ ಬಂದು ನಿನಗೆ ವಿಜಯವನ್ನುಂಟುಮಾಡಿ ಹೋಗಲಿ.

೧೯. ಮನೋರಮೆಯೂ- ಭಾನುಮತಿಯೂ- ವಿಶಾಲಾ- ಬಾಹುದಾ- ಅರಿಷ್ಟನೇಮಿಯರೂ ಸಹ ಈಗಿಲ್ಲಿಗೆ ಬಂದು ನಿನಗೆ ಅಭಿಷೇಕಮಾಡಿ ಬಳಿಕ ತಮ್ಮ ಸ್ಥಳಕ್ಕೆ ಪ್ರಯಾಣಬೆಳೆಸಲಯ್ಯಾ ! ಮಹಾರಾಜ ! !

೨೦. ಕೃತ್ತಿಕೆ- ರೋಹಿಣಿ- ಮೃಗಶಿರೆ- ಆರ್ದ್ರೆ. ಪುನರ್ವಸು-ಪುಷ್ಯ- ಆಶ್ಲೇಷೆಯರೂ,

**ಮಘಾ ಚ ಫಾಲ್ಗುನೀ ಪೂರ್ವಾ ತಥೈವೋತ್ತರಫಾಲ್ಗುನೀ ।**
**ಹಸ್ತಾಶ್ಚಿತ್ರಾ ತಥಾ ಸ್ವಾತಿರ್ವಿಶಾಖಾ ಚ ನರಾಧಿಪ ॥ ೨೧ ॥**

**ಅನೂರಾಧಾ ತಥಾ ಜ್ಯೇಷ್ಠಾ ಮೂಲಂ ಚ ವಸುಧಾಧಿಪ ।**
**ಆಷಾಢಾ ಚ ತಥಾ ಪೂರ್ವಾ ತಥೈವ ನೃಪ ಚೋತ್ತರಾ ॥ ೨೨ ॥**

**ಅಭಿಜಿಚ್ಚ ತಥಾಶ್ವತ್ಥೋ ಧನಿಷ್ಠಾ ಚ ನರಾಧಿಪ ।**
**ತಥಾ ಶತಭಿಷಕ್ಚೈವ ಪೂರ್ವಾಭಾದ್ರಪದಾ ಚ ಯಾ ॥ ೨೩ ॥**

**ಉತ್ತರಾ ರೇವತೀ ರಾಜನ್ನಶ್ವಿನೀ ಭರಣೀ ತಥಾ ।**
**ಏತಾಸ್ತ್ವಾಮಭಿಷಿಂಚಂತು ಸೋಮಪತ್ನ್ಯಃ ಸಮಾಗತಾಃ ॥ ೨೪ ॥**

**ಮೃಗೀ ಚ ಮೃಗಮಂದಾ ಚ ಶ್ವೇತಾ ಭದ್ರಾಸನಾ ಹರಿಃ ।**
**ಭೂತಾ ಚ ಕಪಿಶಾ ದಂಷ್ಟ್ರಾ ಸುರಸಾ ಸರಮಾ ತಥಾ ॥ ೨೫ ॥**

**ಏತಾಃ ಪುಲಹಪತ್ನ್ಯಸ್ತ್ವಾಮಭಿಷಿಂಚಂತು ಪಾರ್ಥಿವ ।**
**ಶ್ಯೇನೀ ಭಾಸೀ ತಥಾ ಕ್ರೌಂಚೀ ಧೃತರಾಷ್ಟ್ರೀ ಶುಕೀ ತಥಾ ॥ ೨೬ ॥**

**ಪತ್ನ್ಯಸ್ತ್ವಾಮಭಿಷಿಂಚಂತು ಅರುಣಸ್ಯಾರ್ಕಸಾರಥೇಃ ।**
**ಆಯತಿರ್ನಿಯತಿಶ್ಚೈವ ರಾತ್ರಿರ್ನಿದ್ರಾ ತಥೈವ ಚ ॥ ೨೭ ॥**

---

೨೧-೨೪. ಮಖೆ-ಪುಬ್ಬೆ- ಉತ್ತರೆ- ಹಸ್ತೆ-ಚಿತ್ತೆ-ಸ್ವಾತಿ-ವಿಶಾಖೆ-ಅನೂರಾಧೆ-ಜ್ಯೇಷ್ಠೆ- ಮೂಲ-ಪೂರ್ವಾಷಾಢಾ-ಉತ್ತರಾಷಾಢ-ಶ್ರವಣ-ಧನಿಷ್ಠೆ- ಶತಭಿಷೆ-ಪೂರ್ವಾಭಾದ್ರಉತ್ತರಾಭಾದ್ರ-ರೇವತಿ-ಅಶ್ವಿನಿ-ಭರಣಿಯೇ ಮುಂತಾದ ಚಂದ್ರನ ಪ್ರಾಣಕಾಂತೆಯರೆಲ್ಲರೂ ಇಲ್ಲಿಗೆ ಬಂದು ನಿನಗೆ ಶುಭಾಕಾಂಕ್ಷೆಯನ್ನು ಮಾಡಿ ಹೋಗಿಬರಲಯ್ಯಾ ! ರಾಜಾಧಿರಾಜ !

೨೫. ಮೃಗೀ-ಮೃಗಮಂದಾ-ಶ್ವೇತಾ-ಭದ್ರಾಸನಾ-ಹರಿ - ಭೂತಾ- ಕಪಿಶಾ - ದಂಷ್ಟ್ರಿ-ಸುರಸಾ-ಸರಮಾನಾಮಕರಾದ ಪುಲಹಬ್ರಹ್ಮನ ಪತ್ನಿಯರೆಲ್ಲರೂ ಇಲ್ಲಿಗೀಗಲೇ ಬಂದು ನಿನ್ನ ತಲೆಯಮೇಲೆ ಅಭಿಷೇಕಜಲವನ್ನು ಸಂಪ್ರೋಕ್ಷಿಸಿ, ಆ ಬಳಿಕ ತಮ್ಮ ಸ್ಥಳಗಳಿಗೆ ತೆರಳಲಿ.

೨೬-೨೭. ಶ್ಯೇನೀ-ಭಾಸೀ-ಕ್ರೌಂಚೀ-ಧೃತರಾಷ್ಟ್ರೀ-ಶುಕೀ ಎಂಬ ಹೆಸರಿನ ಅರುಣದೇವ (ಅರ್ಕಸಾರಥಿಯ) ನ ಪತ್ನಿಯರೂ ; ಮತ್ತು ಆಯತಿ-ನಿಯತಿ-ರಾತ್ರಿ-ನಿದ್ರಾ ಮೊದಲಾದ ಲೋಕಸ್ಥಿತಿಗೆ ಕಾರಣರಾದ ಸಕಲ ದೇವತೆಯರೂ ನಿನ್ನ ಮೇಲೆ ಅಭಿಷೇಕಜಲವನ್ನು ಚುಮುಕಿಸಿ ನಿನಗೆ ವಿಜಯವನ್ನುಂಟುಮಾಡಲಿ.

ಏತಾಸ್ತ್ವಾಮಭಿಷಿಂಚಂತು ಲೋಕಸಂಸ್ಥಾನಹೇತವಃ ।
ಉಮಾ ಮೇನಾ ಶಚೀ ಚೈವ ಧೂಮ್ರೋರ್ಣಾ ನಿರ್ವೃತಿಸ್ತಥಾ　॥ ೨೮ ॥

ಗೌರೀ ಶಿವಾ ಚ ಸಿದ್ಧಿಶ್ಚ ವೇಲಾ ಚೈವಾಥ ನಡ್ವಲಾ ।
ಅಸಿಕ್ನೀ ಚ ತಥಾ ಜ್ಯೋತ್ಸ್ನಾ ಯಾ ಚ ದೇವೀ ವನಸ್ಪತೇಃ　॥ ೨೯ ॥

ಏತಾಸ್ತ್ವಾಮಭಿಷಿಂಚಂತು ದೇವಪತ್ನ್ಯಃ ಸಮಾಗತಾಃ ।
ಮಹಾಕಲ್ಪಶ್ಚ ಕಲ್ಪಶ್ಚ ಮನ್ವಂತರಯುಗಾನಿ ಚ　॥ ೩೦ ॥

ಸಂವತ್ಸರಾಣಿ ಸರ್ವಾಣಿ ತಥಾ ಚೈವಾಯನದ್ವಯಮ್ ।
ಋತವಶ್ಚ ತಥಾ ಮಾಸಾಃ ಪಕ್ಷಾ ರಾತ್ರ್ಯಹನೀ ತಥಾ　॥ ೩೧ ॥

ಸಂಧ್ಯಾಶ್ಚ ತಿಥಯಶ್ಚೈವ ಮುಹೂರ್ತಾಃ ಕರಣಾನಿ ಚ ।
ಏತೇ ತ್ವಾಮಭಿಷಿಂಚಂತು ಕಾಲಸ್ಯಾವಯವಾಃ ಶುಭಾಃ　॥ ೩೨ ॥

ಆದಿತ್ಯಶ್ಚಂದ್ರಮಾ ಭೌಮೋ ಬುಧೋ ಜೀವಃ ಸಿತಾರ್ಕಜೌ ।
ಗ್ರಹಾಸ್ತ್ವಾಮಭಿಷಿಂಚಂತು ರಾಹುಕೇತೂ ಚ ಪಾರ್ಥಿವ　॥ ೩೩ ॥

ಸ್ವಾಯಂಭುವೋ ಮನುಃ ಪೂರ್ವಮನುಃ ಸ್ವಾರೋಚಿಷಸ್ತಥಾ ।
ಔತ್ತಮಸ್ತಾಮಸಶ್ಚೈವ ರೈವತಶ್ಚಾಕ್ಷುಷಸ್ತಥಾ ।　॥ ೩೪ ॥

---

೨೮-೨೯. ಉಮಾ-ಮೇನಾ-ಶಚೀ-ಧೂಮ್ರೋರ್ಣಾ-ನಿರ್ವೃತಿ-ಗೌರಿ- ಶಿವಾ-ಸಿದ್ಧಿ-ವೇಲಾ-ನಡ್ವಲಾ-ಅಸಿಕ್ನೀ ದೇವಿಯರೂ ; ಜ್ಯೋತ್ಸ್ನಾ ಮುಂತಾದ ವನಸ್ಪತಿ-ಪತ್ನಿಯರಾದ ದೇವಿಯರೆಲ್ಲರೂ ನಿನಗೆ ಹರಸಿ ಹೋಗಲಿ.

೩೦-೩೫. ಮೇಲೆಹೇಳಿದ ಸಮಸ್ತದೇವಪತ್ನಿಯರೂ ಈ ಪಟ್ಟಾಭಿಷೇಕ ಸಮಯದಲ್ಲಿ ಇಲ್ಲಿಗೆ ಬಂದು ಬಂದು ನಿನ್ನನ್ನು ಆಶೀರ್ವದಿಸಿ ಹೋಗಲಿ. ಇನ್ನು ಕಾಲಾವಯವಗಳಾದ ಮಹಾಕಲ್ಪ-ಕಲ್ಪ-ಮನ್ವಂತರ-ಯುಗ-ಸಕಲ ಸಂವತ್ಸರಗಳೂ-ಅಯನದ್ವಯಗಳೂ-ಋತುಗಳೂ-ಮಾಸಗಳೂ-ಪಕ್ಷದ್ವಯಗಳೂ-ಅಹೋರಾತ್ರಿಗಳೂ-ಸಂಧ್ಯಾತ್ರಯವೂ-ತಿಥಿಗಳೂ-ಮುಹೂರ್ತಗಳೂ-ಕರಣಗಳೂ ಇವೇ ಮುಂತಾದ ಸಕಲ ಕಾಲಾವಯವಗಳೂ ನಿನ್ನನ್ನು ಸಂರಕ್ಷಿಸಲಿ. ಸೂರ್ಯನೂ-ಚಂದ್ರನೂ-ಅಂಗಾರಕನೂ - ಬುಧನೂ-ಗುರುವೂ - ಶುಕ್ರನೂ - ಶನೈಶ್ಚರನೂ - ರಾಹುವೂ - ಕೇತುವೇ

ವೈವಸ್ವತೋ ಯಥಾಕರ್ಣೋ ದಕ್ಷೋ ಬ್ರಹ್ಮಸುತಾವುಭೌ ।
ಧರ್ಮಪುತ್ರೋ ರುದ್ರಪುತ್ರೋ ರೋಚ್ಯೋ ಭೌತ್ಯಶ್ಚ ಯೋ ಮನುಃ ॥ ೩೫ ॥

ಏತೇ ತ್ವಾಮಭಿಷಿಂಚಂತು ಮನವಶ್ಚ ಚತುರ್ದಶ ।
ವಿಶ್ವಭುಕ್ಚ ವಿಪಶ್ಚಿಚ್ಚ ಸುಶಾನ್ತಿಶ್ಚ ಶಿಖೀ ವಿಭುಃ ॥ ೩೬ ॥

ಮನೋಜವಸ್ತಥೋ ಜಸ್ವೀ ಬಹಿರದ್ಭುತಶಾಂತಿಕೌ ।
ವೃಷಶ್ಚ ಋತಧಾಮಾ ಚ ದಿವಸ್ಪೃಚ್ಛುಚಿರೇವ ಚ ॥ ೩೭ ॥

ಏತೇ ತ್ವಾಮಭಿಷಿಂಚಂತು ದೇವನಾಥಾಶ್ಚತುರ್ದಶ ।
ರೈವತಶ್ಚ ಕುಮಾರಶ್ಚ ತಥಾ ವರ್ಚಾವಿನಾಯಕಃ ॥ ೩೮ ॥

ವೀರಭದ್ರಶ್ಚನಂದೀ ಚ ವಿಶ್ವಕರ್ಮಾ ಮನೋಜವಃ ।
ಏತೇ ತ್ವಾಮಭಿಷಿಂಚಂತು ಸುರಮುಖ್ಯಾಃ ಸಮಾಗತಾಃ ॥ ೩೯ ॥

ಆತ್ಮಾ ಚಾಯುರ್ಮನೋದಕ್ಷೋ ಹ್ಯಾಪಃ ಪ್ರಾಣಸ್ತಥೈವಚ ।
ಹವಿಷ್ಮಾಂಶ್ಚ ಗವಿಷ್ಠಶ್ಚ ಋತಃ ಸತ್ಯಶ್ಚ ಪಾರ್ಥಿವ ॥ ೪೦ ॥

---

ಮುಂತಾದ ನವಗ್ರಹಗಳೂ ಸಹ ಇಲ್ಲಿಗೆ ಬಂದು ನಿನಗೆ ಅಭಿಷೇಕಮಾಡಿ ನಿನಗೆ ಶುಭಸಂತತಿಯನ್ನುಂಟುಮಾಡಲಯ್ಯಾ ! ಮಹಾರಾಜಾ !! ಸ್ವಾಯಂಭುವ-ಸ್ವಾರೋಚಿಷ-ಔತ್ತಮ-ತಾಮಸ-ರೈವತ-ಚಾಕ್ಷುಷ-ವೈವಸ್ವತ-ಯಥಾಕರ್ಣ-ದಕ್ಷ-ಬ್ರಹ್ಮಸುತ-ಧರ್ಮಪುತ್ರ-ರುದ್ರಪುತ್ರ-ರೋಚ್ಯ-ಭೌತ್ಯರೆಂಬ ಹೆಸರಿನ ಹದಿನಾಲ್ಕು ಮಂದಿ ಮನುಗಳೂ ನಿನಗೆ ಅಭಿಷೇಕಮಾಡಿ ನಿನ್ನ ಶುಭತತಿಗೆ ಕಾರಣರಾಗಲಿ.

೩೯-೪೦. ರೈವತನೂ, ಕುಮಾರಸ್ವಾಮಿಯೂ, ವರ್ಚಾವಿನಾಯಕ ಸ್ವಾಮಿಯೂ, ನಂದಿಯೂ, ವಿಶ್ವಕರ್ಮನೂ, ಮನೋಜವನೂ ಇವರೇ ಮುಂತಾದ ದೇವತಾಮುಖ್ಯರೆಲ್ಲರೂ ಬಂದು ನಿನಗೆ ಅಭಿಷೇಕಮಾಡಲಿ. ಮತ್ತು ಆತ್ಮಾ-ಆಯು-ಮನು-ದಕ್ಷ-ಆಪ-ಪ್ರಾಣ-ಹವಿಷ್ಮಂತ-ಗವಿಷ್ಠ-ಋತ-ಸತ್ಯರೆಲ್ಲರೂ ಇಲ್ಲಿಗೆ ಬಂದು ನಿನಗೆ ಅಭಿಷೇಕಮಾಡಲಿ. ಈ ಹತ್ತುಮಂದಿಗೂ ದಶಾಂಗಿರಸರೆಂದು ಹೆಸರು.

ಅಭಿಷಿಂಚಂತು ರಾಜನ್ಸ್ತ್ವಾಂ ದೇವಾ ಹ್ಯಾಂಗಿರಸಾ ದಶ ।
ಕ್ರತುರ್ದಕ್ಷೋ ವಸುಸ್ಸತ್ಯಃ ಕಾಲಃ ಕಾಮೋ ಮುನಿಸ್ತಥಾ　　॥ ೪೧ ॥

ಕುರವಾನ್ಮನುಜಶ್ಚೈವ ರೋಚಮಾನಸ್ತಥೈವ ಚ ।
ಏತೇ ತ್ವಾಮಭಿಷಿಂಚಂತು ವಿಶ್ವೇದೇವಾಸ್ತಥಾ ದಶ　　॥ ೪೨ ॥

ಅಂಗಾರಕಸ್ತಥಾ ಸರ್ಪೋ ನಿಋುತಿಶ್ಚ ತಥಾ ಘಸಃ ।
ಅಜೈಕಪಾದಹಿರ್ಬುಧ್ನ್ಯೋ ಧೂಮಕೇತುಸ್ತಥಾ ದ್ವಿಜಃ　　॥ ೪೩ ॥

ಭರತಶ್ಚ ತಥಾ ಮೃತ್ಯುಃ ಕಾಪಾಲಿರಥ ಕಿಂಕಿಣಿಃ ।
ಏಕಾದಶೈತೇ ರುದ್ರಾಸ್ತ್ವಾಮಭಿಷಿಂಚಂತು ಪಾರ್ಥಿವ　　॥ ೪೪ ॥

ಭುವನೋ ಭಾವನಶ್ಚೈವಸುಜನ್ಯಃ ಸುಜನಸ್ತಥಾ ।
ಕ್ರತುಃ ಸರ್ವಶ್ಚ ಮೂರ್ಧಾ ಚ ತ್ಯಾಜ್ಯಶ್ಚೈವ ಸ್ತುತಸ್ತಥಾ　　॥ ೪೫ ॥

ಪ್ರಸವಶ್ಚಾವ್ಯಯಶ್ಚೈವ ದಕ್ಷಶ್ಚ ಮನುಜಾಧಿಪ ।
ಏತೇತ್ವಾಮಭಿಷಿಂಚಂತು ಭೃಗವೋ ನಾಮದೇವತಾಃ　　॥ ೪೬ ॥

---

೪೧-೪೪. ಕ್ರತು-ದಕ್ಷ-ವಸು-ಸತ್ಯ-ಕಾಲ-ಕಾಮ-ಮುನಿ- ಕುರು - ಮನುಜ-ರೋಚಮಾನರೆಂಬ ಹೆಸರಿನ ಹತ್ತುಮಂದಿ ವಿಶ್ವೇದೇವತೆಗಳೂ ; ಅಂಗಾರಕ-ಸರ್ಪ-ನಿಋುತಿ-ಘಸ-ಅಜೈಕಪಾತ್-ಅಹಿರ್ಬುಧ್ನ್ಯ-ಧೂಮಕೇತು-ದ್ವಿಜ-ಭರತ-ಮೃತ್ಯು-ಕಾಪಾಲಿ-ಕಿಂಕಿಣಿ ಎಂಬ ಹನ್ನೊಂದು-ಹೆಸರಿನ ಏಕಾದಶರುದ್ರರೂ ಸಹ ಈ ಮುಹೂರ್ತದಲ್ಲಿ ಇಲ್ಲಿಗೆ ಬಂದು ನಿನಗೆ ಪಟ್ಟಾಭಿಷೇಕವನ್ನು ಮಾಡಲಿ.

೪೫-೪೬. ಭುವನ- ಭಾವನ- ಸುಜನ್ಯ - ಸುಜನ-ಕ್ರತು- ಸರ್ವ-ಮೂರ್ಧಾ-ತ್ಯಾಜ್ಯ-ಸ್ತುತ-ಪ್ರಸವ-ಅವ್ಯಯ-ದಕ್ಷರೆಂಬ ಹೆಸರಿನ ಭೃಗುದೇವತೆಗಳೆಲ್ಲರೂ ಇಲ್ಲಿಗೆ ಬಂದು ನಿನಗೆ ಅಭಿಷೇಕಮಾಡಲಿ.

ಮನೋ ಮಂತಾಚ ಪ್ರಾಣಶ್ಚ ನರೋಽಪಾನಶ್ಚ ವೀರ್ಯವಾನ್ ।
ವಿನಿರ್ಭಯೋ ನಭಶ್ಚೈವ ಹಂಸೋನಾರಾಯಣಸ್ತಥಾ ॥ ೪೭ ॥

ವಿಭುಶ್ಚಾಪಿ ಪ್ರಭುಶ್ಚಾಪಿ ದೇವಶ್ರೇಷ್ಠಾಃ ಜಗದ್ಧಿತಾಃ ।
ಏತೇತ್ವಾಮಭಿಷಿಂಚಂತು ಸಾಧ್ಯಾದ್ವಾದಶ ಪಾರ್ಥಿವ ॥ ೪೮ ॥

ಧಾತಾ ಮಿತ್ರೋಽರ್ಯಮಾ ಪೂಷಾ ಶಕ್ರೇಶೌ ವರುಣೋ ಭಗಃ
ತ್ವಷ್ಟಾ ವಿವಸ್ವಾನ್ಸವಿತಾ ವಿಷ್ಣುರ್ದ್ವಾದಶಮಸ್ತಥಾ ॥ ೪೯ ॥

ಏತೇ ತ್ವಾಮಭಿಷಿಂಚಂತು ಕಶ್ಯಪಾದಿತಿಸಂಭವಾಃ ।
ಏಕಜ್ಯೋತಿಶ್ಚ ದ್ವಿಜ್ಯೋತಿಸ್ತ್ರಿಚತುರ್ಜ್ಯೋತಿರೇವ ಚ ॥ ೫೦ ॥

ಏಕಶಕ್ರೋ ದ್ವಿಶಕ್ರಶ್ಚ ತ್ರಿಶಕ್ರಶ್ಚ ಮಹಾಬಲಃ ।
ಇಂದ್ರಾಶ್ಚ ಗತ್ವಾ ದೃಶ್ಯಂತೇ ತತಃ ಪ್ರತಿಸಕೃತ್ತಯಾ ॥ ೫೧ ॥

ಮಿತಶ್ಚ ಸಮ್ಮಿತಶ್ಚೈವ ಅಮಿತಶ್ಚ ಮಹಾಬಲಃ ।
ಋತಜಿತ್ಸತ್ಯಜಿಚ್ಚೈವ ಸುಕ್ಷೇಣಃ ಸತ್ಯಜಿತ್ತಥಾ ॥ ೫೨ ॥

---

೪೭-೪೮. ಮನ-ಮಂತಾ-ಪ್ರಾಣ-ನರ-ಅಪಾನ-ವೀರ್ಯವಂತ-ವಿನಿರ್ಭಯ-ನಯ-ಹಂಸ-ನಾರಾಯಣ-ವಿಭು-ಪ್ರಭುಗಳೆಂಬ ಹೆಸರಿನ ಜಗದ್ಧಿತೈಷಿಗಳಾದ ದೇವ ಶ್ರೇಷ್ಠರಾದ ಹನ್ನೆರಡು ಮಂದಿ ಸಾಧ್ಯರೂ ಸಹ ಇಲ್ಲಿಗೆ ಬಂದು ನಿನಗೆ ಅಭಿಷೇಕ ಮಾಡಲಿ.

೪೯. ಧಾತಾ-ಮಿತ್ರ- ಅರ್ಯಮ-ಪೂಷ-ಶಕ್ರೇಶರು- ವರುಣ- ಭಗ- ತ್ವಷ್ಟಾ ವಿವಸ್ವಾನ್-ಸವಿತಾ-ವಿಷ್ಣುಗಳೆಂಬ ಕಶ್ಯಪ-ದಿತಿ ಸಂಭವರಾದ ದ್ವಾದಶಾದಿತ್ಯರೂ ನಿನ್ನ-ಅಭಿಷೇಕವನ್ನು ಮಾಡಲಿ.

೫೦-೫೬. ಏಕಜ್ಯೋತಿ-ದ್ವಿಜ್ಯೋತಿ-ತ್ರಿಜ್ಯೋತಿ-ಚತುರ್ಜ್ಯೋತಿ-ಏಕಶಕ್ರ-ದ್ವಿಶಕ್ರ-ತ್ರಿಶಕ್ರರೂ ;-ಮಿತ-ಸಮ್ಮಿತ-ಅಸಿತ-ಋತಜಿತ್-ಸತ್ಯಜಿತ್ - ಸುಷೇಣ - ಅತಿ ಮಿತ್ರ-ನಮಿತ್ರ-ಪುರುಮಿತ್ರ - ಪುರಾನಿತ-ಋತ - ಋತಧಾತಾ - ವಿಧಾತಾ - ಧಾರಣಾ-ಧ್ರುವ-ವಿಧಾರಣ (ಈತನು ಇಂದ್ರನಿಗೆ ಪರಮಮಿತ್ರನು ಮತ್ತು ಮಹಾತೇಜಸ್ವಿಯು);-ಈದೃಕ್ಷ-ಅದೃಕ್ಷ-ಏಕಾದೃತ್- ಅಮಿತಾಶನ - ಕ್ರೀತನ - ಪ್ರಸದೃಕ್ಷ - ಸರಭ-

ಅತಿಮಿತ್ರೋ ಸಮಿತ್ರಶ್ಚ ಪುರುಮಿತ್ರಃ ಪುರಾನಿತಃ ।
ಋತಶ್ಚ ಋತಧಾತಾ ಚ ವಿಧಾತಾ ಧಾರಣೋ ಧ್ರುವಃ ॥ ೫೩ ॥

ವಿಧಾರಣೋ ಮಹಾತೇಜಾ ವಾಸವಸ್ಯ ಪರಃ ಸಖಾ ।
ಈದೃಕ್ಷಶ್ಚಾಪ್ಯದೃಕ್ಷಶ್ಚ ಏತಾದೃಗಮಿತಾಶನಃ ॥ ೫೪ ॥

ಧಾತುರುಗ್ರೋಽಧ್ವನಿರ್ಭೀಮೋ ಹ್ಯತಿಯುಕ್ತಃ ಕ್ಷಿಪಃ ಸಹಃ ॥ ೫೫ ॥

ದ್ಯುತಿರ್ವಪುರನಾಧೃಷ್ಯೋ ವಾಸಃ ಕಾಮೋ ಜಯೋ ವಿರಾಟ್ ।
ಏತೇ ತ್ವಾಮಭಿಷಿಂಚಂತು ಮರುತಸ್ತೇ ಸಮಾಗತಾಃ ॥ ೫೬ ॥

ದೇವಾ ಏಕೋನಪಂಚಾಶನ್ಮಹಾಬಲಪರಾಕ್ರಮಾಃ ।
ಚಿತ್ರಾಂಗದಶ್ಚಿತ್ರರಥಶ್ಚಿತ್ರಸೇನಶ್ಚ ವೀರ್ಯವಾನ್ ॥ ೫೭ ॥

ಊರ್ಣಾಯುರನಘಶ್ಚೈವ ಉಗ್ರಸೇನಶ್ಚ ವೀರ್ಯವಾನ್ ।
ಧೃತರಾಷ್ಟ್ರಶ್ಚ ಗೋಪಶ್ಚ ಸೂರ್ಯಾವರ್ತಸ್ತಥೈವ ಚ ॥ ೫೮ ॥

ಯುಗಪಸ್ತೃಣಯಃ ಕಾರ್ಷ್ಣಿರ್ನಂದಶ್ಚಿತ್ರಸ್ತಥೈವ ಚ ।
ಕಲಿಃ ಶಾಲಿಃ ಶಿರಾ ರಾಜನ್ಪರ್ಜನ್ಯೋ ನಾರದಸ್ತಥಾ ॥ ೫೯ ॥

ವೃಷಪರ್ವಾ ಚ ಹಂಸಶ್ಚ ತಥಾ ಚೈವ ಹಹಾ ಹುಹೂಃ ।
ವಿಶ್ವಾವಸುಸ್ತುಂಬುರುಶ್ಚ ತಥಾ ಚ ಸುರುಚಿಶ್ಚ ಯಃ ॥ ೬೦ ॥

---

ಧಾತು-ಉಗ್ರ-ಧ್ವನಿ-ಭೀಮ-ಅತಿಯುಕ್ತ-ಕ್ಷಿಪ-ಸಹ-ದ್ಯುತಿ-ವಪು-ಅನಾಧೃಷ್ಯ- ವಾಸ-ಕಾಮ-ಜಯ-ವಿರಾಟ್ ಎಂಬ ಹೆಸರಿನ (೪೯) ಸಕಲ ಮರುದ್ಗಗಳೂ ಸಹ ಇಲ್ಲಿಗೆ ಬಂದು ನಿನಗೆ ಅಭಿಷೇಕಮಾಡಿ ಹರಸಲಿ.

೫೭-೬೦. ಮೇಲೆ ವಿವರಿಸಿದ ನಲವತ್ತೊಂಭತ್ತು ಮಂದಿಯೂ ಮಹಾಬಲ ಪರಾಕ್ರಮಶಾಲಿಗಳಾದ ಮರುದ್ದೇವತೆಗಳೆಂದು ತಿಳಿಯಬೇಕು. ಚಿತ್ರಾಂಗದ-ಚಿತ್ರರಥ-ಚಿತ್ರಸೇನ-ಊರ್ಣಾಯು-ಅನಘ-ಉಗ್ರಸೇನ- ಧೃತರಾಷ್ಟ್ರ- ಗೋಪ- ಸೂರ್ಯಾವರ್ತ-ಯುಗಪ-ತೃಣಯ-ಕಾರ್ಷ್ಣಿ-ನಂದ-ಚಿತ್ರಕಲಿ-ಶಾಲಿ - ಶಿರ - ಪರ್ಜನ್ಯ - ನಾರದ-ವೃಷಪರ್ವ-ಹಂಸ-ಹಾಹಾ-ಹೂಹೂ-ವಿಶ್ವಾವಸು-ತುಂಬರು-ಸುರುಚಿ ಇವರೇ ಮೊದಲಾದ ಸಮಸ್ತಗಂಧರ್ವರೂ ಸಹ ಇಲ್ಲಿಗೆ ಬಂದು ನಿನಗೆ ಅಭಿಷೇಕಮಾಡಿ ಆಶೀರ್ವದಿಸಲಯ್ಯಾ! ಮಹಾರಾಜ !!

ಏತೇ ತ್ವಾಮಭಿಷಿಂಚಂತು ಗಂಧರ್ವಾಃ ಪೃಥಿವೀಪತೇ ।
ಆಹುತ್ಯಸ್ತಾ ಭವತ್ಯಶ್ಚ ವರ್ಗವತ್ಯಸ್ತಥೈವ ಚ ॥ ೬೧ ॥

ಆಯುರ್ವರ್ತ್ಯಸ್ತಥೋರ್ಜಾಶ್ಚ ತಥಾ ನ್ಯೈ ಕುರವಾಃ ಸ್ತವಾಃ ।
ಬಹ್ವಾಯುಶ್ಚಾನ್ಯೃತಾಯುಶ್ಚ ಭುವಶ್ಚೈವ ರುಚಸ್ತಥಾ ॥ ೬೨ ॥

ಭೀರವಃ ಶೋಭಯಂತ್ಯಶ್ಚ ದಿವ್ಯಾ ಯಾಶ್ಚಾಪ್ಸರೋಗಣಾಃ ।
ಏತೇ ತ್ವಾಮಭಿಷಿಂಚಂತು ಸಮಾಗತ್ಯ ಮಹೀಪತೆ ॥ ೬೩ ॥

ಅನವದ್ಯಾ ಸತ್ಯಕಾಮಾ ಚಾನೂನಾ ವರುಣಾ ಪ್ರಿಯಾ ।
ಅನೂಪಾ ಸುಭಗಾ ಚೈವ ಸುಕೇಶಾ ಚ ಮನೋವತೀ ॥ ೬೪ ॥

ಮೇನಕಾ ಸಹಜನ್ಯಾ ಚ ಪರ್ಣಾಶಾ ಪುಂಜಿಕಸ್ಥಲಾ ।
ಕೃತಸ್ಥಲಾ ಘೃತಾಚೀ ಚ ವಿಶ್ವಾಚೀ ಪೂರ್ವಚಿತ್ಯಪಿ ॥ ೬೫ ॥

ಪ್ರಮ್ಲೋಚಾ ಚಾಪ್ಯನುಮ್ಲೋಚಾ ರಂಭಾ ಚೈವೋರ್ವಶೀ ತಥಾ ।
ಪಂಚಚೂಡಾ ಸಾನುಮತೀ ಚಿತ್ರಲೇಖಾ ಚ ಪಾರ್ಥಿವ ॥ ೬೬ ॥

ಮಿಶ್ರಕೇಶೀ ಮರೀಚಿಶ್ಚ ವಿದ್ಯುತ್ಪರ್ಣಾ ತಿಲೋತ್ತಮಾ ।
ಅದ್ರಿಕಾ ಲಕ್ಷ್ಮಣಾ ಕ್ಷೇಮಾ ಅಸಿತಾ ರುಚಿಕಾ ತಥಾ ॥ ೬೭ ॥

---

೬೧-೬೩. ಆಹುತಿ-ಭವತಿ-ವರ್ಗವತಿಯರೆಂಬ ಸಕಲ ಆಯುರಭಿವೃದ್ಧಿಪ್ರದರಾದ ಆಯುರ್ವರ್ತಿಯರೂ; ಹಾಗೂ ಊರ್ಜಾ-ಕುರು-ಸ್ತವ-ಬಹ್ವಾಯು-ಅನ್ಯೃತಾಯು-ಭೂಮಿ-ರುಚ-ಭೀರು-ಶೋಭಯಂತಿಯರೂ ಇವರೇ ಮೊದಲಾದ ಸಕಲ ಅಪ್ಸರೋಗಣಗಳೂ ಇಲ್ಲಿಗೆ ಬಂದು ನಿನ್ನನ್ನು ಅಭಿಷೇಕಮಾಡಿ ಆಶೀರ್ವದಿಸಲಿ.

೬೪-೭೦. ಅನವದ್ಯಾ-ಸತ್ಯಕಾಮಾ-ಅನೂನಾ-ವರುಣಾ-ಪ್ರಿಯಾ-ಅನೂಪಾ-ಸುಭಗಾ-ಸುಕೇಶಾ-ಮನೋವತೀ-ಮೇನಕಾ-ಸಹಜನ್ಯಾ-ಪರ್ಣಾಶಾ-ಪುಂಜಿಕಸ್ಥಳಾ - ಕೃತಸ್ಥಲಾ - ಘೃತಾಚೀ - ವಿಶ್ವಾಚೀ - ಪೂರ್ವಚಿತಿ - ಪ್ರಮ್ಲೋಚಾ - ಅನುಮ್ಲೋಚಾ-ರಂಭಾ-ಊರ್ವಶೀ-ಪಂಚಚೂಡಾ-ಸಾನುಮತೀ-ಚಿತ್ರಲೇಖಾ-ಮಿಶ್ರಕೇಶೀ-ಮರೀಚಿ-ವಿದ್ಯುತ್ಪರ್ಣಾ - ತಿಲೋತ್ತಮಾ - ಅದ್ರಿಕಾ - ಲಕ್ಷ್ಮಣಾ - ಕ್ಷೇಮಾ- ಅಸಿತಾ- ರುಚಿರಾ-ಸುಹೇಮ-ಹೇಮಾ- ಶಾದ್ವಲೀ- ವಸು - ಸುವ್ರತಾ - ಸುಬಾಹು - ಸುಗಂಧಾ -ಸುವಪು -

**ಸುಹೇಮಾ ಚಾಥ ಹೇಮಾ ಚ ಶಾದ್ವಲೀ ಚ ವಪುಸ್ತಥಾ ।**
**ಸುವ್ರತಾ ಚ ಸುಬಾಹುಶ್ಚ ಸುಗಂಧಾ ಸುವಪುಸ್ತಥಾ ॥ ೬೮ ॥**

**ಪುಂಡರೀಕಾ ಸುದಾನಾ ಚಾಸುದಾನಾ ಸುರಸಾ ತಥಾ ।**
**ಹೇಮಾ ಶಾರದ್ವತೀ ಚೈವ ಸೂನೃತಾ ಕಮಲಾಲಯಾ ॥ ೬೯ ॥**

**ಸುಮುಖೀ ಹಂಸಪಾದೀ ಚ ವಾರುಣೀ ರತಿಲಾಲಸಾ ।**
**ಏತಾಸ್ತ್ವಾಮಭಿಷಿಂಚಂತು ರಾಜನ್ನಪ್ಸರಸಃ ಶುಭಾಃ ॥ ೭೦ ॥**

**ಪ್ರಹ್ಲಾದಶ್ಚ ಮಹಾತೇಜಾಸ್ತಥಾ ರಾಜನ್ವಿರೋಚನಃ ।**
**ಬಲಿರ್ಬಾಣಸ್ತಥಾನ್ಯೇ ಚ ದಿತಿಪುತ್ರಾಃ ಸಮಾಗತಾಃ ॥ ೭೧ ॥**

**ಅಭಿಷಿಂಚಂತು ದೈತ್ಯಾಸ್ತ್ವಾಂ ದಿವ್ಯೇನಾಪ್ಯಂಭಸಾ ಸ್ವಯಂ ।**
**ವಿಪ್ರಚಿತ್ತಿಮುಖಾಃ ಸರ್ವೇ ದಾನವಾಸ್ತ್ವಾಂ ಸಮಾಗತಾಃ ॥ ೭೨ ॥**

**ಅಭಿಷಿಂಚಂತು ರಾಜೇಂದ್ರ ರಾಜರಾಜೇನ ಸತ್ವರಃ ।**
**ಹೇತಿಶ್ಚೈವ ಪ್ರಹೇತಿಶ್ಚ ಮಾಲೀ ಶಂಖುಸ್ತಥೈವ ಚ ॥ ೭೩ ॥**

---

ಪುಂಡರೀಕಾ-ಸುದಾನಾ - ಅಸುದಾನಾ - ಸುರಸಾ - ಹೇಮಾ - ಶಾರದ್ವತೀ - ಸೂನೃತಾ-ಕಮಲಾಲಯಾ - ಸುಮುಖಾ - ಹಂಸಪಾದೀ - ವಾರುಣೀ - ರತಿಲಾಲಸಾ ಎಂಬ ಈ ಹೆಸರುಗಳಿಂದ ವಿರಾಜಿತರಾದ ಸಕಲಮಂದಿ ಅಪ್ಸರನಾರಿಯರೂ ಸಹ ಬಂದು ನಿನಗೆ ಅಭಿಷೇಕಮಾಡಿ ಮಂಗಳವನ್ನುಂಟುಮಾಡಲಿ.

೭೧. ಎಲೈ ಮಹಾರಾಜನೇ! ಮಹಾತೇಜಸ್ವಿಯಾದ ಪ್ರಹ್ಲಾದನೂ, ಹಾಗೂ ಅವನ ಮಗ ವಿರೋಚನನೂ, ಅವನ ಮಗ, ಬಲಿಚಕ್ರವರ್ತಿಯೂ, ಅವನ ಮಗ ಬಾಣಾಸುರನೂ ; ಇನ್ನೂ ಉಳಿದ ದೈತ್ಯರಾಜರೂ ಇಲ್ಲಿಗೆ ಬಂದು ದಿವ್ಯತೀರ್ಥಗಳಿಂದ ನಿನಗೆ ಅಭಿಷೇಕಮಾಡಲಿ.

೭೨-೭೫. ವಿಪ್ರಚಿತ್ತಿಯೇ ಮೊದಲಾದ ಸಕಲದಾನವರೂ ಬಂದು ನಿನಗೆ ಅಭಿಷೇಕಮಾಡಲಿ. ಹೇತಿಯೂ, ಪ್ರಹೇತಿಯೂ, ಮಾಲಿಯೂ, ಶಂಕುವೂ, ಸುಕೇಶಿಯೂ, ಪೌರುಷೇಯನೂ, ಯಜ್ಞವಿನಾಶಿಯೂ, ಮನುಷ್ಯಭಕ್ಷಕನೂ ಆದ

**ಸುಕೇಶೀ ಪೌರುಷೇಯಶ್ಚ ಯಜ್ಞಹಾ ಪುರುಷಾಧಮಃ ।**
**ವಿದ್ಯುತ್ಸ್ಫೂರ್ಜಸ್ತಥಾ ವ್ಯಾಘ್ರೋ ವಧಶ್ಚ ರಸನಸ್ತಥಾ ॥ ೭೪ ॥**

**ಏತೇ ತ್ವಾಮಭಿಷಿಂಚಂತು ಸಮಾಗಮ್ಯಾದ್ಯ ರಾಕ್ಷಸಾಃ ।**
**ಸಿದ್ಧಾರ್ಥೋ ಮಣಿಭದ್ರಶ್ಚ ಸುಮನೋ ನಂದನಸ್ತಥಾ ॥ ೭೫ ॥**

**ಕಾಂಡಭಿಃ ಪಂಚಮಶ್ಚೈವ ಮಣಿಮಾನುಯಮಾಸ್ತಥಾ ।**
**ಸರ್ವಾನುಭೂತಃ ಶಂಖಶ್ಚ ಪಿಂಗಾಕ್ಷಶ್ಚತರಸ್ತಥಾ ॥ ೭೬ ॥**

**ಯಶೋ ಮಂದರಶೋಭೀ ಚ ಪದ್ಮಚಂದ್ರಪ್ರಭಂಕರಾಃ ।**
**ಮೇಘವರ್ಣಃ ಸುಭದ್ರಶ್ಚ ಪ್ರದ್ಯೋತಶ್ಚ ಮಹಾಘಸಃ ॥ ೭೭ ॥**

**ದ್ಯುತಿಮಾನ್ಕೇತುಮಾಂಶ್ಚೈವ ಮೌಲಿಮಾಂಶ್ಚ ಸುದರ್ಶನಃ ।**
**ಶ್ವೇತಶ್ಚ ವಿಪುಲಶ್ಚೈವ ಪುಷ್ಪದಂತೋ ಜಯಾವಹಃ ॥ ೭೮ ॥**

**ಪದ್ಮವರ್ಣೋ ಬಲಾಕಶ್ಚ ಕುಮುದಶ್ಚ ಬಲಾಹಕಃ ।**
**ಪದ್ಮನಾಭಃ ಸುಗಂಧಶ್ಚ ಪ್ರವೀರೋ ವಿಜಯಃ ಕೃತಿಃ ॥ ೭೯ ॥**

---

ವಿದ್ಯುತ್‌ಸ್ಫೂರ್ಜನೆಂಬ ರಾಕ್ಷಸಾಧಮನೂ; ವ್ಯಾಘ್ರವಧ, ರಸನನೇ ಮುಂತಾದ ರಾಕ್ಷಸರೂ ಸಹ ಇಲ್ಲಿಗೆ ಬಂದು ನಿನಗೆ ಈ ದಿವ್ಯತೀರ್ಥೋದಕಗಳಿಂದ ಅಭಿಷೇಕಮಾಡಿ ಹೋಗಲಿ.

೭೬-೮೦. ಸಿದ್ಧಾರ್ಥ - ಮಣಿಭದ್ರ - ಸುಮನ - ನಂದನ - ಐದನೆಯಕಾಂಡ - ಮಣಿಮಂತ - ಅನುಯಮ - ಸರ್ವಾನುಭೂತ - ಶಂಖ - ಪಿಂಗಾಕ್ಷ - ತರಕ್ಷು - ಯಶ - ಮಂದರಶೋಭಿ - ಪದ್ಮಚಂದ್ರ - ಪ್ರಭಂಕರ - ಮೇಘವರ್ಣ - ಸುಭದ್ರ - ಪ್ರದ್ಯೋತ - ಮಹಾಘಸ-ದ್ಯುತಿಮಂತ-ಕೇತುಮಂತ-ಮೌಳಿಮಂತ- ಸುದರ್ಶನ - ಶ್ವೇತ - ವಿಮಲ - ಪುಷ್ಪದಂತ - ಜಯಾವಹ - ಪದ್ಮವರ್ಣ - ಬಲಾಕ -ಕುಮುದ -ಬಲಾಹಕ-ಪದ್ಮನಾಭ- ಸುಗಂಧ-ಪ್ರವೀರ-ವಿಜಯ-ಕೃತಿ -ಪೂರ್ಣಮಾಸ-ವಿರೂಪಾಕ್ಷ-ಹಿರಣ್ಯಾಕ್ಷ-ಶತಜಿಹ್ವ-

ಪೂರ್ಣಮಾಸೋ ಹಿರಣ್ಯಾಕ್ಷಃ ಶತಜಿಹ್ವಶ್ಚ ವೀರ್ಯವಾನ್ ।
ಏತೇ ತ್ವಾಮಭಿಷಿಂಚಂತು ರಾಜನ್ಯಕ್ಷೇಂದ್ರಸತ್ತಮಾಃ ॥ ೮೦ ॥

ಶಂಖಪದ್ಮಸ್ತು ರಾಜೇಂದ್ರ ಮಕರಃ ಕಚ್ಛಪಸ್ತಥಾ ।
ಏತೇ ತ್ವಾಮಭಿಷಿಂಚಂತು ನಿಧಯಸ್ತು ಸಮಾಗತಾಃ ॥ ೮೧ ॥

ಫಲಗಾಶ್ಚೈವ ವಕ್ರಾಶ್ಚ ಯೇ ಚ ಸೂಚೀಮುಖಾನೃಪ ।
ದುಃಪೂರಣಾ ವಿಷಾದಾಶ್ಚ ಜ್ವಲನಾಂಗಾರಕಾಸ್ತಥಾ ॥ ೮೨ ॥

ಕುಂಭಪಾತಾಃ ಪ್ರತುಂಡಾಶ್ಚ ತಪವೀರಾ ಉಲೂಖಲಾಃ ।
ಅಕರ್ಣಾಶ್ಚ ಕುಷಂಡಾಶ್ಚ ತಥಾ ಯೇ ಪಾತ್ರಪಾಣಯಃ ॥ ೮೩ ॥

ಪಾಂಸವಶ್ಚ ವಿತುಂಡಾಶ್ಚ ನಿಪುಣಾಃ ಸ್ಕಂದನಾಸ್ತಥಾ ।
ಏತೇ ತ್ವಾಮಭಿಷಿಂಚಂತು ಪಿಶಾಚಾನಾಂ ಚ ಜಾತಯಃ ॥ ೮೪ ॥

ಬ್ರಹ್ಮಚರ್ಯೇ ಸ್ಥಿತಾ ದಾಂತಾಃ ಸರ್ವಜ್ಞಾಃ ಸರ್ವದರ್ಶಿನಃ ।
ನಾನಾ ಪ್ರಕಾರವದನಾ ನಾನಾ ಬಾಹುಶಿರೋಧರಾಃ ॥ ೮೫ ॥

---

ವೀರ್ಯವಂತನೇ ಮುಂತಾದ ಯಕ್ಷಶ್ರೇಷ್ಠರೆಲ್ಲರೂ ಈ ಪಟ್ಟಾಭಿಷೇಕ ಮಹೋತ್ಸವಕ್ಕೆ ದಯಮಾಡಿಸಿ ನಿನ್ನನ್ನು ಪರಮಪವಿತ್ರತೀರ್ಥೋದಕಗಳಿಂದ ಅಭಿಷೇಕಮಾಡಿ ಆಶೀರ್ವದಿಸಲಿ.

೮೧-೮೪. ಶಂಖ-ಪದ್ಮ-ಮಕರ-ಕಚ್ಛಪ ಮುಂತಾದ ನವನಿಧಿಗಳೂ ಸಹ ಇಲ್ಲಿಗೆ ಸಾಕಾರರಾಗಿ ಬಂದು ಅಭಿಷೇಕಮಾಡಿ, ಹೋಗಲಿ. ಫಲಗರೂ, ವಕ್ರರೂ, ಸೂಚೀಮುಖರೂ, ದುಷ್ಪೂರಣರೂ, ವಿಷಾದರೂ, ಜ್ವಲನರೂ, ಅಂಗಾರಕರೂ, ಕುಂಭಪಾತರೂ, ಪ್ರತುಂದರೂ, ತಪವೀರರೂ, ಉಲೂಖಲರೂ, ಅಕರ್ಣರೂ, ಕುಷಂಡರೂ, ಪಾತ್ರಪಾಣಿಗಳೂ, ಪಾಂಸುಗಳೂ, ವಿತುಂಡರೂ ನಿಪುಣರೂ, ಸ್ಕಂದನರೂ; ಇದೇ ರೀತಿಯಾದ ಅನೇಕ ಪಿಶಾಚಜಾತಿಯ ಪಿಶಾಚಿಗಳೂ ಇಲ್ಲಿಗೆ ಸ್ವಲ್ಪಹೊತ್ತಿನವರಿಗೆ ಬಂದು ನಿನ್ನ ತಲೆಯಮೇಲೆ ದಿವ್ಯತೀರ್ಥಗಳಿಂದ ಅಭಿಷೇಕಮಾಡಿ ಹೋಗಲಿ.

೮೫-೮೭. ಯಾವ ಯಾವ ಮನುಷ್ಯರು ಈ ಭೂಲೋಕದಲ್ಲಿ ಮನುಷ್ಯ ಜಾತಿಯಲ್ಲಿ ಜನಿಸಿ, ಬದುಕಿದ್ದಾಗ ಬ್ರಹ್ಮಚರ್ಯವ್ರತವನ್ನು ಪಾಲಿಸಿಕೊಂಡಿದ್ದವರಾಗಿ

**ಚತುಷ್ಪಥ ಪುರಾಟ್ಟಾಲ ಶೂನ್ಯಾಲಯ ನಿಕೇತನಾಃ ।**
**ಮಧುರತ್ವೇ, ಭವೇದೇವಂ, ಯೇ, ಗತಾ, ಮನುಜೇಶ್ವರಾಃ ॥ ೮೬ ॥**

**ತೇ ತ್ವಾ ಮದ್ಯಾಭಿಷಿಂಚಂತು ಭೂತಾ ಭೂತಪತೇಃ, ಸ್ವಯಂ ।**
**ಮಹಾಕಾಲಂ ಪುರಸ್ಕೃತ್ಯ ನರಸಿಂಹಂ ಚ ಮಾತರಃ ॥ ೮೭ ॥**

**ಸರ್ವಾಸ್ತ್ವಾಮಭಿಷಿಂಚಂತು ರಾಜರಾಜ್ಯೇ ನರಾಧಿಪ ।**
**ಗುಹಃ ಸ್ಕಂದೋ ವಿಶಾಖಶ್ಚ ನೈಗಮೇಯಸ್ತಥೈವ ಚ ॥ ೮೮ ॥**

**ಅಭಿಷಿಂಚಂತು ರಾಜನ್ಸ್ತ್ವಾಂ ಸರ್ವೇ ಸ್ಕಂದಗ್ರಹಾಃ ಶುಭಾಃ ।**
**ಡಾಕಿನ್ಯೋ ಯಾಶ್ಚ ಯೋಗಿನ್ಯಃ ಖೇಚರೀ ಭೂಚರೀಶ್ಚ ಯಾಃ ॥ ೮೯ ॥**

---

ಇಂದ್ರಿಯಗಳನ್ನು ದಮನಮಾಡುತ್ತಾ ಸರ್ವಜ್ಞರಾಗಿಯೂ, ಸರ್ವದರ್ಶನರಾಗಿಯೂ, ನಾನಾ ಪ್ರಕಾರ ಮುಖವುಳ್ಳವರಾಗಿಯೂ, ನಾನಾ ಬಾಹುಶಿರೋಧರರಾಗಿಯೂ ಇದ್ದು ದಿವಂಗತರಾಗಿರುವರೋ ಅವರೆಲ್ಲರೂ ಈಗ ಬಂದು ನಿನಗೆ ಅಭಿಷೇಕಮಾಡಲಿ. ಮತ್ತದಾವ ಜೀವರಾಶಿಗಳು ಚತುಷ್ಪಥಗಳಲ್ಲಿಯೂ, ಪುರಗಳಲ್ಲಿಯೂ, ಅಟ್ಟಾಲ ಗಳಲ್ಲಿಯೂ, ಶೂನ್ಯಾಲಯಗಳಲ್ಲಿಯೂ ವಾಸಮಾಡಿಕೊಂಡು ಕಾಮರೂಪದಿಂದಿರು ವುವೋ ಆ ಜೀವಗಳು ಈಗಲೇ ಇಲ್ಲಿಗೆ ಬಂದು ನಿನಗೆ ಮಧುರಮಂಗಳವನ್ನು ಹಾರೈಸುತ್ತಾ ಪವಿತ್ರೋದಕಗಳಿಂದ ಅಭಿಷೇಕವನ್ನು ಮಾಡಲಿ.

೮೭-೮೯. ಮತ್ತು ಮೇಲ್ಕಂಡ ಜೀವಗಳು ಭೂತಜನ್ಮವನ್ನು ಪಡೆದಿರುವು ದಾದರೆ ಆ ಭೂತಗಳೂ, ಭೂತಪತಿಗಳೂ ಇಲ್ಲಿಗೆ ಬಂದು ನಿನಗೆ ಅಭಿಷೇಕವನ್ನು ಮಾಡಲಿ. ಮತ್ತು ಸಕಲ ಮಾತೃಗ್ರಹಗಳೂ ಸಹ ನರಸಿಂಹಸ್ವಾಮಿಯನ್ನೂ, ಮಹಾಕಾಳನನ್ನೂ ಮುಂದೆ ಬಿಟ್ಟುಕೊಂಡು ಬಂದು ಅಭಿಷೇಕಮಾಡಲಿ. ಎಲೈ ಮಹಾರಾಜನೇ! ರಾಜ್ಯದಲ್ಲಿ ಅಭಿಷಿಕ್ತನಾಗುತ್ತಿರುವ ನಿನ್ನನ್ನು ಗುಹನೂ, ಸ್ಕಂದನೂ, ವಿಶಾಖನೂ, ನೈಗಮೇಯನೂ ಮತ್ತು ಸಕಲಸ್ಕಂದಗ್ರಹಗಳೂ ಬಂದು ನಿನಗೆ ಶುಭತತಿಯನ್ನು ಕೋರುತ್ತಾ ಅಭಿಷೇಕಮಾಡಲಿ. ಮತ್ತು ಡಾಕಿನಿಗಳೂ, ಯೋಗಿನೀ ಗಣಗಳೂ, ಖೇಚರೀ ಭೂಚರೀ ಗಣಗಳೂ ಗುಂಪುಗುಂಪಾಗಿ ಸಾಲುಕಟ್ಟಿಕೊಂಡು ನಿನ್ನ ಮೇಲೆ ಪವಿತ್ರೋದಕಗಳನ್ನಭಿಷೇಕಮಾಡಲಿ.

ಸರ್ವಾಸ್ತ್ವಾಮಭಿಷಿಂಚಂತು ಸಮೇತ್ಯ ಮನುಜೇಶ್ವರ ।
ಗರುಡಶ್ಚಾರುಣಶ್ಚೈವ ಆರುಣಿಶ್ಚ ಮಹಾಖಗಃ ॥ ೯೦ ॥

ಸಂಪಾತೀ ವಿನತಶ್ಚೈವ ವಿಷ್ಣುಗಂಧಃ ಕುಮಾರಕಃ ।
ಏತೇ ತ್ವಾಮಭಿಷಿಂಚಂತು ಸುಪರ್ಣಾಃ ಪೃಥಿವೀಪತೇ ॥ ೯೧ ॥

ಅನಂತಶ್ಚ ಮಹಾನಾಗಃ ಶೇಷೋ ವಾಸುಕಿತಕ್ಷಕಾಃ ।
ಸಪರ್ಣೀರಶ್ಚ ಕುಂಭಶ್ಚ ವಾಮನಶ್ಚಾಂ ಜನಸ್ತಥಾ ॥ ೯೨ ॥

ಐರಾವತೋ ಮಹಾನಾಗಃ ಕಂಬಲಾಶ್ವತರಾವುಭೌ ।
ಐಲಮಂತ್ರಶ್ಚ ಶಂಖಶ್ಚ ಕರ್ಕೋಟಕಧನಂಜಯೌ ॥ ೯೩ ॥

ಮಹಾಕರ್ಣ ಮಹಾನೀಲೌ ಧೃತರಾಷ್ಟ್ರಬಲಾಹಕೌ ।
ಕುಮಾರಃ ಪುಷ್ಪದಂತಶ್ಚ ಸುಮುಖೋ ದುರ್ಮುಖಸ್ತಥಾ ॥ ೯೪ ॥

ಸೂಚೀಮುಖೋ ದಧಿಮುಖಃ ಕಾಲೀಯಃ ಶಾಲಿಪಿಂಡಕಃ ।
ಬಿಲ್ವಪಾದಃ ಪಾಂಡುರಕೋ ನಾಗಶ್ಚಾಪೂರಣಸ್ತಥಾ ॥ ೯೫ ॥

ಕಪಿಲಶ್ಚಾಂಬರೀಷಶ್ಚ ಕುಮಾರಶ್ಚಾಥ ಕಾಶ್ಯಪಃ ।
ಪ್ರಹ್ಲಾದಃ ಪುಷ್ಪದಂತಶ್ಚ ಗಂಧರ್ವಶ್ಚ ಮನಸ್ವಿಕಃ ॥ ೯೬ ॥

---

೯೦-೯೧. ಗರುಡನೂ, ಅರುಣನೂ, ಆರುಣಿಯೂ, ಮಹಾಖಗನೆನಿಸಿಕೊಂಡ ಸಂಪಾತಿಯೂ, ವಿನತನೂ, ವಿಷ್ಣುಗಂಧನೂ, ಕುಮಾರಕನೂ, ಇವರೇ ಮೊದಲಾದ ಪಕ್ಷಿಶ್ರೇಷ್ಠರೆಲ್ಲರೂ ಈಗಿಂದೀಗಲೇ ಇಲ್ಲಿಗೆ ಬಂದು ನಿನಗೆ ಅಭಿಷೇಕಮಾಡಲಯ್ಯಾ! ಮಹಾರಾಜ !!

೯೨-೯೬. ಅನಂತನೂ, ಮಹಾನಾಗನೂ, ಆದಿಶೇಷನೂ, ವಾಸುಕಿತಕ್ಷಕರೂ, ಸಪರ್ಣೀರನೂ, ಕುಂಭನೂ, ವಾಮನನೂ, ಅಂಜನನೂ, ಐರಾವತನಾಮಕ ಮಹಾ ನಾಗನೂ, ಕಂಬಳಾಶ್ವತರರಿಬ್ಬರೂ, ಐಲಮಂತನೂ, ಶಂಖನೂ, ಕರ್ಕೋಟಕ ಧನಂಜಯರೂ, ಮಹಾಕರ್ಣನೂ, ಮಹಾನೀಲನೂ, ಧೃತರಾಷ್ಟ್ರ ಬಲಾಹಕರು ಗಳೂ, ಕುಮಾರನೂ, ಪುಷ್ಪವಂತನೂ ; ಸುಮುಖನೂ ; ಕಾಲೀಯನೂ, ಶಾಲ ಪಿಂಡಕನೂ, ಬಿಲ್ವಪಾದನೂ, ಪಾಂಡುರಕನೂ, ನಾಗನೂ, ಪೂರಣನೂ, ಕಪಿಲನೂ,

ನಹುಷಃ ಖರರೋಮಾ ಚ ಶಂಖಪಾಲಸ್ತಥೈವ ಚ ।
ಪದ್ಮಶ್ಚ ಕುಲಿಕಶ್ಚೈವ ಪಾಣಿರಿತ್ಯೇವಮಾದಯಃ ॥ ೯೭ ॥

ನಾಗಾಸ್ತ್ವಾಮಭಿಷಿಂಚಂತು ರಾಜರಾಜ್ಯೇನ ಪಾರ್ಥಿವ ।
ಕುಮುದೈರಾವಣೌ ಪದ್ಮಃ ಪುಷ್ಪದಂತೋಽಥ ವಾಮನಃ ॥ ೯೮ ॥

ಸುಪ್ರತೀಕೋಽಂಜನೋ ನೀಲಃ ಪಾಂತು ತ್ವಾಂ ಸರ್ವತಃ ಸದಾ ।
ಚಕ್ರಂ ತ್ರಿಶೂಲಂ ವಜ್ರಶ್ಚ ನಂದಕೋಽಸ್ತ್ರಾಣಿ ಚಾಪ್ಯಥ ॥ ೯೯ ॥

ಪೈತಾಮಹಾಸ್ತಥಾ ಹಂಸಾ ವೃಷಭಃ ಶಂಕರಸ್ಯ ಚ ।
ದುರ್ಗಾಸಿಂಹಸ್ಯ ಪಾಂತು ತ್ವಾಂ ಯಮಸ್ಯ ಮಹಿಷಸ್ತಥಾ ॥ ೧೦೦ ॥

ಉಚ್ಚೈಃಶ್ರವಾಶ್ಚಾಶ್ವಪತಿಸ್ತಥಾ ಧನ್ವನ್ತರಿರ್ನೃಪ ।
ಕೌಸ್ತುಭಃ ಶಂಖರಾಜಶ್ಚ ಪಾಂತು ತ್ವಾಂ ಸರ್ವತಃ ಸದಾ ॥ ೧೦೧ ॥

---

ಅಂಬರೀಷನೂ, ಕುಮಾರನೂ, ಕಶ್ಯಪನೂ, ಪ್ರಹ್ಲಾದ ಪುಷ್ಪದಂತರುಗಳೂ, ಗಂಧರ್ವನೂ, ಮನಸ್ವಿಕನೂ, ನಹುಷನೂ, ಖರರೋಮನೂ, ಶಂಖಪಾಲನೂ, ಪದ್ಮನೂ, ಕುಲಕನೂ, ಪಾಣಿಯೇ ಮುಂತಾದ ನಾಗಶ್ರೇಷ್ಠರೆಲ್ಲರೂ ಬಂದು ನಿನಗೆ ಅಭಿಷೇಕಮಾಡಲಿ.

೯೮-೧೦೦. ಕುಮುದ - ಐರಾವಣರೂ, ಪದ್ಮ - ಪುಷ್ಪದಂತ - ವಾಮನರೂ, ಸುಪ್ರತೀಕ-ಅಂಜನ ನೀಲರೆಂಬ ಹೆಸರಿನ ಅಷ್ಟದಿಗ್ಗಜಗಳೂ ನಿನ್ನನ್ನು ಸರ್ವದಾ ಕಾಪಾಡಲಿ. ಚಕ್ರವೂ, ತ್ರಿಶೂಲವೂ, ವಜ್ರವೂ, ನಂದಕವೇ ಮುಂತಾದ ಶಸ್ತ್ರಾಸ್ತ್ರಗಳೂ, ಬ್ರಹ್ಮನ ಮಕ್ಕಳಾದ (ವಾಹನ) ಹಂಸರೂ, ಶಂಕರನ ವಾಹನವಾದ ವೃಷಭವೂ, ಯಮಧರ್ಮರಾಯನ ವಾಹನವಾದ ದುರ್ಗಾಸಿಂಹವೆಂಬ ಮಹಿಷವೂ ಸಹ ನಿನ್ನನ್ನು ಕಾಪಾಡಲಿ.

೧೦೧. ಉಚ್ಚೈಶ್ರವಸ್ಸೆಂಬ ಅಶ್ವರಾಜನೂ, ಧನ್ವಂತರಿಯೆಂಬ ವೈದ್ಯರಾಜನೂ, ಕೌಸ್ತುಭವೆಂಬ ಶಂಖರಾಜನೂ ನಿನ್ನನ್ನು ಎಲ್ಲಾ ಕಡೆಯಲ್ಲೂ ಸಂರಕ್ಷಿಸಲಿ.

**ಸರ್ವೇಽಭಿಷೇಕಂ ದತ್ವಾ ತೇ ದಿಶಂತು ವಿಜಯಂ ಧ್ರುವಂ ।**
**ಧರ್ಮಶ್ಚ ವ್ಯವಸಾಯಶ್ಚ ಸತ್ಯೋ ದಾನಂ ತಪಸ್ತಥಾ ॥ ೧೦೨ ॥**

**ಯಮೋ ಯಜ್ಞಸ್ತಥಾ ವಾಯುಬ್ರ್ರಹ್ಮಚರ್ಯಂ ದಮಃ ಶಮಃ ।**
**ಏತೇ ತ್ವಾಮಭಿಷಿಂಚಂತು ಚಿತ್ರಗುಪ್ತಶ್ಚ ಪಾರ್ಥಿವ ॥ ೧೦೩ ॥**

**ದಂಡಶ್ಚ ಪಿಂಗಲಶ್ಚೈವ ಮೃತ್ಯುಕಾಲಾವುಭೌ ತಥಾ ।**
**ವಾಲಖಿಲ್ಯಾಸ್ತಥಾ ಸರ್ವೇ ಭವಂತು ವಿಜಯಾಯ ತೇ ॥ ೧೦೪ ॥**

**ದಿಗ್ಧೇನವಶ್ಚತಸ್ರಸ್ತ್ವಾಂ ಸುರಭಿಶ್ಚ ತಥಾ ನೃಪ ।**
**ಅಭಿಷಿಂಚಂತು ಸರ್ವಾಭಿರ್ಗೋಭಿಃ ಸಾರ್ಧಂ ನರೇಶ್ವರಃ ॥ ೧೦೫ ॥**

**ವೇದವ್ಯಾಸಶ್ಚ ವಾಲ್ಮೀಕಿಃ ಕಮಠೋಥ ಪರಾಶರಃ ।**
**ದೇವಲಃ ಪರ್ವತಶ್ಚೈವ ದುರ್ವಾಸಾಶ್ಚ ತಥಾ ಮುನಿಃ ॥ ೧೦೬ ॥**

---

೧೦೨-೧೦೩. ಮೇಲೆ ವಿವರಿಸಿದ ಸಕಲರೂ ಈ ಅಭಿಷೇಕ ಕಾಲದಲ್ಲಿ ಬಂದು ನಿನಗೆ ಅಭಿಷೇಕಮಾಡಿ ಆಶೀರ್ವದಿಸಿ ನಿನಗೆ ಮಂಗಳವನ್ನೂ, ವಿಜಯವನ್ನೂ ಉಂಟುಮಾಡಲಿ. ಧರ್ಮನೂ, ವ್ಯವಸಾಯನೂ, ಸತ್ಯದಾನ ತಪಸ್ಸುಗಳೂ, ಯಮನೂ, ಯಜ್ಞವೂ, ವಾಯುವೂ, ಬ್ರಹ್ಮಚರ್ಯವೂ, ದಮಶಮಾದಿಗಳೂ, ಚಿತ್ರ ಗುಪ್ತನೂ ಸಹ ಬಂದು ನಿನಗೆ ಅಭಿಷೇಕ ಮಾಡಲಿ.

೧೦೪. ದಂಡನೂ, ಪಿಂಗಳನೂ, ಮೃತ್ಯುವೂ, ಕಾಲನೂ, ವಾಲಖಿಲ್ಯಾದಿ ಗಳೂ ಸಹ ನಿನ್ನ ವಿಜಯಾಶಂಸನೆಗೋಸ್ಕರ ಬಂದು ಅಭಿಷೇಕಮಾಡಲಿ.

೧೦೫. ನಾಲ್ಕು ದಿಗ್ಧೇನುಗಳೂ, ಸುರಭಿಯೂ (ಕಾಮಧೇನುವೂ) ಸಹ ಈ ಲೋಕದಲ್ಲಿರುವ ಗೋವುಗಳ ಹಿಂಡನ್ನೆಲ್ಲಾ ಕಟ್ಟಿಕೊಂಡು ಇಲ್ಲಿಗೆ ಬಂದು ನಿನಗೆ ಗೋಕ್ಷೀರಾಭಿಷೇಕವನ್ನುಮಾಡಿ ಹೊರಡಲಿ.

೧೦೬. ವೇದವ್ಯಾಸಮಹರ್ಷಿಗಳೂ, ವಾಲ್ಮೀಕಿಯೂ, ಕಮಠರೂ, ಪರಾ ಶರರೂ, ದೇವಲರೂ, ಪರ್ವತರೂ, ದೂರ್ವಾಸಋಷಿಗಳೂ ಇಲ್ಲಿಗೆ ಈಗಲೇ ಬರಲಿ.

ಯಾಜ್ಞವಲ್ಕ್ಯಶ್ಚ ಜಾಬಾಲಿಃ ಜಮದಗ್ನಿಃ ಶುಚಿಶ್ರವಾಃ ।
ವಿಶ್ವಾಮಿತ್ರಃ ಸ್ಥೂಲಶಿರಾಶ್ಚ್ಯವನೋಽತ್ರಿರ್ವಿದೂರಥಃ ॥ ೧೦೭ ॥

ಏಕತಶ್ಚ ದ್ವಿತಶ್ಚೈವ ತ್ರಿತೋ ಗೌತಮಗಾಲವೌ ।
ಶಾಂಡಿಲ್ಯಶ್ಚ ಭರದ್ವಾಜೋ ಮೌದ್ಗಲ್ಯೋ ವೇದವಾಹನಃ ॥ ೧೦೮ ॥

ಬೃಹದಶ್ವಃ ಕುಠಿಶಠೋ ಜಟಾಜಾನುರ್ಘಟೋದರಃ ।
ಯವಕ್ರೀತೋಽರ್ಥರೈತ್ಯಶ್ಚ ಆತ್ಮವಾನಥಃ ಜೈಮಿನಿಃ ॥ ೧೦೯ ॥

ಋಷಿಃ ಶಾರ್ಙ್ಗರವಶ್ಚೈವ ತಥಾಽಗಸ್ತ್ಯೋ ಮಹಾತಪಾಃ ।
ಉನ್ಮ್ರವುರ್ಮುಮುವುಶ್ಚೈವ ಇಧ್ಮಬಾಹುರ್ಮಹೋದಯಃ ॥ ೧೧೦ ॥

ಕಾತ್ಯಾಯನಶ್ಚ ಕಣ್ವಶ್ಚ ವಲ್ವಕಾಂಭೋರುನಂದನಃ ।
ಏತೇ ತ್ವಾಮ ಭಿಷಿಂಚಂತು ಋಷಯಃ ಪಾರ್ಥಿವೋತ್ತಮ ॥ ೧೧೧ ॥

---

೧೦೭ ಯಾಜ್ಞವಲ್ಕ್ಯರೂ, ಜಾಬಾಲರೂ, ಜಮದಗ್ನಿಗಳೂ, ಶುಚಿಶ್ರವರೂ, ವಿಶ್ವಾಮಿತ್ರರೂ, ಸ್ಥೂಲಶಿರರೂ, ಚ್ಯವನರೂ, ಅತ್ರಿಗಳೂ, ವಿದೂರಥರೂ ಇಲ್ಲಿಗೆ ದಯಮಾಡಿಸಲಿ.

೧೦೮-೧೧೧. ಏಕತರೂ, ದ್ವಿತರೂ, ತ್ರಿತರೂ, ಗೌತಮಗಾಲವರೂ, ಶಾಂಡಿಲ್ಯರೂ, ಭರದ್ವಾಜರೂ, ಮೌದ್ಗಲ್ಯರೂ, ವೇದವಾಹನರೂ, ಬೃಹದಶ್ವರೂ, ಕುಟಿಶಠರೂ, ಜಟಾಜಾನುಗಳೂ, ಘಟೋದರಋಷಿಗಳೂ, ಯವಕ್ರೀತರೂ, ಅರ್ಥ ದೈತ್ಯರೂ, ಆತ್ಮವಾನರೂ, ಜೈಮುನಿಗಳೂ, ಶಾರ್ಙರವಋಷಿಗಳೂ, ಮಹಾತಪಸ್ವಿಗಳಾದ ಅಗಸ್ತ್ಯಮಹರ್ಷಿಗಳೂ ; ಉನ್ಮ್ರವು, ಮುಮುವು, ಇಧ್ಮಭಾಹು, ಮಹೋದಯರೆಂಬ ಋಷಿಗಳೂ ; ಕಾತ್ಯಾಯನರೂ, ಕಣ್ವರೂ ವಲ್ವಕಾಂಬರೂ, ಊರುನಂದನರೂ ಇನ್ನೂ ಇತರ ಮಹರ್ಷಿಪುಂಗವರೆಲ್ಲರೂ ಈಗಿಂದೀಗಲೇ ಇಲ್ಲಿಗೆ ಬಂದು ನಿನಗೆ ಅಭಿಷೇಕಮಾಡಿಹೋಗಲಯ್ಯಾ ! ಮಹಾರಾಜ !

ಪೃಥುರ್ದಿಲೀಪೋ ಭರತೋ ದುಷ್ಯಂತಃ ಶತ್ರುಜಿದ್ಬಲೀ ।
ಮನುಃ ಕಕುತ್ಸ್ಥಶ್ಚಾನೇನಾ ಯುವನಾಶ್ವೋ ಜಯದ್ರಥಃ ॥ ೧೧೨ ॥

ಮಾಂಧಾತಾ ಮುಚುಕುಂದಶ್ಚ ತಥಾ ರಾಜಾ ಪುರೂರವಾಃ ।
ಆಯುಶ್ಚ ನಹುಷಶ್ಚೈವ ಯಯಾತಿರಪರಾಜಿತಃ ॥ ೧೧೩ ॥

ಇಕ್ಷ್ವಾಕುಶ್ಚ ಯದುಶ್ಚೈವ ಪುನರ್ಭೂರಿಶ್ರವಸ್ತಥಾ ।
ಅಂಬರೀಷಶ್ಚ ನಾಭಾಗೋ ಬೃಹದಶ್ವೋ ಮಹಾಹನುಃ ॥ ೧೧೪ ॥

ಪ್ರದ್ಯುಮ್ನಶ್ಚಾಥ ಸುದ್ಯುಮ್ನೋ ಭೂರಿದ್ಯುಮ್ನಶ್ಚ ಸೃಂಜಯಃ ।
ಏತೇ ಚಾನ್ಯೇ ಚ ರಾಜಾನಸ್ತ್ವ ರಾಜನ್ದಿವಂಗತಾಃ ॥ ೧೧೫ ॥

ಸಮಾಯಾಂತ್ವಭಿಷೇಕಾಯ ವಿಜಯಾಯ ತಥಾ ಶ್ರಿಯೇ ।
ಪರ್ಜನ್ಯಾದ್ಯಾಸ್ತಥಾ ಸರ್ವೇ ವಾಸ್ತುದೇವಾಸ್ಸಮಾಸತಃ ॥ ೧೧೬ ॥

ದ್ರುಮಾಶ್ಚೌಷಧಯೋ ರತ್ನಬೀಜಾನಿ ವಿವಿಧಾನಿ ಚ ।
ಸರ್ವೇ ತ್ವಾಮಭಿಷಿಂಚಂತು ರಾಜನ್ರಾಜ್ಯೇನ ಸತ್ವರಾಃ ॥ ೧೧೭ ॥

---

೧೧೨-೧೧೫. ಪೃಥು, ದಿಲೀಪ, ಭರತ, ದುಷ್ಯಂತ, ಶತ್ರುಜಿತ್, ಬಲಿ, ಮನು, ಕಕುತ್ಸ್ಥ ಚಾನೇನ, ಯುವನಾಶ್ವ, ಜಯದ್ರಥ, ಮಾಂಧಾತ, ಮುಚುಕುಂದ, ಪುರೂರವ, ಆಯು, ನಹುಷ, ಯಯಾತಿ, ಅಪರಾಜಿತ, ಇಕ್ಷ್ವಾಕು, ಯದು, ಭೂರಿ ಶ್ರವ, ಅಂಬರೀಷ, ನಾಭಾಗ, ಬೃಹದಶ್ವ, ಮಹಾಹನು, ಪ್ರದ್ಯುಮ್ನ, ಸುದ್ಯುಮ್ನ, ಭೂರಿದ್ಯುಮ್ನ, ಸೃಂಜಯನೇ ಮುಂತಾದ ಚಕ್ರವರ್ತಿಗಳೆಲ್ಲರೂ ಭೂಲೋಕದಲ್ಲಿ ಮಂಡಲಾಧಿಪತಿ (ಚಕ್ರವರ್ತಿ) ಗಳಾಗಿದ್ದು ದೇಹತ್ಯಾಗಮಾಡಿ, ಅವರೆಲ್ಲರೂ, ಈಗ ಸ್ವರ್ಗಲೋಕದಲ್ಲಿ ವಾಸವಾಗಿರುತ್ತಾರೆ. ಆ ಮಹಾಚಕ್ರವರ್ತಿಗಳೆಲ್ಲರೂ ಈಗ ಈ ಅಭಿಷೇಕಕಾಲದಲ್ಲಿ ಇಲ್ಲಿಗೆ ಬಂದು ನಿನಗೆ ಜಯವನ್ನೂ ಐಶ್ವರ್ಯವನ್ನೂ ಕೋರಿ ಅಭಿಷೇಕಮಾಡಲಿ.

೧೧೬-೧೧೭. ಪರ್ಜನ್ಯನೇ ಮೊದಲಾದವರೂ, ವಾಸ್ತುದೇವಾದಿಗಳೂ ಒಟ್ಟಿಗೆ ಇಲ್ಲಿಗೆ ಬರಲಿ. ಸಕಲ ವೃಕ್ಷಗಳೂ, ಓಷಧಿವನಸ್ಪತಿಗಳೂ, ನಾನಾವಿಧ ರತ್ನಬೀಜಗಳೂ ಬಲುವೇಗದಿಂದೋಡಿಬಂದು ನಿನಗೆ ಅಭಿಷೇಕಮಾಡಿ, ಇಲ್ಲಿ ಸ್ವಲ್ಪಹೊತ್ತೂ ನಿಲ್ಲದೆ ಅವರವರ ಸ್ಥಳಕ್ಕೆ ಓಡಿಯೇ ಹೊರಟುಹೋಗಲಿ.

ಪುರುಷಶ್ಚಾಪ್ರಮೇಯಾತ್ಮಾ ಮಹಾಭೂತಾನಿ ಯಾನಿ ಚ ।
ಪೃಥಿವೀವಾಯುರಾಕಾಶಮಾಪೋ ಜ್ಯೋತಿಸ್ತಥೈವ ಚ ॥ ೧೧೮ ॥

ಮನೋಬುದ್ಧಿಸ್ತಥೈವಾತ್ಮಾ ಅವ್ಯಕ್ತಶ್ಚ ಮಹೀಪತೇ ।
ಏತೇ ತ್ವಾಮಭಿಷಿಂಚಂತು ಸಮೇತಾ ವಸುಧಾಧಿಪ ॥ ೧೧೯ ॥

ರುಕ್ಮಭೌಮಃ ಶಿಲಾಭೌಮಃ ಪಾತಾಲೋ ನೀಲಮೃತ್ತಿಕಃ ।
ಪೀತೋ ರಕ್ತಕ್ಷಿತಿಶ್ಚೈವ ಶ್ವೇತಭೌಮಸ್ತಥೈವ ಚ ॥ ೧೨೦ ॥

ಏತೇ ತ್ವಾಮಭಿಷಿಂಚಂತು ವಿಜಯಾಯ ಮಹೀಪತೇ ।
ಭೂಲೋಕೋಽಥ ಭುವರ್ಲೋಕಃ ಸ್ವರ್ಲೋಕೋಽಥ ಮಹಜ್ಜನಃ ॥ ೧೨೧ ॥

ತಪಃ ಸತ್ಯಶ್ಚ ರಾಜೇಂದ್ರ ವಿಜಯಾಯ ಭವಂತು ತೇ ।
ಜಂಬೂಶಾಕಕುಶಕ್ರೌಂಚಾಃ ಶಾಲ್ಮಲಿದ್ವೀಪ ಏವ ಚ ॥ ೧೨೨ ॥

---

೧೧೮. ಪುರುಷನೂ, ಅಪ್ರಮೇಯಾತ್ಮನೂ ಆದ ಪರಬ್ರಹ್ಮನೂ, ಮಹಾಭೂತಗಳೆನಿಸಿದ ಪೃಥವೀ, ವಾಯು, ಆಕಾಶ, ನೀರು, ಬೆಂಕಿಗಳೂ ನಿನ್ನನ್ನು ಕಾಪಾಡಲಿ.

೧೧೯. ಮನೋಬುದ್ಧಿಗಳೂ, ಆತ್ಮನೂ, ಅವ್ಯಕ್ತನೂ ಒಟ್ಟಾಗಿ ಇಲ್ಲಿಗೆ ಬಂದು ನಿನ್ನನ್ನು ಅಭಿಷೇಕಮಾಡಲಯ್ಯ ! ವಸುಧಾಧಿಪ !!

೧೨೦. ರುಕ್ಮಭೌಮ, ಶಿಲಾಭೌಮ, ಪಾತಾಳ, ನೀಲಮೃತ್ತಿಕ, ಪೀತ, ರಕ್ತಕ್ಷಿತಿ, ಶ್ವೇತಭೌಮಾದಿಗಳೂ ಸಹ ನಿನಗೆ ವಿಜಯವನ್ನು ಕೋರಿ ನಿನ್ನನ್ನು ಅಭಿಷೇಕಮಾಡಲಿ.

೧೨೧-೧೨೨. ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ, ಜನಲೋಕ, ತಪೋಲೋಕ, ಸತ್ಯಲೋಕಾದಿಗಳೂ ಸಹ ನಿನಗೆ ವಿಜಯವನ್ನು ಕೋರಲಿ. ಮತ್ತು ಜಂಬೂದ್ವೀಪ, ಶಾಕದ್ವೀಪ, ಕುಶದ್ವೀಪ, ಕ್ರೌಂಚದ್ವೀಪ, ಶಾಲ್ಮಲೀ ದ್ವೀಪಗಳೂ ಸಹ ನಿನಗೆ ಶುಭಾಶಂಸನವನ್ನು ಮಾಡಲಿ.

**ಗೋಮೇಧಃ ಪುಷ್ಕರಶ್ಚೈವ ಸ್ವಸಾಮ್ಯಂ ಪ್ರದಿಶಂತು ತೇ ।**
**ಉತ್ತರಾಃ ಕುರವಃ ಪುಣ್ಯಾ ರಮ್ಯಾ ಹೈರಣ್ವತಸ್ತಥಾ　　॥ ೧೨೩ ॥**

**ಭದ್ರಾಶ್ವಃ ಕೇತುಮಾಲಶ್ಚ ವರ್ಷಶ್ಚೈವ ಇಲಾವೃತಃ ।**
**ಹರಿವರ್ಷಃ ಕಿಂಪುರುಷೋ ವರ್ಷೋ ಭಾರತಸಂಜ್ಞಿಕಃ　　॥ ೧೨೪ ॥**

**ಏತೇ ತ್ವಾಮಭಿಷಿಂಚಂತು ಸಮೇತ್ಯ ವಸುಧಾಧಿಪ ।**
**ಇಂದ್ರದೀಪಃ ಕಶೇರುಶ್ಚ ತಾಮ್ರವರ್ಣೋ ಗಭಸ್ತಿಮಾನ್　　॥ ೧೨೫ ॥**

**ನಾಗದ್ವೀಪಸ್ತಥಾ ಸೌಮ್ಯೋ ಗಾಂಧರ್ವೋ ವಾರುಣಸ್ತಥಾ ।**
**ಅಯಂ ಚ ವಾರುಣಸ್ತೇಷಾಂ ಸ್ವಸಾಮ್ಯಂ ಪ್ರದಿಶಂತು ತೇ　　॥ ೧೨೬ ॥**

**ಹಿಮವಾನ್ಹೇಮಕೂಟಶ್ಚ ನಿಷಧೋ ನೀಲಪರ್ವತಃ ।**
**ಶ್ವೇತಶ್ಚ ಶೃಂಗವಾನ್ಮೇರುರ್ಮಾಲ್ಯವಾನ್ಗಂಧಮಾದನಃ　　॥ ೧೨೭ ॥**

---

೧೨೩. ಗೋಮೇಧ, ಪುಷ್ಕರದ್ವೀಪಗಳೂ ಸಹ ನಿನಗೆ ತಮ್ಮ ಸಾಮ್ಯವನ್ನು ದಯಪಾಲಿಸಲಿ. ಉತ್ತರವರ್ಷವೂ, ಕುರುವರ್ಷವೂ, ರಮ್ಯವರ್ಷವೂ ; ಹಾಗೂ

೧೨೪. ಭದ್ರಾಶ್ವವರ್ಷವೂ, ಕೇತುಮಾಲವರ್ಷವೂ, ಇಳಾವೃತವರ್ಷವೂ, ಹರಿವರ್ಷವೂ, ಕಿಂಪುರುಷವರ್ಷವೂ, ಭಾರತವರ್ಷವೂ ಸಹ ಒಟ್ಟಗೆ ಇಲ್ಲಿಗೆ ಬಂದು ನಿನಗೆ ಪುಣ್ಯತೀರ್ಥಗಳಿಂದ ಅಭಿಷೇಕಮಾಡಲಯ್ಯಾ ! ಭೂಮಂಡಲಾಧಿಪ !!

೧೨೫-೧೨೬. ಇಂದ್ರದ್ವೀಪವೂ, ಕಶೇರುದ್ವೀಪವೂ, ತಾಮ್ರವರ್ಣದ್ವೀಪವೂ, ಗಭಸ್ತಿಮಂತದ್ವೀಪವೂ, ನಾಗದ್ವೀಪವೂ, ಸೌಮ್ಯದ್ವೀಪವೂ, ಗಾಂಧರ್ವ, ವಾರುಣ ದ್ವೀಪಗಳೂ ನಿನಗೆ ತಮ್ಮ ಸಾಮ್ಯವನ್ನು ಕೊಡಲಯ್ಯಾ !

೧೨೭-೧೨೮. ಹಿಮವತ್ಪರ್ವತ, ಹೇಮಕೂಟಪರ್ವತ, ನಿಷಧಪರ್ವತ, ನೀಲಪರ್ವತ, ಶ್ವೇತಪರ್ವತ, ಶೃಂಗವತ್ಪರ್ವತ, ಮೇರುಪರ್ವತ, ಮಾಲ್ಯವತ್ಪರ್ವತ, ಗಂಧಮಾದನಪರ್ವತ, ಮಹೇಂದ್ರಪರ್ವತ, ಋಕ್ಷವತ್ಪರ್ವತ, ವಿಂಧ್ಯಪರ್ವತ, ಪಾರಿ

**ಮಹೇಂದ್ರೋ ಮಲಯಃ ಸಹ್ಯಃ ಶುಕ್ತಿಮಾನೃಕ್ಷವಾಂಸ್ತಥಾ ।**
**ವಿನ್ಧ್ಯಶ್ಚ ಪಾರಿಯಾತ್ರಶ್ಚ ಸರ್ವ ಏವ ಮಹೀಧರಾಃ ॥ ೧೨೮ ॥**

**ಸಮಾಗಮ್ಯಾಭಿಷಿಂಚಂತು ತ್ವಾಮದ್ಯ ವಸುಧಾಧಿಪ ।**
**ಋಗ್ವೇದೋಽಥ ಯಜುರ್ವೇದಃ ಸಾಮವೇದಸ್ತಥೈವ ಚ ॥ ೧೨೯ ॥**

**ಅಥರ್ವವೇದೋ ವೇದಾಸ್ತ್ವಾಮಭಿಷಿಂಚಂತು ಪಾರ್ಥಿವ ।**
**ಇತಿಹಾಸೋ ಧನುರ್ವೇದೋ ಗಂಧರ್ವಶ್ಚಾಯುಸಂಜ್ಞಿತಃ ॥ ೧೩೦ ॥**

**ವೇದೋಪವೇದಾಶ್ಚ ತಥಾ ವಿಜಯಾಯ ಭವಂತು ತೇ ।**
**ಶಿಕ್ಷಾ ಕಲ್ಪೋ ವ್ಯಾಕರಣಂ ನಿರುಕ್ತಂ ಜ್ಯೋತಿಷಾಂಗತಿಃ ॥ ೧೩೧ ॥**

**ಛಂದಶ್ಚೇತಿಚಷಷ್ಠಾನಿ ವಿಜಯಂ ಪ್ರದಿಶಂತು ತೇ ।**
**ಅಂಗಾನಿ ವೇದಾಶ್ಚತ್ವಾರೋ ಮೀಮಾಂಸಾ ನ್ಯಾಯವಿಸ್ತರಃ ॥ ೧೩೨ ॥**

---

ಯಾತ್ರಪರ್ವತ, ಇವೇ ಮೊದಲಾದ ಸಕಲ ಮಹಾಪರ್ವತಗಳೂ ಇಲ್ಲಿಗೆ ಬಂದು ನಿನ್ನ ಶಿರಸ್ಸಿನ ಮೇಲೆ ಪವಿತ್ರಜಲಗಳಿಂದ ಅಭಿಷೇಕಮಾಡಲಯ್ಯಾ ! ಮಹಾರಾಜ !!

೧೨೯. ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದಗಳು ಮೂರ್ತಿಮತ್ತಾಗಿ ಬಂದು ನಿನ್ನ ಶಿರಸ್ಸಿನ ಮೆುಲೆ ಅಭಿಷೇಕಮಾಡಲಯ್ಯಾ !

೧೩೦. ಇತಿಹಾಸ, ಧನುರ್ವೇದ, ಗಾಂಧರ್ವವೇದ, ಆಯುರ್ವೇದವೆಂಬ ವೇದೋಪವೇದಗಳೆಲ್ಲವೂ ಬಂದು ನಿನ್ನ ವಿಜಯವನ್ನು ಕೋರಲಿ.

೧೩೧. ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಜ್ಯೋತಿಷ, ಛಂದಶ್ಶಾಸ್ತ್ರವೇ ಮುಂತಾದ ವೇದದ ಷಡಂಗಗಳೂ ನಿನಗೆ ವಿಜಯವನ್ನುಂಟುಮಾಡಲಿ.

೧೩೨. ಈ ರೀತಿಯಾಗಿ ಚತುರ್ವೇದಗಳೂ, ವೇದಾಂಗಗಳೂ, ನ್ಯಾಯ ವಿಸ್ತರ, ಧರ್ಮಶಾಸ್ತ್ರ, ಪುರಾಣಗಳೆಲ್ಲವೂ ಸೇರಿದರೆ ಚತುರ್ದಶವಿದ್ಯೆಗಳೆನಿಸಿಕೊಳ್ಳು ವುವು.

ಧರ್ಮಶಾಸ್ತ್ರಂ ಪುರಾಣಂಚ ವಿದ್ಯಾ ಏತಾಶ್ಚತುರ್ದಶ ।
ಸಾಂಖ್ಯಯೋಗಃ ಪಾಂಚರಾತ್ರಂ ವೇದಾಃ ಪಾಶುಪತಂ ತಥಾ ॥ ೧೩೩ ॥

ಕೃತಾನ್ನಪಂಚಕಂ ಹ್ಯೇತಚ್ಛಾಸ್ತ್ರಾಣಿ ವಿವಿಧಾನಿ ಚ ।
ಗಾಯತ್ರೀ ಪಾಪಶಮನೀ ದುರ್ಗಾ ದೇವೀ ಮಹಾಶಿವಾ ॥ ೧೩೪ ॥

ಗಾಂಧಾರೀ, ಚ ತಥಾ ವಿದ್ಯಾ ವಿಜಯಂ ಪ್ರದಿಶಂತು ತೇ ।
ದೇವದಾನವಗಂಧರ್ವ ಯಕ್ಷರಾಕ್ಷಸ ಪನ್ನಗಾಃ ॥ ೧೩೫ ॥

ಋಷಯೋ ಮಾನವೋ ಗಾವೋ ದೇವಮಾತರ ಏವ ಚ ।
ದೇವಪತ್ನ್ಯೋ ದ್ರುಮಾ ನಾಗಾಃ ದೈತ್ಯಾಶ್ಚಾಪ್ಸರಸಾಂಗಣಾಃ ॥ ೧೩೬ ॥

ಶಸ್ತ್ರಾಣಿ ಸರ್ವಶಾಸ್ತ್ರಾಣಿ ರಾಜಾನೋ ವಾಹನಾನಿ ಚ ।
ಔಷಧಾನಿ ಚ ರತ್ನಾನಿ ಕಾಲಸ್ಯಾವಯವಾಸ್ತಥಾ ॥ ೧೩೭ ॥

ಸ್ಥಾನಾನಿ ಚ ಸಮಸ್ತಾನಿ ಪುಣ್ಯಾನ್ಯಾಯತನಾನಿ ಚ ।
ಜೀಮೂತಾನಿ ಚ ಸರ್ವಾಣಿ ತದ್ವಿಕಾರಾಶ್ಚ ಯೇ ತಥಾ ॥ ೧೩೮ ॥

ಉಕ್ತಾನಿ ಚಾಪ್ಯನುಕ್ತಾನಿ ವಿಜಯಾಯ ಭವಂತು ತೇ ।
ಲವಣಃ ಕ್ಷಾರತೋಯಶ್ಚ ಘೃತಮಂಡೋದಕಸ್ತಥಾ ॥ ೧೩೯ ॥

---

೧೩೩. ಸಾಂಖ್ಯ, ಯೋಗ, ಪಂಚರಾತ್ರ, ವೇದ, ಪಾಶುಪತ ಇವೈದಕ್ಕೂ ಕೃತಾನ್ನಪಂಚಕವೆಂಬ ಹೆಸರು ಸಲ್ಲುವುದು.

೧೩೪. ಮೇಲೆ ವಿವರಿಸಿದ ಸಕಲವಿದ್ಯೆಗಳೂ, ವಿವಿಧಶಾಸ್ತ್ರಗಳೂ, ಪಾಪಪ್ರಶಮನಿಯಾದ ಗಾಯತ್ರೀದೇವಿಯೂ, ದುರ್ಗಾದೇವಿಯೂ, ಮೃಡಾನಿಯೂ, ಗಾಂಧಾರಿಯೂ, ವಿದ್ಯೆಯೂ ಸಹ ನಿನಗೆ ವಿಜಯವನ್ನುಂಟುಮಾಡಲಿ.

೧೩೫-೧೪೧. ದೇವದಾನವರೂ, ಗಂಧರ್ವಯಕ್ಷರೂ, ರಾಕ್ಷಸಪನ್ನಗರೂ, ಋಷಿಗಳೂ. ಮನುಗಳೂ, ಗೋಗಳೂ, ದೇವಮಾತೃಗಳೂ, ದೇವಪತ್ನಿಯರೂ, ದ್ರುಮಗಳೂ ನಾಗರೂ, ದೈತ್ಯರೂ, ಅಪ್ಸರೋಗಣಗಳೂ, ಸಕಲ ಶಸ್ತ್ರಗಳೂ, ಸಕಲ ಶಾಸ್ತ್ರಗಳೂ, ಸಕಲ ರಾಜರೂ, ಸಕಲ ವಾಹನಗಳೂ, ಸಕಲೌಷಧ ರಸಗಳೂ, ಸಕಲವಿಧ

**ದಧಿಮಂಡೋದಕಶ್ಚೈವ ಸುರೋದಶ್ಚ ನಗಾಧಿಪ ।**
**ತಥೈವೇಕ್ಷುರಸೋದಶ್ಚ ತಥಾ ಸ್ವಾದೂದಕಶ್ಚ ಯಃ ॥ ೧೪೦ ॥**

**ಗರ್ಭೋದಶ್ಚ ಸ್ವಕೋಯೈಸ್ತ್ವಾಮಭಿಷಿಂಚಂತು ಪಾರ್ಥಿವ ।**
**ಚತ್ವಾರಸ್ಸಾಗರಾಶ್ಚೈವ ಸ್ವೇನ ತೋಯೇನ ಪಾರ್ಥಿವ ॥ ೧೪೧ ॥**

**ಸಮಾಗಮ್ಯಾಭಿಷಿಂಚಂತು ವಿಜಯಂ ಪ್ರದಿಶಂತು ತೇ ।**
**ಪುಷ್ಕರಶ್ಚ ಪ್ರಯಾಗಶ್ಚ ಪ್ರಭಾಸೋ ನೈಮಿಶಸ್ತಥಾ ॥ ೧೪೨ ॥**

**ತಥಾ ಬ್ರಹ್ಮಸರಃ ಪುಣ್ಯಂ ಗಯಾಶೀರ್ಷಂ ಚ ಪಾರ್ಥಿವ ।**
**ಕಾಲೋದಕೋ ನಂದಿಕುಂಡಃ ತಥೈವೋತ್ತರಮಾನಸಃ ॥ ೧೪೩ ॥**

**ಸ್ವರ್ಗಮಾರ್ಗಪ್ರದಶ್ಚೈವ ತಥಾ ಪಂಚನದಶ್ಚ ಯಃ ।**
**ಭೃಗುತೀರ್ಥಂ ಚೌಜಸಶ್ಚ ತಥೈವಾಮರಕಂಟಕಃ ॥ ೧೪೪ ॥**

**ಆಶ್ರಮಃ ಕಾಲಿಕಾಯಾಶ್ಚ ತೃಣಬಿನ್ದೋಸ್ತಥಾಶ್ರಮಃ ।**
**ಗೋಪತೀರ್ಥಂ ಚಾಪತೀರ್ಥಂ ವಿಮಲಃ ಸ್ವರ್ಗಏವ ಚ ॥ ೧೪೫ ॥**

---

ವಾದ ರತ್ನಗಳೂ, ಕಾಲಾವಯವಗಳೂ, ಸಮಸ್ತ ದೇವಸ್ಥಾನಗಳೂ, ಸಕಲ ಪುಣ್ಯಕ್ಷೇತ್ರಗಳೂ, ಸಕಲ ಪಕ್ಷಿಗಳೂ, ಅವುಗಳ ಚಿತ್ರವಿಚಿತ್ರ ಭೇದಗಳೂ, ಈಗ ಹೇಳಿ ಇರುವುವುಗಳೂ, ಈಗ ನಾನು ಹೇಳದೆ, ಬಿಟ್ಟುಹೋಗಿರುವುವುಗಳೂ, (ಸಕಲ ಸ್ಥಾವರ ಜಂಗಮ ವಸ್ತುಗಳೂ) ಸಹ ನಿನಗೆ ವಿಜಯವನ್ನುಂಟುಮಾಡಲಿ.

ಲವಣಸಮುದ್ರ, ಕ್ಷಾರತೋಯಸಮುದ್ರ, ಘೃತಮಂಡೋದಕಸಮುದ್ರ, ದಧಿಮಂಡೋದಕಸಮುದ್ರ, ಸುರೋದಸಮುದ್ರ, ಇಕ್ಷುರಸಸಮುದ್ರ, ಸ್ವಾದೂದಕ ಸಮುದ್ರ, ಗರ್ಭೋದಕಸಮುದ್ರಗಳೆಲ್ಲವೂ ಒಟ್ಟುಗೂಡಿ ತಮ್ಮ ತಮ್ಮ ಸಮುದ್ರದಲ್ಲಿರುವ ರಸಗಳಿಂದ ನಿನ್ನನ್ನಭಿಷೇಕಮಾಡಲಿ.

೧೪೨. ಚತುಸ್ಸಾಗರಗಳೂ ಈಗಿಂದೀಗಲೇ ಇಲ್ಲಿಗೆ ಬಂದು ತಮ್ಮ ತಮ್ಮ ಜಲಗಳಿಂದ ನಿನ್ನನ್ನು ಅಭಿಷೇಕಮಾಡಲಿ.

೧೪೩-೧೬೭. ಪುಷ್ಕರಕ್ಷೇತ್ರ, ಪ್ರಯಾಗಕ್ಷೇತ್ರ, ಪ್ರಭಾಸ, ನೈಮಿಷಾರಣ್ಯ, ಬ್ರಹ್ಮಸರೋವರ, ಪರಮಪುಣ್ಯಕರವಾದ ಗಯಾಕ್ಷೇತ್ರ, ಕಾಲೋದಕ ನಂದೀಕುಂಡ,

ಜಂಬೂಮಾರ್ಗಶ್ಚ ರಾಜೇಂದ್ರ ಪುಣ್ಯಸ್ತಂಡುಲಿಕಾಶ್ರಮಃ ।
ಕಪಿಲಸ್ಯ ತಥಾ ತೀರ್ಥಂ ತೀರ್ಥೇ ನಾಟಿಕಷಂಡಿಕೇ ॥ ೧೪೬ ॥

ಮಹಾಸರಸ್ತಥಾಽಗಸ್ತ್ಯಃ ಕುಮಾರೀ ತೀರ್ಥ ಏವ ಚ ।
ಗಂಗಾತೀರಃ ಕುಶಾವರ್ತೋ ಬಿಲ್ವಕೋ ನೀಲಪರ್ವತಃ ॥ ೧೪೭ ॥

ವರಾಹಪರ್ವತಶ್ಚೈವ ತೀರ್ಥಃ ಕನಖಲಸ್ತಥಾ ।
ಸ್ವರ್ಗಂಧಾ ವಸುಕುಂಭಾ ಚ ತಥಾ ಶಾಕಂಭರೀ ಚ ಯಾ ॥ ೧೪೮ ॥

ಭೃಗುತುಂಗಃ ಸಕುಬ್ಜಾಮ್ರಃ ಕಪಿಲಸ್ಯ ತಥಾಶ್ರಮಂ ।
ಚಮಸೋದ್ಭೇದನಃ ಪುಣ್ಯಸ್ತಥಾ ವಿನಶನಃ ಶುಭಃ ॥ ೧೪೯ ॥

ಅಜತುಂಗಶ್ಚ ಸೋಮಶ್ಚ ಅಜೋಗಂಧಶ್ಚ ಪಾರ್ಥಿವ ।
ಕಾಲಿಂಜರಶ್ಚ ಕೇದಾರೋ ರುದ್ರಕೋಟಿಸ್ತಥೈವ ಚ ॥ ೧೫೦ ॥

ಮಹಾಲಗ್ನಶ್ಚ ರಾಜೇಂದ್ರ ವದನಾಶ್ರಮ ಏವ ಚ ।
ನಂದಾ ಚ ಸೂರ್ಯತೀರ್ಥಂ ಚ ಸೋಮತೀರ್ಥಂ ಶತಕ್ರತೋಃ ॥ ೧೫೧ ॥

ಅಶ್ವಿನೋರ್ವರುಣಸ್ಯಾಪಿ ವಾಯೋರ್ವೈಶ್ರವಣಸ್ಯ ಚ ।
ಬ್ರಹ್ಮಣಶ್ಚೈವ ಶರ್ವಸ್ಯ ಯಮಸ್ಯ ಚ್ಯವನಸ್ಯ ಚ ॥ ೧೫೨ ॥

---

ಉತ್ತರಮಾನಸಕ್ಷೇತ್ರ, ಭೃಗುತೀರ್ಥ, ಓಜೋತೀರ್ಥ, ಅಮರಕಂಟಕಕ್ಷೇತ್ರ, ಕಾಳಿಕಾಶ್ರಮ, ತೃಣಬಿಂದು ಋಷಿಗಳ ಆಶ್ರಮ, ಗೋಪತೀರ್ಥ, ಚಾಪತೀರ್ಥ, ವಿಮಲತೀರ್ಥ, ಸ್ವರ್ಗತೀರ್ಥ, ಜಂಬೂಮಾರ್ಗ, ಪುಣ್ಯಕರವಾದ ತಂದುಲಿಕಾಶ್ರಮ, ಕಪಿಲತೀರ್ಥ, ವಾಟುಕಷಂಡಿಕಾ ತೀರ್ಥಗಳು, ಮಹಾಸರೋವರ, ಅಗಸ್ತ್ಯತೀರ್ಥ, ಕನ್ಯಾಕುಮಾರಿತೀರ್ಥ, ಗಂಗಾತೀರ, ಕುಶಾವರ್ತ, ಬಿಲ್ವಕ, ನೀಲಪರ್ವತ, ವರಾಹಪರ್ವತ ಕನಖಲತೀರ್ಥ, ಸ್ವರ್ಗಂಧಾತೀರ್ಥ, ವಶಕುಂಭಾತೀರ್ಥ, ಶಾಕಂಭರೀ ಮಹಾಕ್ಷೇತ್ರ (ಇದು ಬಿಜಾಪುರದ ಜಿಲ್ಲೆಯ ಬಾದಾಮಿಯಲ್ಲಿದೆ.) ಭೃಗು, ತುಂಗಕ್ಷೇತ್ರ ಸಕುಬ್ಜಾಮ್ರಕ್ಷೇತ್ರ, ಕಪಿಲಮಹರ್ಷಿಗಳ ಆಶ್ರಮ, ಚಮಸೋದ್ಭೇದನಕ್ಷೇತ್ರ, ಶುಭಕರವೂ ಪುಣ್ಯಪ್ರದವೂ ಆದ ವಿನಶನಕ್ಷೇತ್ರ,, ಅಜತುಂಗಕ್ಷೇತ್ರ, ಸೋಮಕ್ಷೇತ್ರ, ಅಜೋಗಂಧಕ್ಷೇತ್ರ, ಕಾಳಿಂಜರಮಹಾಗಿರಿ, ಕೇದಾರಕ್ಷೇತ್ರ, ರುದ್ರಕೋಟಿ, ಮಹಾಲಗ್ನಕ್ಷೇತ್ರ, ವದನಾಶ್ರಮ, ನಂದಾಕ್ಷೇತ್ರ, ಸೂರ್ಯತೀರ್ಥ, ಸೋಮತೀರ್ಥ, ಇಂದ್ರ

ವಿರೂಪಾಕ್ಷಸ್ಯ ಧರ್ಮಸ್ಯ ತಥಾ ಚಾಪ್ಸರಸಾಂ ನೃಪ ।
ಋಷೀಣಾಂ ಚ ವಸೂನಾಂ ಚ ಸಾಧ್ಯಾನಾಂ ಮರುತಾಂ ತಥಾ ॥ ೧೫೩ ॥

ಆದಿತ್ಯಾನಾಂ ಚ ರುದ್ರಾಣಾಂ ತಥಾ ಚಾಂಗಿರಸಾಂ ನೃಪ ।
ವಿಶ್ವೇದೇವಭೃಗೂಣಾಂ ಚ ಗಂಧರ್ವಾಣಾಂ, ಚ ಮಾನದ ॥ ೧೫೪ ॥

ಪ್ಲಕ್ಷಪ್ರಸ್ರವಣಶ್ಚೈವ ಸುಷೇಣಶ್ಚ ನರಾಧಿಪ ।
ಶಾಲಿಗ್ರಾಮಸರಶ್ಚೈವ ವಾರಾಹೋ ವಾಮನಸ್ತಥಾ ॥ ೧೫೫ ।

ಕಾಮಾಶ್ರಮ ಸ್ತ್ರಿಕೂಟಶ್ಚ ಚಿತ್ರಕೂಟಸ್ತಥೈವ ಚ ।
ಸಪ್ತರ್ಚಃ ಕ್ರತುಸಾರಶ್ಚ ತಥಾ ವಿಷ್ಣುಪದಂ ಸರಃ ॥ ೧೫೬ ॥

ಕಪಿಲಸ್ಯ ತಥಾ ತೀರ್ಥಂ ವಾಸುಕೇಸ್ತೀರ್ಥಮೇವ ಚ ।
ಸಿಂಧೂತ್ತಮಂ ತಪೋದಾನಂ ತಥಾ ಶೂರ್ಪಾಕರಃ ಶುಭಃ ॥ ೧೫೭ ॥

ಪೌಂಡೀರಕಶ್ಚ ರಾಜೇಂದ್ರ ಗಂಗಾಸಾಗರಸಂಗಮಃ ।
ಸಿಂಧುಸಾಗರಯೋಶ್ಚೈವ ಸಂಗಮಃ ಸುಮನೋಹರಃ ॥ ೧೫೮ ॥

ತಥಾ ಕುಂದಾವಸುಂಧಶ್ಚ ಮಾನಸಂ ಚ ಮಹತ್ಸರಃ ।
ತಥಾ ಬಿಂದುಸರಃ ಪುಣ್ಯಂ ಸರಶ್ಚಾ ಚ್ಛೋದಕಂ ತಥಾ ॥ ೧೫೯ ॥

---

ತೀರ್ಥ, ಅಶ್ವಿನೀತೀರ್ಥ, ವರುಣತೀರ್ಥ, ವಾಯುತೀರ್ಥ, ಕುಬೇರತೀರ್ಥ, ಬ್ರಹ್ಮ ತೀರ್ಥ, ಶರ್ವತೀರ್ಥ, ಯಮತೀರ್ಥ, ಚ್ಯವನತೀರ್ಥ, ವಿರೂಪಾಕ್ಷತೀರ್ಥ, ಧರ್ಮ ತೀರ್ಥ, ಅಪ್ಸರತೀರ್ಥ, ಸಕಲಋಷಿತೀರ್ಥ, ವಸುತೀರ್ಥ, ಸಾಧ್ಯತೀರ್ಥ, ಮರುತ್ತೀರ್ಥ, ಆದಿತ್ಯತೀರ್ಥ, ರುದ್ರತೀರ್ಥ, ಆಂಗೀರಸತೀರ್ಥ, ವಿಶ್ವೇದೇವತೀರ್ಥ, ಭೃಗು ತೀರ್ಥ, ಗಂಧರ್ವತೀರ್ಥ, ಪ್ಲಕ್ಷಪ್ರಸ್ರವಣ ಸುಷೇಣಾದಿತೀರ್ಥಗಳೂ, ಸಾಲಿಗ್ರಾಮ ತೀರ್ಥ, ಸರೋವರತೀರ್ಥ, ವಾರಾಹತೀರ್ಥ, ವಾಮನತೀರ್ಥ, ಕಾಮಾಶ್ರಮತೀರ್ಥ, ತ್ರಿಕೂಟತೀರ್ಥ, ಚಿತ್ರಕವಟತೀರ್ಥ, ಸಪ್ತರ್ಚತೀರ್ಥ, ಕ್ರತುಸಾರತೀರ್ಥ, ವಿಷ್ಣು ಪಾದಸರೋವರ, ಕಪಿಲತೀರ್ಥ, ವಾಸುಕೀತೀರ್ಥ, ಸಿಂಧೂತ್ತಮ, ತಪೋಕ್ಷೇತ್ರ, ದಾನತೀರ್ಥ, ಶುಭಕರವಾದ, ಶೂರ್ಪಾಕರ, ಪೌಂಡರೀಕಕ್ಷೇತ್ರ, ಗಂಗಾಸಾಗರಮಹಾ ಸಂಗಮ, ಮನೋಹರವಾದ ಸಿಂಧುಸಾಗರ, ಮಹಾಸಂಗಮತೀರ್ಥ, ಕುಂದಾ

**ಧರ್ಮಾರಣ್ಯಂ ಫಲ್ಗುತೀರ್ಥಂ ಸವಿಮುಕ್ತಂ ತಥೈವ ಚ ।**
**ಲೌಹಿತ್ಯಶ್ಚ ತಥಾ ಪುಣ್ಯೋ ಬದರೀ ಪಾವನಃ ಶಿವಃ ॥ ೧೬೦ ॥**

**ತೀರ್ಥಂ ಸಪ್ತಋಷೀಣಾಂಚ ವಹ್ನಿತೀರ್ಥಂ ಚ ಪಾರ್ಥಿವ ।**
**ವಸ್ತ್ರಾಪಥಸ್ತತೋ ಮೇಷಶ್ಛಾಗಲೇಶಶ್ಚ ಪಾರ್ಥಿವ ॥ ೧೬೧ ॥**

**ಪುಷ್ಪನ್ಯಾಸಸ್ಸಕಾಮೇಶಸ್ತೀರ್ಥೋ ಹಂಸಪದಸ್ತಥಾ ।**
**ಅಶ್ವಶೀರ್ಷಃ ಸಕೃಷ್ಣಾಖ್ಯೋ ಮಣಿಭದ್ರಸ್ತಥೈವ ಚ ॥ ೧೬೨ ॥**

**ದೇವಿಕಾ ಸಿಂಧುಮಾರ್ಗಶ್ಚ ಸ್ವರ್ಣಬಿಂದುಸ್ತಥೈವ ಚ ।**
**ಆಹಲ್ಯಕಸ್ತಥಾ ತೀರ್ಥಸ್ತೀರ್ಥಶ್ಚೈರಾವತಸ್ತಥಾ ॥ ೧೬೩ ॥**

**ಐರಾವತಿಸಮುದ್ಭೇದೇ ತೀರ್ಥೇ ಭೋಗಯಶಸ್ತಥಾ ।**
**ಕರವೀರಾಶ್ರಮಶ್ಚೈವ ನಾಗವೋದಾನಿಕಸ್ತಥಾ ॥ ೧೬೪ ॥**

**ಪಾಪಮೋಚನಿಕಶ್ಚೈವ ಋಣಮೋಚನಿಕಸ್ತಥಾ ।**
**ಉದ್ವೇಜನಸ್ತಥಾ ಪುಣ್ಯಃ ಪುಣ್ಯಶ್ಚ ಹರಿಶೇಶ್ವರಃ ॥ ೧೬೫ ॥**

**ದೇವಬ್ರಹ್ಮಸರಃ ಪುಣ್ಯಂ ಸರ್ಪಿರ್ದರ್ವೀ ಚ ಪಾರ್ಥಿವ ।**
**ಏತೇ ಚಾನ್ಯೇ ಚ ಬಹವಃ ಪುಣ್ಯಸಂಕೀರ್ತನಾಃ ಶುಭಾಃ ॥ ೧೬೬ ॥**

---

ವಸುಂಧತೀರ್ಥ, ಮಾನಸಮಹಾಸರೋವರ, ಬಿಂದುಸರೋವರ, ಪುಣ್ಯಕರವಾದ ಅಚ್ಛೋದಕಸರೋವರ, ಧರ್ಮಾರಣ್ಯ, ಫಲ್ಗುತೀರ್ಥ, ಸವಿಮುಕ್ತತೀರ್ಥ, ಲೋಹಿತ್ಯ, ಪುಣ್ಯಕರವಾದ ಬದರೀನಾರಾಯಣಕ್ಷೇತ್ರ, ಪರಮಮಂಗಳಕರವಾದ ಸಪ್ತಋಷಿ ತೀರ್ಥ, ವಹ್ನಿತೀರ್ಥ, ವಸ್ತ್ರಾಪಥತೀರ್ಥ, ಮೇಷಚ್ಛಾಗಲೇಶತೀರ್ಥ, ಪುಸ್ಪನ್ಯಾಸತೀರ್ಥ ಕಾಮೇಶತೀರ್ಥ, ಹಂಸಪಾದತೀರ್ಥ, ಐರಾವತತೀರ್ಥ, ಮತ್ತು ಐರಾವತಸಮುದ್ಭೇದವಾದ ನಾನಾ ತೀರ್ಥಗಳು, ಭೋಗಯಶಸ್ತೀರ್ಥ, ಕರವೀರಾಶ್ರಮ, ನಾಗವೋದಾನಿಕತೀರ್ಥ, ಪಾಪವಿಮೋಚನತೀರ್ಥ, ಋಣವಿಮೋಚನತೀರ್ಥ, ಪುಣ್ಯಕರವಾದ ಉದ್ವೇಜನತೀರ್ಥ, ಮಹಾಪುಣ್ಯಪ್ರದವಾದ ಹರಿಹರೇಶ್ವರತೀರ್ಥ, ಅತ್ಯಂತ ಪುಣ್ಯದಾಯಕವಾದ, ದೇವ, ಬ್ರಹ್ಮ, ಸರಸ್ತೀರ್ಥ, ಸರ್ಪಿತೀರ್ಥ, ದರ್ವೀತೀರ್ಥ, ಇವಿಷ್ಟೇ ಇಲ್ಲ. ಈ ಪುಣ್ಯಸಂಕೀರ್ತನತೀರ್ಥಕ್ಷೇತ್ರಗಳೂ, ಇನ್ನೂ ಪರಮಶುಭಕರವಾದ ಮಹಾ

ತೋಯೈಸ್ತ್ವಾಮಭಿಷಿಂಚಂತು ಸರ್ವಪಾತಕನಾಶನೈಃ ।
ಗಂಗಾ ಮಹಾನದೀ ಪುಣ್ಯಾ ಹ್ರಾದಿನೀ ಹ್ಲಾದಿನೀ ತಥಾ ॥ ೧೬೭ ॥

ಪಾವನೀ ಚ ತಥಾ ಸೀತಾ ಚಕ್ಷುಃ ಸಿಂಧುಶ್ಚ ನರ್ಮದಾ ।
ಸುಪ್ರಭಾ ಕಾತರಾಕ್ಷೀ ಚ ಶಿಥಿಲಾ ಮಾನಸೀ ಹ್ರದಾ ॥ ೧೬೮ ॥

ಸರಸ್ವತ್ಯೋಘನಾದಾ ಚ ಸುವೇಣುರ್ವಿಮಲೋದಕಾ ।
ಸಿಪ್ರಾ ಶೋಣಃ ಶತದ್ರುಶ್ಚ ಸರಯೂರ್ಗಂಡಕೀ ತಥಾ ॥ ೧೬೯ ॥

ಅಚ್ಛೋದಾ ಚ ವಿಪಾಶಾ ಚ ಚಂದ್ರಭಾಗಾ ಇರಾವತೀ ।
ವಿತಸ್ತಾ ದೇವಕೀ ರಂಭಾ ಸೀತಾ ದೇವಹ್ರದಾ ಶಿವಾ ॥ ೧೭೦ ॥

ತಥೈವೇಕ್ಷುಮತೀ ಪುಣ್ಯಾ ಕೌಶಿಕೀ ಯಮುನಾ ತಥಾ ।
ಗೋಮತೀ ಧೂತಪಾಪಾ ಚ ಬಾಹುದಾ ಚ ದೃಷದ್ವತೀ ॥ ೧೭೧ ॥

ನಿಃಶೀರಾ ಚ ತೃತೀಯಾ ಚ ಲೌಹಿತ್ಯಶ್ಚ ಮಹಾನದಃ ।
ವೇದಸ್ಮೃತಿರ್ವೇದಸಿನೀ ವೇತ್ರಘ್ನೀ ವರದಾ ತಥಾ ॥ ೧೭೨ ॥

ವರ್ಣಾ ಮಾ ಚಂದನಾ ಚೈವ ಬಹುನೀರಾ ಕುಮುದ್ವತೀ ।
ಪಾರಾ ಚರ್ಮಣ್ವತೀ ರೂಪಾ ವಿದಿಶಾ ವೇಣುವತ್ಯಪಿ ॥ ೧೭೩ ॥

---

ತೀರ್ಥಕ್ಷೇತ್ರಗಳೂ ಸಹ ಸಕಲಪಾತಕನಾಶಕಗಳಾದ ತಮ್ಮ ತಮ್ಮ ಪವಿತ್ರೋದಕಗಳನ್ನು ತೆಗೆದುಕೊಂಡು ಬಂದು ನಿನ್ನ ಶಿರಸ್ಸಿನ ಮೇಲೆ ಅಭಿಷೇಕಮಾಡಿ ಆಶೀರ್ವದಿಸಲಿ.

೧೬೮-೧೮೪. ಪುಣ್ಯಕರವಾದ ಮಹಾನದಿಯೆನಿಸಿದ ಗಂಗಾನದಿಯೂ, ಹ್ರಾದಿನೀ, ಹ್ಲಾದಿನೀ, ಪಾವನೀ, ಸೀತಾ, ಚಕ್ಷು, ಸಿಂಧು, ನರ್ಮದಾ, ಸುಪ್ರಭಾ, ಕಾತರಾಕ್ಷೀ, ಶಿಥಿಲಾ, ಮಾನಸೀ, ಹ್ರದಾ, ಸರಸ್ವತೀ, ಓಘಾ, ನಾದಾ, ವಿಮಲೋದಕವುಳ್ಳ ಸುವೇಣೀನದೀ, ಸಿಪ್ರಾ, ಶೋಣಾ, ಶತದ್ರೂ, ಸರಯೂ, ಗಂಡಕೀ, ಅಚ್ಛೋದಾ, ವಿಪಾಶಾ, ಚಂದ್ರಭಾಗಾ, ಇರಾವತೀ, ವಿತಸ್ತಾ, ದೇವಿಕಾ, ರಂಭಾ, ಸೀತಾ, ದೇವಹ್ರದಾ, ಶಿವಾ, ಇಕ್ಷುಮತೀ, ಕೌಶಿಕೀ, ಯಮುನಾ, ಗೋಮತೀ, ಧೂತಪಾಪಾ,

**ಅವಂತೀ ಚ ತಥಾ ಕುಂತೀ ಸುರಸಾ ಚ ಪಲಾಶಿನೀ ।**
**ಮಂದಾಕಿನೀ ದಶಾರ್ಣಾ ಚ ಚಿತ್ರಕೂಟಾ ದೃಷದ್ವತೀ ॥ ೧೭೪ ॥**

**ತಮಸಾ ಪಿಪ್ಪಲಾ ಸೇನೀ ಕರಮೋದಾ ಪಿಶಾಚಿಕಾ ।**
**ಚಿತ್ರೋಪಲಾ ಚಿತ್ರವರ್ಣಾ ಮಂಜುಲಾ ವಾಲುಕಾವತೀ ॥ ೧೭೫ ॥**

**ಶುಕ್ತಿಮತೀ ಸಿಲೀ ರಂಧ್ರಾ ಸಂಕುಣಾ ತ್ವಯುಕಾಸ್ತತಃ ।**
**ತಾಪೀ ಪಯೋಷ್ಣೀ ನಿರ್ವಿಂಧ್ಯಾ ಸಿತಾ ಚ ನಿಷಧಾವತೀ ॥ ೧೭೬ ॥**

**ವೇಣಾ ವೈತರಣೀ ಭೀಮಾ ಚರ್ಮಾ ರಾಮಾ ತಥಾ ಕುಹೂಃ ।**
**ತೋಯಾ ಚೈವ ಮಹಾಗೌರೀ ದುರ್ಗಾ ಮತುಶಿಲಾ ತಥಾ ॥ ೧೭೭ ॥**

**ಗೋದಾವರೀ ಭೀಮರಥೀ ಕೃಷ್ಣಾ ವೇಣಾ ಚ ಮಂಜುಲಾ ।**
**ತುಂಗಭದ್ರಾ ಸುಪ್ರಕಾರಾ ಬಾಹ್ಯಾ ಕಾವೇರಿರೇವ ಚ ॥ ೧೭೮ ॥**

**ಕೃತಮಾಲಾ ತಾಮ್ರಪರ್ಣೀ ಪುಷ್ಪಜಾ ಹ್ಯುತ್ಪಲಾವತೀ ।**
**ತ್ರಿಸಮಾ ಋಷಿಕುಲ್ಯಾ ಚ ಇಕ್ಷುಕಾ ತ್ರಿದಿವಾಲಯಾ ॥ ೧೭೯ ॥**

---

ಬಾಹುದಾ, ದೃಷದ್ವತೀ, ನಿಶ್ಚೀರಾ, ತೃತೀಯಾ, ಲೋಹಿತಾ, ವೇದಸ್ಮೃತಾ, ವೇದಸಿನೀ, ವೇತ್ರಘ್ನೀ, ವರದಾ, ವರ್ಣಾ, ಮಾ, ಚಂದನಾ, ಬಹುನೀರಾ, ಕುಮುದ್ವತಿ, ಪಾರಾ, ಚರ್ಮಣ್ವತೀ, ರೂಪಾ, ವಿದಿಶಾ, ವೇಣುವತಿ, ಅವಂತೀ, ಕುಂತೀ ಸುರಸಾ, ಪಲಾಶಿನೀ, ಮಂದಾಕಿನೀ, ದಶಾರ್ಣಾ, ಚಿತ್ರಕೂಟಾ, ದೃಷದ್ವತೀ, ತಮಸಾ, ಸಿಪ್ಪಲಾ, ಸೇನೀ, ಕರಮೋದಾ, ಪಿಶಾಚಿಕಾ, ಚಿತ್ರೋಪಲಾ, ಚಿತ್ರವರ್ಣಾ ಮಂಜುಲಾ, ವಾಲುಕಾವತೀ, ಶುಕ್ತಿಮತೀ ಸಿಲೀ, ರಂಧ್ರಾ, ಸಂಕುಣಾ, ಅಯಕಾ ತಾಪೀ, ಪಯೋಷ್ಣೀ, ನಿರ್ವಿಂಧ್ಯಾ, ಸಿತಾ, ನಿಷಧಾವತೀ, ವೇಣಾ, ವೈತರಣಿಕಾ ಭೀಮಾ, ಚರ್ಮಾ, ರಾಮಾ, ಕುಹೂ, ತೋಯಾ, ಮಹಾಗೌರೀ, ದುರ್ಗಾ, ಮತುಶಿಲಾ, ಗೋದಾವರೀ, ಭೀಮರಥೀ, ಕೃಷ್ಣಾ, ವೇಣೀ, ಮಂಜುಲಾ, ತುಂಗಭದ್ರಾ, ಸುಪ್ರಕಾರಾ, ಬಾಹ್ಯಾ, ಕಾವೇರೀ, ಕೃತಮಾಲಾ, ತಾಮ್ರಪರ್ಣೀ ಪುಷ್ಪಜಾ, ಉತ್ಪ

ಲಾಂಗೂಲಿನೀ ವಂಶಧರಾ ಸುಕುಮಾರಾ ಕುಲಾವತೀ ।
ಋಷಿಕಾ ಕರಿವೇಗಾ ಚ ಮಂದಗಾ ಮಂದವಾಹಿನೀ ॥ ೧೮೦ ॥

ಕೃಷೀ ದರ್ವೀ ದಯಾ ವ್ಯೋಮಾ ಪರೋಷ್ಣೀ ಕೋಲವಾಹಿನೀ ।
ಕಂಪನಾ ಚ ವಿಶಲ್ಯಾ ಚ ಕರತೋಯಾಂಶುವಾಹಿನೀ ॥ ೧೮೧ ॥

ತಾಮ್ರಾರುಣಾ ವೇತ್ರವತೀ ಗೋಮತೀ ಚಾಥ ನದ್ಯಪಿ ।
ಅದ್ರಿಣೀ ತ್ರಿಕಸಾ ಚೈವ ಸುಪ್ರಕಾರಾ ಹಿರಣ್ವತೀ ॥ ೧೮೨ ॥

ಆಪಗಾ ಚಾಲಕಾ ಭಾಸೀ ಸಂಧ್ಯಾ ಚ ಮಡವಾ ನದೀ ।
ನಂದಾ ಚಾಲಕನಂದಾ ಚ ಶುದ್ಧಾ ಚ ವಸುವಾಹಿನೀ ॥ ೧೮೩ ॥

ಏತಾಶ್ಚಾನ್ಯಾಶ್ಚ ರಾಜೇಂದ್ರ ಸದ್ಯಸ್ತ್ವಾಂ ವಿಮಲೋದಕಾಃ ।
ಸರ್ವಪಾಪಪ್ರಶಮನಾಸ್ಸರ್ವಲೋಕಸ್ಯ ಮಾತರಃ ॥ ೧೮೪ ॥

---

ಲಾವತೀ, ತ್ರಿಸಮಾ, ಋಷಿಕುಲ್ಯಾ, ಇಕ್ಷುಕಾ, ತ್ರಿದಿವಾಲಯಾ, ಲಾಂಗೂಲಿನೀ, ವಂಶಧರಾ, ಸುಕುಮಾರಾ, ಕುಲವತೀ, ಋಷಿಕಾ, ಕರಿವೇಗಾ, ಮಂದಗಾ, ಮಂದ ವಾಹಿನೀ, ಕೃಷೀ, ದರ್ವೀ, ದಯಾ, ವ್ಯೋಮಾ, ಪರೋಷ್ಣೀ, ಕೋಲವಾಹಿನೀ, ಕಂಪನಾ, ವಿಶಲ್ಯಾ, ಕರತೋಯಾ, ಅಂಶುವಾಹಿನೀ, ತಾಮ್ರರುಣಾ, ವೇತ್ರವತೀ, ಗೋಮತೀ, ಅದ್ರಿಣೀ, ತ್ರಿಕಷಾ, ಸುಪ್ರಕಾರಾ, ಹಿರಣ್ವತೀ, ಆಪಗಾ, ಅಲಕಾ, ಭಾಸೀ, ಸಂಧ್ಯಾ, ವಡವಾ, ನಂದಾ, ಅಲಕನಂದಾ, ಶುದ್ಧಾ, ವಸುವಾಹಿನೀ; ಇದ ರಂತೆ ಇನ್ನೂ ಎಷ್ಟೋ ಮಹಾನದನದೀ ಗುಂಪುಗಳೆಲ್ಲವೂ ತಮ್ಮ ತಮ್ಮಲ್ಲಿರುವ ಪರಮ ಪವಿತ್ರವಾದ, ವಿಮಲೋದಕಗಳನ್ನು ತೆಗೆದುಕೊಂಡು ಬಂದು ನಿನ್ನ ಶಿರಸ್ಸಿನ ಮೇಲೆ ಅಭಿಷೇಕಮಾಡಿ, ಆಶೀರ್ವದಿಸಲಯ್ಯಾ! ಮಹಾರಾಜ!! ಸರ್ವಪಾಪಪ್ರಶಮನಗ ಳಾದ ಸರ್ವಲೋಕದ ಮಾತೆಯರೆನಿಸಿದ ಮೇಲೆ ಬರೆದಿರುವ ಸಕಲ ನದೀಮಾತೃ ಗಳೂ ತಮ್ಮ ತಮ್ಮ ತೀರ್ಥಗಳನ್ನು ಕಲಶದಲ್ಲಿ ತುಂಬಿಕೊಂಡುಬಂದು ನಿನ್ನ ತಲೆಯ ಮೇಲೆ ಅಭಿಷೇಕಮಾಡಲಯ್ಯಾ! ಮಹಾರಾಜ!!

**ಸ್ವತೋಯ ಪೂರ್ಣೈಃ ಕಲಶೈರಭಿಷಿಂಚಂತು ಪಾರ್ಥಿವ।**
**ಏತೈರ್ಯಥೋಕ್ತೈರ್ನೃಪ ರಾಜರಾಜ್ಯೇ**
**ದತ್ತಾಭಿಷೇಕಃ ಪೃಥಿವೀಂ ಸಮಗ್ರಾಂ।**
**ಸಸಾಗರಾಂ ಭುಂಕ್ಷ್ವ ಚಿರಂ ಚ ಜೀವ**
**ಧರ್ಮೇ ಚ ತೇ ಬುದ್ಧಿರತೀವ ಚಾಸ್ತು** **॥ ೧೮೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಭಾರ್ಗವರಾಮಂ ಪ್ರತಿ ಪುಷ್ಕರಾಖ್ಯಾನೇ ಅಭಿಷೇಕಮಂತ್ರೋನಾಮ ದ್ವಾವಿಂಶತಿತಮೋಽಧ್ಯಾಯಃ**

---

೧೮೫. ಇದುವರೆಗೆ ಹೇಳಲ್ಪಟ್ಟ ಈ ಪುಣ್ಯೋದಕಗಳಿಂದ ಅಭಿಷಿಕ್ತನಾಗಿ, ಎಲೈ ರಾಜೇಂದ್ರನೇ! ಈ ಸಸಾಗರವಾದ ಸಮಗ್ರ ಭೂಮಂಡಲವನ್ನೂ ಬಹುಕಾಲ ಪರಿಪಾಲಿಸುತ್ತಾ ಭೋಗಿಸು. ಬಹುಕಾಲ ಈ ಭೂಮಿಯಲ್ಲಿ ಬದುಕಿರು. ಆದರೆ, ನೀನು ಬದುಕಿರುವವರಿಗೂ ಬಹಳವಾಗಿ ಧರ್ಮಮಾರ್ಗದಲ್ಲೇ ನಿನ್ನ ಬುದ್ಧಿಯು ನೆಲಸಿರಲಿ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರಸಂವಾದರೂಪವಾದ ಅಭಿಷೇಕಮಂತ್ರಗಳೆಂಬ ಹೆಸರಿನ ಇಪ್ಪತ್ತೆರಡನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ತ್ರಯೋವಿಂಶತಿತಮೋಽಧ್ಯಾಯಃ

### ಪುಷ್ಕರ ಉವಾಚ

**ಮಂತ್ರಾ ಯೇ ಕೀರ್ತಿತಾ ರಾಮ ಮಯ್ಯಾಽಸ್ಮಿಂಸ್ತವ ಭಾರ್ಗವ ।**
**ತೇಷಾಂ ಸಂಕೀರ್ತನಂ ಧನ್ಯಂ ಸರ್ವಪಾಪ ಪ್ರಣಾಶನಂ ॥ ೧ ॥**

**ಏತೇಷಾಂ ಕಲ್ಯಮುತ್ಥಾಯ ಯಃ ಕುರ್ಯಾತ್ಕೀರ್ತನಂ ನರಃ ।**
**ಸರ್ವ ಪಾಪವಿನಿರ್ಮುಕ್ತಃ ಸ್ವರ್ಗಲೋಕಮವಾಪ್ನುಯಾತ್ ॥ ೨ ॥**

---

### ಇಪ್ಪತ್ತಮೂರನೆಯ ಅಧ್ಯಾಯವು.

ಪುಷ್ಕರನು ಪುನಃ ಹೇಳುತ್ತಾನೆ :—ಎಲೈ ಪರಶುರಾಮನೇ ! ಕೇಳು. ಇದುವರೆವಿಗೆ ನಾನು ಮೇಲಿನ ಅಧ್ಯಾಯದಲ್ಲಿ ನಿನ್ನ ಸಂಗಡ ಯಾವಯಾವ ಅಭಿಷೇಕ ಮಂತ್ರಗಳನ್ನು ಹೇಳಿದೆನೋ, ಆ ಮಂತ್ರಗಳನ್ನು ಒಂದಾವರ್ತಿ ಯಾರು ಪಾರಾಯಣ (ಸಂಕೀರ್ತನ) ಮಾಡುವರೋ, ಅವರು ಸಕಲವಿಧಪಾಪಗಳನ್ನೂ ಕಳೆದುಕೊಂಡು ಧನ್ಯರಾಗುವರು.

೨. ಪ್ರತಿದಿನವೂ ಬೆಳಗ್ಗೆ ಎದ್ದೊಡನೆಯೇ ಯಾವನು ಈ ಮಂತ್ರವನ್ನು ಸಂಕೀರ್ತನಮಾಡುವನೋ, ಅವನು ತನ್ನ ಸಕಲದುರಿತರಾಶಿಗಳನ್ನೂ ಪರಿಹಾರಮಾಡಿ ಕೊಂಡವನಾಗಿ ಸ್ವರ್ಗಲೋಕವನ್ನು ಹೊಂದುತ್ತಾನೆ. (ಅಂದರೆ ಬಹುಕಾಲ ಪುಣ್ಯವಂತನಾಗಿ ಬದುಕಿದ್ದು ದೇಹಪಾತಾನಂತರದಲ್ಲಿ ಸ್ವರ್ಗಭೋಗವನ್ನನುಭವಿಸುತ್ತಾನೆಂದು ತಾತ್ಪರ್ಯ.)

**ತಿರ್ಯಗ್ಯೋನಿಂ ನ ಗಚ್ಛೇತ್ತು ನರಕಂ ಸಂಕರಾಣಿ ಚ ।**
**ನ ಚ ದುಃಖಂ ನ ಚ ಭಯಂ ಮರಣಂ ನ ಚ ಮುಹ್ಯತಿ　　॥ ೩ ॥**

**ಏತೇಷಾಂ ಚ ನಮಸ್ಕಾರಂ ಯಃ ಕುರ್ಯಾತ್ಪ್ರಯತೋ ನರಃ ।**
**ನತಸ್ಯ ತಿಷ್ಠತೇ ಪಾಪಂ ಅಬ್ಬಿಂದುರಿವ ಪುಷ್ಕರೇ　　॥ ೪ ॥**

**ಏತೇಷಾಂ ತರ್ಪಣಂ ಕೃತ್ವಾ ಸ್ನಾತಃ ಪ್ರಯತಮಾನಸಃ ।**
**ಮಹಾಪಾತಕಯುಕ್ತೋಽಪಿ ತ್ವಚೇವಾಹಿರ್ವಿಮುಚ್ಯತೇ　　॥ ೫ ॥**

**ಏತೇಷಾಂ ಪುಷ್ಪದಾನೇನ ಮಹತೀಂ ಶ್ರಿಯಮಶ್ನುತೇ ।**
**ಏತೇಷಾಂ ಚಾರ್ಘ್ಯದಾನೇನ ಪೂಜ್ಯೋ ಭವತಿ ಮಾನವಃ　　॥ ೬ ॥**

---

೩. ವಿಶಾಲವಾದ ಪುಷ್ಕರ (ಸಿಹಿನೀರಿನ ಸರೋವರ) ದಲ್ಲಿ ಒಂದುತೊಟ್ಟು ಉಪ್ಪುನೀರು ಬಿದ್ದರೆ ಹೇಗೆ ಸಿಹಿನೀರಿನೊಡನೆ ಬೆರೆದು ತಾನೂ ಸಿಹಿನೀರೇ ಆಗಿಬಿಡುವುದೋ, ಆ ಪ್ರಕಾರವಾಗಿ ಇದನ್ನು ಪಾರಾಯಣಮಾಡಿದವನ ದುರಿತಕೋಟಿಗಳೆಲ್ಲವೂ ಭಸ್ಮವಾಗಿ ಪರಮಾತ್ಮನೊಡನೆ ಪವಿತ್ರಸಂಬಂಧವನ್ನು ಹೊಂದುತ್ತಾನೆ.

೪. ಯಾರು ಈ ಅಧ್ಯಾಯವನ್ನು ಪಾರಾಯಣಮಾಡಿ ನಮಸ್ಕಾರವನ್ನು ಮಾಡುತ್ತಾರೋ, ಅವರು ಎಂದೆಂದಿಗೂ ಹೀನಜನ್ಮವನ್ನು ಹೊಂದುವುದೇ ಇಲ್ಲ. ನರಕದರ್ಶನವೂ ಕೂಡ ಅವರಿಗಾಗುವಂತಿಲ್ಲ. ಸಂಕರಜನ್ಮಗಳನ್ನು ಅವರು ಹೊಂದುವುದಿಲ್ಲ. ಅಂತಹ ಮಹಾತ್ಮರಿಗೆ ಭಯವೂ ಇಲ್ಲ. ಯಾವ ದುಃಖವೂ ಇಲ್ಲ. ಮರಣಭಯವಂತೂ ಇಲ್ಲವೇ ಇಲ್ಲ.

೫. ಯಾರು ಸ್ನಾನಮಾಡಿ, ಶುಚಿರ್ಭೂತರಾಗಿ ಈ ಮಂತ್ರಗಳನ್ನು ಹೇಳಿಕೊಂಡು ಆಯಾಯದೇವತೆಗಳಿಗೆ ಜಲತರ್ಪಣವನ್ನು ಮಾಡುವರೋ, ಅಂಥವರು ಮಹಾಪಾಪಿಷ್ಠರಾದಾಗ್ಯೂ ಪರೆಬಿಟ್ಟ ಹಾವಿನಂತೆ ಸಕಲಕಲ್ಮಷಗಳನ್ನೂ ಕಳಚಿಕೊಂಡುಬಿಡುತ್ತಾರೆ.

೬. ಯಾರೀ ಅಧ್ಯಾಯವನ್ನು ಪಾರಾಯಣಮಾಡಿ ಆ ಮಂತ್ರಗಳಿಗೆ ಪುಷ್ಪವನ್ನು ಸಮರ್ಪಿಸುವರೋ, ಅವರು ಮಹತ್ತಾದ ಐಶ್ವರ್ಯವನ್ನು ಹೊಂದುತ್ತಾರೆ. ಮತ್ತದಾರೀ ಮಂತ್ರಗಳಿಗೆ ಅರ್ಘ್ಯಪ್ರದಾನಮಾಡುವರೋ ಅವರು ಲೋಕಪೂಜ್ಯರಾಗುತ್ತಾರೆ.

ಏತೇಷಾಂ ದೀಪದಾನೇನ ಭ್ರಾಜಂತೇ ಚಂದ್ರವದ್ದಿವಿ ।
ಏತೇಷಾಂ ಆಹುತಿಂ ದತ್ವಾ ಕಾಮಾನಾಪ್ನೋತಿ ಪುಷ್ಕಲಾನ್ ॥ ೭ ॥

ನೈವೇದ್ಯಂ ಚ ಬಲಿಂ ದತ್ವಾ ಭೋಗಾನ್ಪ್ರಾಪ್ನೋತ್ಯನುತ್ತಮಾನ್ ।
ಏತಾನುದ್ದಿಶ್ಯ ವಿಪ್ರೇಷು ದತ್ವಾ ಭಾರ್ಗವ ಭೋಜನಂ ॥ ೮ ॥

ಸಂತರ್ಪ್ಯ ದಕ್ಷಿಣಾಭಿಶ್ಚ ತ್ರಿದಿವಂ ಪ್ರಾಪ್ನುಯಾಚ್ಚಿರಂ ।
ಅಭಿಷೇಕದಿನೇ ರಾಜ್ಞಾಂ ಪುಷ್ಪಸ್ನಾನೇ ತಥೈವ ಚ ॥ ೯ ॥

---

೭. ಈ ಮಂತ್ರಪಾರಾಯಣ ಮಾಡಿ ಪೂಜಿಸಿ ಯಾರು ದೇವರಮುಂದೆ ನೀರಾಜನ (ದೀಪದಾನ) ಮಾಡುವರೋ, ಅವರು ಆಕಾಶದಲ್ಲಿ ಬೆಳಗುವ ಚಂದ್ರನಂತೆ ಲೋಕದಲ್ಲಿ ಶುಭ್ರವಾದ ಕೀರ್ತಿ (ಕಾಂತಿ) ಯನ್ನು ಹೊಂದುತ್ತಾರೆ. ಈ ಎಲ್ಲ ಮಂತ್ರಗಳನ್ನೂ ಹೇಳಿಕೊಂಡು ಒಂದೊಂದು ಹೋಮವನ್ನು ಅಗ್ನಿಯಲ್ಲಿ (ಅಗ್ನಿ ಮುಖ ಪೂರ್ವಕವಾಗಿ) ಮಾಡಿದರೆ, ಅಂತಹ ಮಾನವನು ತಾನು ಕೋರಿಕೊಂಡ ಬಯಕೆಗಳೆಲ್ಲವನ್ನೂ ಪುಷ್ಕಳವಾಗಿ ಹೊಂದುತ್ತಾನೆ.

೮. ಮತ್ತು ನೈವೇದ್ಯವನ್ನೂ ಬಲಿಹರಣವನ್ನೂ ಯಾರು ಈ ಮಂತ್ರಗಳಿ ಗೋಸ್ಕರ ಮಾಡುವರೋ, ಅವರು ಅತ್ಯುತ್ತಮವಾದ ಭೋಗಗಳನ್ನು ಹೊಂದು ವರು.

೯. ಯಾರು ಈ ಮಂತ್ರೋಕ್ತದೇವತೆಗಳನ್ನುದ್ದೇಶಮಾಡಿಕೊಂಡು ಯಥೋ ಚಿತವಾಗಿ, ಯಥಾಶಕ್ತಿಯಾಗಿ ಬ್ರಾಹ್ಮಣಸಮಾರಾಧನೆಯನ್ನು ಮಾಡುವರೋ ಮತ್ತು ಊಟಮಾಡಿದ ಬ್ರಾಹ್ಮಣರಿಗೆ ಯಥಾಶಕ್ತಿಯಾಗಿ ದಕ್ಷಿಣೆಯನ್ನು ಕೊಡು ವರೋ, ಅಂಥವರು ಬಹುಕಾಲ ಸ್ವರ್ಗದಲ್ಲಿ ವಾಸಮಾಡುವರಲ್ಲದೆ, ಭೂಮಿಯಲ್ಲಿ ಮರಳಿ ಹುಟ್ಟಿದಾಗ ಅತ್ಯುತ್ತಮ ಜನ್ಮದಲ್ಲಿಯೇ ಜನಿಸುವರು.

**ತಥಾ ಸಂವತ್ಸರಗ್ರಂಥೌ ಸರ್ವೇ ಪೂಜ್ಯಾ ಹಿತೈಷಿಣಾ ।**
**ಯಾನಿ ತೀರ್ಥಾನಿ ಚೋಕ್ತಾನಿ ಸರಿತಶ್ಚ ಸಮಾಸತಃ ॥ ೧೦ ॥**

**ತೇಷಾಂ ಗಮೇನ ಪೂಜ್ಯಂತೇ ಯೇಽಪಿ ಪಾತಕಿನೋ ಜನಾಃ ।**
**ಸ್ನಾನಂ ಮಹಾಫಲಂ ತೇಷಾಂ ತಪಃ ಶ್ರಾದ್ಧಕ್ರಿಯಾಸ್ತಥಾ ॥ ೧೧ ॥**

**ದಾನಂ ಬಹುಫಲಂ ಪ್ರೋಕ್ತಂ ದರ್ಶನಂ ಪಾಪನಾಶನಂ ।**
**ಕೀರ್ತನಂ ಭಾರ್ಗವಶ್ರೇಷ್ಠ ನಮೇ ಚಾಸ್ತಿ ವಿಚಾರಣಾ ॥ ೧೨ ॥**

---

೧೦. ಮಹಾರಾಜರ ಪಟ್ಟಾಭಿಷೇಕದ ದಿವಸ ಮತ್ತು ಪುಷ್ಪಸ್ನಾನಮಾಡುವ ಸಮಯಗಳಲ್ಲಿ ಮಹಾರಾಜನಿಗೆ ಹಿತವನ್ನು-ಕೋರುವ ಸಮಸ್ತಜನಗಳೂ ಕೂಡಿ, ಜೋಯಿಸರ ಬಳಿ ದೊರೆಯುವ ಈ ಅಭಿಷೇಕವಿಧಿಯನ್ನು ಬರೆದಿರುವ ಗ್ರಂಥವನ್ನು ಪೂಜೆಮಾಡಬೇಕು.

೧೧. ಈ ಉಪರಿಪ್ರೋಕ್ತಾಭೀಷೇಕಾಧ್ಯಾಯದಲ್ಲಿ ವಿವರಿಸಿರುವ ಯಾವ ತೀರ್ಥಗಳೂ, ಯಾವ ನದಿಗಳೂ ಉಂಟೋ ಅವುಗಳಿರುವ ಸ್ಥಳಗಳಿಗೆ ಯಾರು ತೀರ್ಥಯಾತ್ರಾಕ್ರಮದಿಂದ ಪ್ರಯಾಣಮಾಡಿಕೊಂಡು ಹೋಗಿ ಅಲ್ಲಲ್ಲಿ ಸ್ನಾನಮಾಡುವರೋ, ಅವರು ಎಂತಹ ಮಹಾಪಾಪಿಷ್ಠರಾಗಿದ್ದಾಗ್ಯೂ ಅವರು ಪುಣ್ಯವಶರಾಗಿ ಪೂಜ್ಯರೆನಿಸಲು ಅಡ್ಡಿಯಿಲ್ಲಾ.

೧೨. ಮತ್ತು ಆರೀತಿ ತೀರ್ಥಯಾತ್ರೆ ಹೋಗುವುದಾದರೆ ಅಂಥವರು ಆಯಾಯ ತೀರ್ಥಕ್ಷೇತ್ರಗಳಲ್ಲಿ ನಿಂತು ಸ್ನಾನಾನಂತರದೊಳ್ ತೀರ್ಥಶ್ರಾದ್ಧಾದಿ ಕ್ರಿಯೆಗಳನ್ನೂ, ದಾನಗಳನ್ನೂ ಮಾಡಿದರೆ ಬಹಳ ಫಲವುಂಟಯ್ಯಾ! ಪರಶುರಾಮ !! ಮತ್ತೂ ಕೇಳು ! ಆ ಕ್ಷೇತ್ರಗಳ ದರ್ಶನಮಾತ್ರದಿಂದಲೇ ಪಾಪಪರಿಹಾರವಾಗುವುದೆಂದರಿಯಯ್ಯಾ ! ಇಂತಹುದರಲ್ಲಿ ಈ ತೀರ್ಥಕ್ಷೇತ್ರಗಳನ್ನು ಕೀರ್ತನ (ಪಾರಾಯಣ) ಮಾಡುವುದರಿಂದಾಗುವ ಮಹಾಫಲವನ್ನೆಷ್ಟೆಂದು ವಿವರಿಸಲಯ್ಯಾ ! ಭಾರ್ಗವರಾಮ !!

**ತೀರ್ಥೇಷ್ವ ಥೈತೇಷು ಭೃಗುಪ್ರಧಾನ**
**ಸ್ನಾತಾ ನರಾ ಯಾಂತಿ ನರೇಂದ್ರ ಸದ್ಯಃ ।**
**ತೀರ್ಥಾನಿ ಗಮ್ಯಾನಿ ತತಃ ಪ್ರಯತ್ನಾತ್**
**ಪುಣ್ಯಾಶ್ಚ ಸರ್ವಾಸ್ಸರಿತಶ್ಚ ರಾಮ ॥ ೧೩ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ತೀರ್ಥಫಲ ವರ್ಣನೋ ನಾಮ ತ್ರಯೋವಿಂಶತಿತಮೋಽಧ್ಯಾಯಃ**

---

೧೩. ಎಲೈ ಪರಶುರಾಮನೇ! ಕೇಳು. ಈರೀತಿ ನಾನು ಹೇಳಿರುವ ಮಹಾ ಪುಣ್ಯಕರಗಳಾದ ತೀರ್ಥಗಳಲ್ಲಿ ಸ್ನಾನಮಾಡಿದ ಮನುಷ್ಯರು ತತ್‌ಕ್ಷಣದಲ್ಲಿಯೇ ಸಕಲ ಪಾಪಗಳನ್ನೂ ನೀಗಲಾಡಿಕೊಳ್ಳುವರಲ್ಲದೆ ಮಹಾಪುಣ್ಯವಂತರಾಗುವರು. ಆದ ಕಾರಣದಿಂದಲೇ ಅತ್ಯಂತ ಪ್ರಯತ್ನಪಟ್ಟಾದರೂ ಈ ಸಕಲ ತೀರ್ಥಕ್ಷೇತ್ರಗಳಿಗೂ ಹೋಗಿ ಬರುವುದೊಳ್ಳೆಯದಯ್ಯಾ! ಹೀಗೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಮಹಾಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ತೀರ್ಥಫಲವರ್ಣನೆಯೆಂಬ ಹೆಸರಿನ ಇಪ್ಪತ್ತಮೂರನೆಯ ಅಧ್ಯಾಯ ಮುಗಿಯಿತು.



॥ ಶ್ರೀ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಚತುರ್ವಿಂಶತಿತಮೋಽಧ್ಯಾಯಃ

---

ರಾಮ ಉವಾಚ

**ರಾಜ್ಞೋಽಭಿಷಿಕ್ತಮಾತ್ರಸ್ಯ ಕಿನ್ನು ಕೃತ್ಯತಮಂ ಭವೇತ್ ।**
**ಏತನ್ಮೇ ಸರ್ವಮಾಚಕ್ಷ್ವ ಸರ್ವಂ ವೇತ್ತಿ ಯತೋ ಭವಾನ್ ॥ ೧ ॥**

ಪುಷ್ಕರ ಉವಾಚ

**ಅಭಿಷೇಕಾರ್ದ್ರಶಿರಸಾ ರಾಜ್ಞಾ ರಾಜೀವಲೋಚನ ।**
**ಸಹಾಯವರಣಂ ಕಾರ್ಯಂ ತತ್ರ ರಾಜ್ಯಂ ಪ್ರತಿಷ್ಠಿತಂ ॥ ೨ ॥**

---

## ಇಪ್ಪತ್ತನಾಲ್ಕನೆಯ ಅಧ್ಯಾಯವು

೧. ಪರಶುರಾಮನು ಪುಷ್ಕರನನ್ನು ಕುರಿತು ಪ್ರಶ್ನೆಮಾಡುತ್ತಾನೆ:—ಮಹಾರಾಜನು ಪಟ್ಟಾಭಿಷಿಕ್ತನಾಗಿ ಸಿಂಹಾಸನಾರೂಢನಾದ ಬಳಿಕ ಮುಂದೇನು ಮಾಡಬೇಕೆಂಬ ಸಂಗತಿಯನ್ನು ನನಗೆ ವಿಸ್ತಾರವಾಗಿ ಹೇಳಬೇಕು. ನೀನು ಎಲ್ಲವನ್ನೂ ತಿಳಿದ ಮಹಾನುಭಾವನಾದ್ದರಿಂದ ಇದನ್ನು ಕೇಳಿರುತ್ತೇನೆ.

೨. ಪುಷ್ಕರನು ಅದಕ್ಕೆ ಉತ್ತರವನ್ನು ಹೇಳುತ್ತಾನೆ:--ಅಭಿಷೇಕವಾದೊಡನೆ ಒದ್ದೆಯಾದ-ತಲೆಯಲ್ಲಿದ್ದಾಗಲೇ-(ಮೈ ಒರಸಿಕೊಳ್ಳುವುದಕ್ಕಿಂತ ಮುಂಚೆ) ಮಹಾರಾಜನಾದವನು ರಾಜ್ಯಾಡಳಿತಕ್ಕೆ ತಕ್ಕ ಅಧಿಕಾರಿಗಳನ್ನು ವರಣ-(ಗೊತ್ತುಮಾಡು) ದ ಮೂಲಕ ಆರಿಸಬೇಕು. ಅವರಲ್ಲಿ ರಾಜ್ಯದ ಆಡಳಿತವನ್ನು ನಿಲ್ಲಿಸಬೇಕು.

**ಯದಪ್ಯಲ್ಪತರಂ ಕರ್ಮ ತದಪ್ಯೇಕೇನ ದುಷ್ಕರಂ ।**
**ಪುರುಷೇಣಾಸಹಾಯೇನ ಕಿನ್ನು ರಾಜ್ಯಂ ಮಹತ್ಪದಂ ॥ ೩ ॥**

**ತಸ್ಮಾತ್ಸಹಾಯಾನ್ವರಯೇತ್ಕುಲೀನಾನ್ನೃಪತಿಃ ಸ್ವಯಂ ।**
**ಶೂರಾನುತ್ತಮಜಾತೀಯಾನ್ಬಲಯುಕ್ತಾ ನ್ಶ್ರುತಾನ್ವಿತಾನ್ ॥ ೪ ॥**

**ರೂಪಸತ್ತ್ವಗುಣೌದಾರ್ಯಸಂಯುಕ್ತಾನ್‌ಕ್ಷಮಯಾ ಯುತಾನ್ ।**
**ಕ್ಲೇಶಕ್ಷಮಾನ್ಮಹೋತ್ಸಾಹಾನ್ಧರ್ಮಜ್ಞಾಂಶ್ಚ ಪ್ರಿಯಂವದಾನ್ ॥ ೫ ॥**

---

೩. ಯಾವುದೇ ಒಂದು ಸಣ್ಣ ಕೆಲಸವೇ ಆಗಲಿ, ಅದು ಒಬ್ಬನೇ ಅಸಹಾಯಕನಾದ ಮನುಷ್ಯನಿಂದ ನಿರ್ವಹಿಸಲು ಸಾಧ್ಯವಿಲ್ಲದಿರುವಾಗ, ಮಹತ್ತಾದ ಆಡಳಿತದಿಂದೊಡಗೂಡಿದ ರಾಜ್ಯಭಾರದ ವಿಷಯದಲ್ಲಿ ಹೇಳಬೇಕಾದುದೇನಿದೆ?

೪. ಆದುದರಿಂದ ಮಹಾರಾಜನು ತನ್ನ ಸಹಾಯಕ್ಕೋಸ್ಕರವಾಗಿ ಒಳ್ಳೇ ಉತ್ತಮವಂಶೋತ್ಪನ್ನರಾದ, ಶೂರರಾದ, ಉತ್ತಮಜಾತಿಯಲ್ಲಿ ಹುಟ್ಟಿದವರಾದ, ಬಲಯುಕ್ತರಾದ, ವಿದ್ಯಾವಂತರಾದ ಅಧಿಕಾರಿಗಳನ್ನೇ ನಿಷ್ಕರ್ಷೆ (ವರಣ) ಮಾಡಬೇಕು.

೫. ಮತ್ತು ಮಹಾರಾಜನ ಹತ್ತಿರದಲ್ಲಿರಬೇಕಾದ ಆ ಅಧಿಕಾರಿಗಳ ಲಕ್ಷಣವನ್ನು ಇನ್ನೂ ಸ್ವಲ್ಪ ಹೇಳುತ್ತೇನೆ, ಕೇಳು. ಅವರು ಹಿತೋಪದೇಶ ಮಾಡುವಂತಹವರಾಗಿರಬೇಕು. ಪ್ರಾಜ್ಞರಾಗಿಯೂ, ಸ್ವಾಮಿಭಕ್ತರಾಗಿಯೂ, ಒಳ್ಳೇ ಯಶಸ್ಸಂಪಾದಿಸಲು ಹಾತೊರೆಯುತ್ತಿರುವವರಾಗಿಯೂ ಇರಬೇಕು. ಈ ವಿಧವಾದ ಸಹಾಯಾಧಿಕಾರಿಗಳನ್ನು ಮಹಾರಾಜನು ಶುಭಕಾರ್ಯಗಳಿಗೋಸ್ಕರ ಗೊತ್ತುಮಾಡಿಕೊಳ್ಳಬೇಕು.

ಹಿತೋಪದೇಶಿಕಾನ್ಪ್ರಾಜ್ಞಾನ್ಸ್ವಾಮಿಭಕ್ತಾನ್ಯಶೋರ್ಥಿನಃ ।
ಏವಂ ವಿಧಾನ್ಸಹಾಯಾಂಸ್ತು ಶುಭಕರ್ಮಣಿ ಯೋಜಯೇತ್ ॥ ೬ ॥

ಗುಣಹೀನಾನಪಿ ತಥಾ ವಿಜ್ಞಾಯ ನೃಪತಿಃ ಸ್ವಯಂ ।
ಕರ್ಮಸ್ವೇವನಿಯುಂಜೀತ ಯಥಾಯೋಗ್ಯೇಷು ಭಾರ್ಗವ ॥ ೭ ॥

ಕುಲೀನಾಃ ಶೀಲಸಂಪನ್ನಾ ಧನುರ್ವೇದವಿಶಾರದಾಃ ।
ಹಸ್ತಿಶಿಕ್ಷಾಶ್ವಶಿಕ್ಷಾಸು ಕುಶಲಾಶ್ಶ್ಲಕ್ಷ್ಣಭಾಷಿತೈಃ ॥ ೮ ॥

ನಿಮಿತ್ತೇ ಶಕುನಜ್ಞಾನೇ ವಿತ್ತನ್ವೈದ್ಯ ಚಿಕಿತ್ಸಕೇ ।
ಪುರುಷಾನ್ತರವಿಜ್ಞಾನೇ ಷಾಡ್ಗುಣ್ಯೇನ ವಿನಿಶ್ಚಿತಾಃ ॥ ೯ ॥

---

೬. ಆರೀತಿ ಇರಬೇಕಾದ ಅರಮನೆಯ ಅಧಿಕಾರಿಗಳು ರೂಪವಂತರಾಗಿಯೂ, ಸಾತ್ವಿಕಗುಣಗಳಿಂದೊಡಗೂಡಿದವರಾಗಿಯೂ, ಉದಾರವಾದ ಸ್ವಭಾವವುಳ್ಳವರಾಗಿಯೂ, ಬಹಳ ತಾಳ್ಮೆಯುಳ್ಳವರಾಗಿಯೂ, ಕ್ಲೇಶವನ್ನು ಸಹಿಸತಕ್ಕ ಶಕ್ತಿಯುಳ್ಳವರಾಗಿಯೂ, ಬಹಳ ಉತ್ಸಾಹದಿಂದ ಕೆಲಸಮಾಡತಕ್ಕವರಾಗಿಯೂ, ಧರ್ಮಜ್ಞರಾಗಿಯೂ, ಜನರ ಸಂಗಡ ಒಳ್ಳೇ ಮಾತುಗಳನ್ನಾಡುವವರಾಗಿಯೂ ಇರಬೇಕು.

೭. ಅಥವಾ ಮೇಲ್ಕಂಡ ಗುಣಗಳಲ್ಲಿ ಸ್ವಲ್ಪ ಕಡಿಮೆಯುವರಾದಾಗ್ಯೂ ಅಂತಹವರನ್ನು ಬಿಟ್ಟುಬಿಡಬಾರದು. ಅಂಥವರು ಯಾವ ಕೆಲಸಕ್ಕೆ ಅರ್ಹರಾಗಿರುವರೋ ಎಂಬ ವಿಚಾರವನ್ನು ಚೆನ್ನಾಗಿ ಪರೀಕ್ಷಿಸಿ, ಅವರ ಯೋಗ್ಯತೆಗೆ ತಕ್ಕ ಕೆಲಸವನ್ನು ಕೊಡಿಸಬೇಕು.

೮-೧೧. ಇನ್ನು ಸೇನಾಧಿಪತಿಯಾಗಿರುವವರ ಲಕ್ಷಣವನ್ನು ಹೇಳುತ್ತೇನೆ, ಕೇಳು. ಅವರು ಉತ್ತಮಕುಲಸಂಜಾತರಾಗಿರಬೇಕು. ಶೀಲಸಂಪನ್ನರಾಗಿರಬೇಕು. ಧನುರ್ವೇದವನ್ನು ಚೆನ್ನಾಗಿ ತಿಳಿದವರಾಗಿರಬೇಕು. ಆನೆಕುದುರೆಗಳ ಲಕ್ಷಣವನ್ನು ಚೆನ್ನಾಗಿ ತಿಳಿದು, ಅವುಗಳನ್ನು ಚೆನ್ನಾಗಿ ಶಿಕ್ಷಿಸಿ, ಪಳಗಿಸತಕ್ಕ ಶಕ್ತಿಯನ್ನು ಹೊಂದಿರಬೇಕು. ನಿಮಿತ್ತ, ಶಕುನಜ್ಞಾನ, ವಿತ್ತ, ವೈದ್ಯಚಿಕಿತ್ಸಕಾದಿ ಶಾಸ್ತ್ರಗಳಲ್ಲಿ ಅವರಿಗೆ ಪರಿಚಯವಿರಬೇಕು. ಮತ್ತೊಬ್ಬರ ಮನಸ್ಸಿನಲ್ಲಿರುವ ಭಾವವನ್ನು ಊಹಿಸಿ ತಿಳಿದುಕೊಳ್ಳುವ ಶಕ್ತಿ ಇರಬೇಕು. ಷಡ್ಗುಣವಂತರಾಗಿರಬೇಕು. ಉಪಕಾರ

**ಕೃತಜ್ಞಾಃ ಕರ್ಮಣಾಂ ಶೂರಾಸ್ತಥಾ ಕ್ಲೇಶಸಹಾ ಋಜುಃ ।**
**ವ್ಯೂಹತತ್ತ್ವವಿಧಾನಜ್ಞಃ ಫಲ್ಗುಸಾರವಿಶೇಷವಿತ್ ॥ ೧೦ ॥**

**ರಾಜ್ಞಾಂ ಸೇನಾಪತಿಃ ಕಾರ್ಯೋ ಬ್ರಾಹ್ಮಣಃ ಕ್ಷತ್ರಿಯೋಥವಾ ।**
**ಪ್ರಾಂಶುಃ ಸುರೂಪೋ ದಕ್ಷಶ್ಚ ಪ್ರಿಯವಾದೀ ನ ಚೋದ್ಧತಃ ॥ ೧೧ ॥**

**ಚಿತ್ತಗ್ರಾಹಶ್ಚ ಸರ್ವೇಷಾಂ ಪ್ರತೀಹಾರೋ ವಿಧೀಯತೇ ।**
**ಯಥೋಕ್ತವಾದೀ ಧೂರ್ತಸ್ಸ್ಯಾದ್ದೇಶಭಾಷಾವಿಶಾರದಃ ॥ ೧೨ ॥**

**ಶಾಬ್ದಃ ಕ್ಲೇಶಸಹೋ ವಾಗ್ಮೀ ದೇಶಕಾಲ ವಿಭಾಷಿತಾ ।**
**ವಿಜ್ಞಾಯ ದೇಶಂ ಕಾಲಂ ವಾ ಹಿತಂ ಯತ್ಸ್ಯಾನ್ಮಹೀಕ್ಷಿತಃ ॥ ೧೩ ॥**

---

ಮಾಡಿದವರ ವಿಷಯದಲ್ಲಿ ಕೃತಜ್ಞತೆಯುಳ್ಳವರಾಗಿರಬೇಕು. ಕೆಲಸಮಾಡುವುದರಲ್ಲಿ ಶೂರರಾಗಿರಬೇಕು ಕ್ಲೇಶಸಹಿಷ್ಣುಗಳಾಗಿಯೂ, ಋಜುಮಾರ್ಗತತ್ಪರರಾಗಿಯೂ ಇರಬೇಕು. ಸೇನಾವ್ಯೂಹತತ್ವವಿಧಾನವನ್ನು ತಿಳಿದವರಾಗಿರಬೇಕು. ಇಂತಹ ಲಕ್ಷಣಗಳಿಂದೊಡಗೂಡಿದ ಸೈನ್ಯಾಧಿಪತಿಯು (ಗಳು) ಬ್ರಾಹ್ಮಣ ಅಥವಾ ಕ್ಷತ್ರಿಯಜಾತಿಯವರಾಗಿಯೇ ಇರಬೇಕು. ಈ ಸೈನ್ಯಾಧಿಪತಿಗಳು ಎತ್ತರವಾಗಿಯೂ, ಸುಂದರಮುಖವುಳ್ಳವರಾಗಿಯೂ, ಸಮರ್ಥರಾಗಿಯೂ, ಪ್ರಿಯವಚನವನ್ನಾಡುವವರಾಗಿಯೂ, ತುಂಟರಲ್ಲದೆಯೂ ಇರಬೇಕು.

೧೨. ಇನ್ನು ಪ್ರತೀಹಾರಿಯ (ದ್ವಾರಪಾಲಕ) ಲಕ್ಷಣವನ್ನು ಹೇಳುತ್ತೇನೆ, ಕೇಳು. ಇವನು ಎಲ್ಲರ ಮನಸ್ಸನ್ನೂ ತನ್ನ ಕಡೆಗೆ ಎಳೆದುಕೊಳ್ಳುವವನಾಗಿರಬೇಕು. ನಿಜ (ಯಥೋಕ್ತ) ವಾಗಿ ನುಡಿಯುವವನಾಗಿರಬೇಕು. ದೇಶಭಾಷೆಯನ್ನು ಚೆನ್ನಾಗಿ ವ್ಯಾಸಂಗಮಾಡಿದವನಾಗಿರಬೇಕು. ಧೂರ್ತತ್ವದಿಂ (ನೋಡಿದರೆ ಹೆದರಿಕೆಯಾಗುವಂತೆ) ದಿರಬೇಕು.

೧೩. ಚುರುಕಾಗಿಯೂ, ಪಟುವಾಗಿಯೂ, ಸ್ವಲ್ಪವೂ ಹೆದರದೆಯೂ, ಮಹಾರಾಜನ ಮುಂದೆ ಧೈರ್ಯವಾಗಿ ನಿಂತುಕೊಂಡು ದೇಶಕಾಲವನ್ನರಿತು ಮಾತನಾಡುವ ವಾಗ್ಮಿಯಾಗಿಯೂ ಇರುವ ಆ ಸೇವಕನು ಮಹಾರಾಜನ ಮನಸ್ಸನ್ನರಿತು ಹಿತವಾಗಿ ಮಾತನಾಡುವವನಾಗಿರಬೇಕು.

**ವಕ್ತ್ರಾಽಪಿ ತಸ್ಯ ಯಃ ಕಾಲೇ ಸದೂತೋ ನೃಪತಿರ್ಭವೇತ್ ।**
**ಪ್ರಾಂಶವೋ ವ್ಯಾಯತಾಃ ಶೂರಾ ದೃಢಭಕ್ತಾ ನಿರಾಕುಲಾಃ ॥ ॥ ೧೪॥ ॥**

**ರಾಜ್ಞಾ ತು ರಕ್ಷಿಣಃ ಕಾರ್ಯಾಸ್ತದಾ ಕ್ಲೇಶಸಹಾ ಹಿತಾಃ ।**
**ಅಹಾರ್ಯಾಶ್ಚಾನೃಶಂಶಾಶ್ಚ ದೃಢಭಕ್ತಾಶ್ಚ ಪಾರ್ಥಿವೇ ॥ ೧೫ ॥**

**ತಾಂಬೂಲಧಾರೀ ಭವತೀ ನಾರೀ ಚಾಪ್ಯಥ ತದ್ಗುಣಾ ।**
**ಷಾಡ್ಗುಣ್ಯವಿಧಿತತ್ತ್ವಜ್ಞೋ ದೇಶಭಾಷಾವಿಶಾರದಃ ॥ ೧೬ ॥**

**ಸಂಧಿವಿಗ್ರಹಕಃ ಕಾರ್ಯೋ ರಾಜ್ಞಾ ನಯವಿಶಾರದಃ ।**
**ಆಯವ್ಯಯಜ್ಞೋ ಲೋಕಜ್ಞೋ ದೇಶೋತ್ಪತ್ತಿವಿಶಾರದಃ ॥ ೧೭ ॥**

---

೧೪. ಒಟ್ಟಿನ ಮೇಲೆ ಹೇಳುವುದಾದರೆ ರಾಜದೂತನಾದವನು ರಾಜನ ಸಮಯವನ್ನರಿತು ಮಾತನಾಡುವ ಕುಶಲನಾಗಿಯೇ ಇರಬೇಕು. ಅವನು ಬಹು ಎತ್ತರವಾಗಿಯೂ, ದಪ್ಪವಾಗಿಯೂ ಬೆಳೆದಿರಬೇಕು. ಅವನು ರಾಜಸೇವೆಯನ್ನು ಬಿಟ್ಟು ಇನ್ನಾವ ಚಿಂತೆಯನ್ನೂ ಮನಸ್ಸಿಗೆ ಹಚ್ಚಿಕೊಂಡಿರಬಾರದು. ಅವನು ಶೂರನಾಗಿಯೂ, ರಾಜನಲ್ಲಿ ದೃಢಭಕ್ತಿಯುಳ್ಳವನಾಗಿಯೂ ಇರಬೇಕು.

೧೫. ಇನ್ನು ರಾಜನ ಅಂಗರಕ್ಷಕರ ಲಕ್ಷಣವನ್ನು ತಿಳಿಸುತ್ತೇನೆ :—ರಾಜನ ಬಳಿ ಸರ್ವದಾ ಇರಬೇಕಾದ ರಾಜರಕ್ಷಕರುಗಳೆಲ್ಲರೂ ಕ್ಲೇಶ (ಕಷ್ಟ) ವನ್ನು ಸಹಿಸತಕ್ಕವರಾಗಿಯೂ, ರಾಜನಿಗೆ ಹಿತೈಷಿಗಳಾಗಿಯೂ, ರಾಜನಲ್ಲಿ ದೃಢಭಕ್ತಿಯುಳ್ಳವರಾಗಿಯೂ, ಬಹಳ ಕರುಣಾಶಾಲಿಗಳಾಗಿಯೂ ಇರಬೇಕು.

೧೬. ಇನ್ನು ತಾಂಬೂಲಧಾರಿಯ ಲಕ್ಷಣವನ್ನು ಹೇಳುತ್ತೇನೆ :—ರಾಜನ ಬಳಿ ಇರಬೇಕಾದ ತಾಂಬೂಲವಾಹಿಯು ಗಂಡಸಾಗಲೀ ಹೆಂಗಸಾಗಲೀ ಇರಬಹುದು. ಅವರು ಷಾಡ್ಗುಣ್ಯವಿಧಿತತ್ವವನ್ನರಿತವರಾಗಿರಬೇಕು. ಅವರು ದೇಶಭಾಷಾವಿಶಾರದರಾಗಿರಬೇಕು.

೧೭. ಮಹಾರಾಜನಿಂದ ನಯವಿಶಾರದನಾದೊಬ್ಬ ಸಂಧಿವಿಗ್ರಹಕನು ಗೊತ್ತುಮಾಡಲ್ಪಡಬೇಕು. ಆರೀತಿ ನಿಯಮಿತನಾಗುವ ಆ ಅಧಿಕಾರಿಯು ಆಯವ್ಯಯವನ್ನು ತಿಳಿದವನಾಗಿಯೂ ಲೋಕಜ್ಞನಾಗಿಯೂ ಇರಬೇಕು.

ಕೃತಾಕೃತಜ್ಞೋ ಭೃತ್ಯಾನಾಂ ಜ್ಞೇಯಸ್ಸ್ಯಾದ್ದಕ್ಷರಕ್ಷಿತಾ ।
ಸುರೂಪಸ್ತರುಣಃ ಶೂರೋ ದೃಢಭಕ್ತಃ ಕುಲೋಚಿತಃ ॥ ೧೮ ॥

ಶೂರಃ ಕ್ಲೇಶಸಹಶ್ಚೈವ ಖಡ್ಗಧಾರೀ ಪ್ರಕೀರ್ತಿತಃ ।
ಶೂರಶ್ಚ ಬಹುಯುಕ್ತಶ್ಚ ಗಜಾಶ್ವರಥಕೋವಿದಃ ॥ ೧೯ ॥

ಕೋಶಧಾರೀ ಭವೇದ್ರಾಜ್ಞಃ ಸದಾ ಕ್ಲೇಶಸಹಶ್ಚ ಯಃ ।
ನಿಮಿತ್ತಶಕುನ ಜ್ಞಾನಹಯಶಿಕ್ಷಾವಿಶಾರದಃ ॥ ೨೦ ॥

ಹಯಾಯುರ್ವೇದತತ್ತ್ವಜ್ಞೋ ಭೂಮಿಭಾಗವಿಶೇಷವಿತ್ ।
ಬಲಾಬಲಜ್ಞೋ ರಥಿನಾಂ ಸ್ಥಿರದೃಷ್ಟಿವಿಶಾರದಃ ॥ ೨೧ ॥

ಶೂರಶ್ಚ ಕೃತವಿದ್ಯಶ್ಚ ಸಾರಥಿಃ ಪರಿಕೀರ್ತಿತಃ ।
ಅನಾಹಾರ್ಯಃ ಶುಚಿರ್ದಕ್ಷಃ ಚಿಕಿತ್ಸಕವಚೋರತಃ ॥ ೨೨ ॥

---

೧೮. ಅಂತಹ ಆಯುವ್ಯಯಪರೀಕ್ಷಕನು ಮಹಾದಕ್ಷನಾಗಿಯೂ, ರಕ್ಷಿತನಾಗಿಯೂ, ಭೃತ್ಯರ ಕಾರ್ಯವಿಷಯದಲ್ಲಿ ಕೃತಾಕೃತಜ್ಞನಾಗಿಯೂ, ಸುರೂಪಿಯಾಗಿಯೂ, ತರುಣನಾಗಿಯೂ, ದೃಢಭಕ್ತನಾಗಿಯೂ, ಕುಲೋಚಿತನಾಗಿಯೂ ಇರಬೇಕು.

೧೯. ಇನ್ನು ಖಡ್ಗಧಾರಿಯ ವಿಚಾರವನ್ನು ನಿರೂಪಿಸುತ್ತೇನೆ :—ಖಡ್ಗಧಾರಿಯು ಶೂರನಾಗಿಯೂ, ಕ್ಲೇಶಸಹಿಷ್ಣುವಾಗಿಯೂ, ಗಜರಥಲಕ್ಷಣವನ್ನು ತಿಳಿದವನಾಗಿಯೂ, ಬಹು ಯುಕ್ತಿವಂತನಾಗಿಯೂ ಇರಬೇಕು.

೨೦. ಇನ್ನು ಕೋಶಾಧಿಕಾರಿಯ ವಿಷಯವನ್ನು ಹೇಳುತ್ತೇನೆ :—ಕೋಶಾಧಿಕಾರಿಯಾಗುವವನು ಕ್ಲೇಶವನ್ನು ಸಹಿಸತಕ್ಕ-ಶಕ್ತಿಯುಳ್ಳವನಾಗಿಯೂ, ನಿಮಿತ್ತಶಕುನಾದಿಗಳ ಜ್ಞಾನವುಳ್ಳವನಾಗಿಯೂ, ಅಶ್ವಶಿಕ್ಷಾವಿಶಾರದನಾಗಿಯೂ ಇರಬೇಕು.

೨೧-೨೨. ಸಾರಥಿಯ ಲಕ್ಷಣವನ್ನೀಗ ತಿಳಿಸುವೆನು :—ಆತನು ಅಶ್ವಾಯುರ್ವೇದತತ್ತ್ವಜ್ಞನಾಗಿಯೂ, ಭೂಮಿಭಾಗವಿಶೇಷಜ್ಞನಾಗಿಯೂ, ಬಲಾಬಲಜ್ಞನಾಗಿಯೂ, ರಥಿಕರಾದವರ ವಿಷಯದಲ್ಲಿ ಸ್ಥಿರದೃಷ್ಟಿವಿಶಾರದನಾಗಿಯೂ, ಶೂರನಾಗಿಯೂ, ಶುಚಿಯಾಗಿಯೂ, ಕೃತವಿದ್ಯನಾಗಿಯೂ, ಅನಾಹಾರ್ಯನಾಗಿಯೂ, ಶುಚಿಯಾಗಿಯೂ, ದಕ್ಷನಾಗಿಯೂ, ಚಿಕಿತ್ಸಕನ ವಚನವನ್ನು ಗೌರವಿಸುವವನಾಗಿಯೂ ಇರಬೇಕು.

**ಸೂದಶಾಸ್ತ್ರವಿಧಾನಜ್ಞಃ ಸೂದಾಧ್ಯಕ್ಷಃ ಪ್ರಶಸ್ಯತೇ ।**
**ಸೂದಶಾಸ್ತ್ರಪ್ರಧಾನಜ್ಞಾಃ ಪರಾಭೇದ್ಯಾಃ ಕುಲೋದ್ಗತಾಃ ॥ ೨೩ ॥**

**ಸರ್ವೇ ಮಹಾನಸೇ ಕಾರ್ಯಾ ನೀಚಕೇಶನಖಾಃ ಜನಾಃ ।**
**ಸಮಃ ಶತ್ರೌ ಚ ಮಿತ್ರೇ ಚ ಧರ್ಮಶಾಸ್ತ್ರವಿಶಾರದಃ ॥ ೨೪ ॥**

**ವಿಪ್ರಮುಖ್ಯಃ ಕುಲೀನಶ್ಚ ಧರ್ಮಾಧಿಕರಣೋ ಭವೇತ್ ।**
**ಕಾರ್ಯಾಸ್ತಥಾವಿಧಾಸ್ತತ್ರ ದ್ವಿಜಮುಖ್ಯಾಃ ಸಭಾಸದಃ ॥ ೨೫ ॥**

**ಸರ್ವದೇಶಾಕ್ಷರಾಭಿಜ್ಞಾಃ ಸರ್ವಶಾಸ್ತ್ರವಿಶಾರದಾಃ ।**
**ಲೇಖಕಾಃ ಕಥಿತಾ ರಾಮ ಸರ್ವಾಧಿಕರಣೇಷು ವೈ ॥ ೨೬ ॥**

---

೨೩. ಇನ್ನು ಸೂದಾಧ್ಯಕ್ಷ (ಅಡಿಗೆಮನೆ ಯಜಮಾನ) ನ ಲಕ್ಷಣವನ್ನು ವಿವರಿಸುತ್ತೇನೆ. ಪಾಕಶಾಲಾಧ್ಯಕ್ಷಕನು ಪಾಕಶಾಸ್ತ್ರವನ್ನು ಚೆನ್ನಾಗಿ ತಿಳಿದವನಾಗಿರಬೇಕು. ಪಾಕಶಾಸ್ತ್ರವಿಧಾನವನ್ನು ಬಲ್ಲವನಾಗಿಯೂ, ವಂಶಾನುಕ್ರಮವಾಗಿ ಅಡಿಗೆಯ ಕೆಲಸದಲ್ಲೇ ನುರಿತಿರುವವನಾಗಿಯೂ ಜನರ ಮೇಲುವಿಚಾರಣೆಯಲ್ಲಿ ಸಾಮರ್ಥ್ಯವನ್ನು ಹೊಂದಿದವನಾಗಿಯೂ ಪರರಿಂದ ಅಭೇದ್ಯನಾಗಿಯೂ ಇರಬೇಕು.

೨೪. ಅಡಿಗೆಯಮನೆಯ ಕೆಲಸವನ್ನು ಮಾಡತಕ್ಕವರ ಕೂದಲುಗಳೂ ಉಗುರುಗಳೂ ಚಿಕ್ಕಚಿಕ್ಕದಾಗಿರಬೇಕು. ಇವರು ಶತ್ರುಮಿತ್ರರಲ್ಲಿ ಸಮಾನರಾಗಿರಬೇಕು.

೨೫-೨೬. ಇನ್ನು ಧರ್ಮಾಧಿಕಾರಿಗಳಾದವರ ಲಕ್ಷಣವನ್ನು ಹೇಳುತ್ತೇನೆ, ಕೇಳು. ಧರ್ಮಶಾಸ್ತ್ರವಿಶಾರದರಾಗಿಯೂ, ಶತ್ರುಮಿತ್ರರಲ್ಲಿ ಸಮಭಾವನೆಯುಳ್ಳವರಾಗಿಯೂ, ಕುಲೀನರಾಗಿಯೂ, ಬ್ರಾಹ್ಮಣಶ್ರೇಷ್ಠರಾಗಿಯೂ ಇರುವವರೇ ಧರ್ಮಾಧಿಕಾರಸ್ಥಳದಲ್ಲಿರಲರ್ಹರು.

**ಶಿಷೋರ್ಪೇತಾನ್ಸುಸಂಪೂರ್ಣಾನ್ಸಮಶ್ರೇಣೀಗತಾನ್ಸಮಾನ್ ।**
**ಅಕ್ಷರಾನ್ವಿಲಿಖೇದ್ಯಸ್ತು ಲೇಖಕಃ ಸ ವರಃ ಸ್ಮೃತಃ ॥ ೨೭ ॥**

**ಉಪಾಯವಾಕ್ಯಕುಶಲಃ ಸರ್ವಶಾಸ್ತ್ರವಿಶಾರದಃ ।**
**ಬಹ್ವರ್ಥವಕ್ತಾ ಚಾಲ್ಪೇನ ಲೇಖಕಃ ಸ್ಯಾದ್ನೃಗೂತ್ತಮ ॥ ೨೮ ॥**

**ಪುರುಷಾನ್ತರತತ್ತ್ವಜ್ಞಾಃ ಪ್ರಾಂಶವಶ್ಚಾಪ್ಯಲೋಲುಪಾಃ ।**
**ಧರ್ಮಾಧಿಕರಣೇ ಕಾರ್ಯಾ ಜನಾಹ್ವಾನಕರಾ ನರಾಃ ॥ ೨೯ ॥**

---

೨೭. ಅದೇ ರೀತಿಯಾಗಿ ಸಭಾಸದರಾಗಿರುವವರೂ ಸಹ ಧರ್ಮಜ್ಞ ರಾಗಿಯೇ ಇರಬೇಕು. ಅರಮನೆಯ ಮುಖ್ಯ-ಗುಮಾಸ್ತೆಯಾಗಿರಬೇಕಾದರೆ ಸಕಲ ಶಾಸ್ತ್ರವಿಶಾರದರಾಗಿಯೂ, ಎಲ್ಲ ದೇಶಭಾಷೆಗಳನ್ನೂ, ಆಯಾ ಲಿಪಿಗಳನ್ನೂ ತಿಳಿದ ವರಾಗಿಯೂ ಇರಬೇಕು. ಇಂಥವರು ಸರ್ವಾಧಿಕಾರಿಗಳ ಮಟ್ಟಕ್ಕೂ ಏರಲರ್ಹ ರಾಗಿರುತ್ತಾರೆ. ಸಾಮಾನ್ಯನಾದ ಗುಮಾಸ್ತನಾಗಿರಬೇಕಾದರೆ, ಅಕ್ಷರಗಳ ತಲೆ ಗೊಟ್ಟು,ಕಾಗುಣಿತ, ಇಳಿ, ದೀರ್ಘಗಳನ್ನು ಬಿಡಿಸಿ ಬಿಡಿಸಿ ಹುಟ್ಟಕ್ಷರ ಬರೆಯು ವಂತಹನಾಗಿರಬೇಕು. ಬರೆದ ಅಕ್ಷರಗಳು ದುಂಡಾಗಿರಬೇಕು. ಇಂತಹವನು ಒಳ್ಳೆಯ ಲೇಖಕನೆನಿಸಿಕೊಳ್ಳುವನು.

೨೮. ಮಹಾರಾಜರ ಬಳಿ ಲೇಖಕ(ಗುಮಾಸ್ತ) ನಾಗಿರತಕ್ಕವನು ಉಪಾಯ, ವಾಕ್ಯಕುಶಲನಾಗಿರಬೇಕು. ಸರ್ವಶಾಸ್ತ್ರವಿಶಾರದನಾಗಿರಬೇಕು. ಒಂದು ಪದಕ್ಕೆ ಬಹಳ ಅರ್ಥವನ್ನು ಹೇಳುವ ಶಕ್ತಿಯನ್ನು ಹೊಂದಿದವನಾಗಿರಬೇಕು. ಇಂತಹ ವನು ಒಳ್ಳೆಯ ಗುಮಾಸ್ತೆಯೆನಿಸಿಕೊಳ್ಳುವನು.

೨೯. ಇವರಿಗಿಂತ ಮೇಲ್ಪಟ್ಟ ಮೋಖ್ತೇಸರರಾಗಿರಬೇಕಾದರೆ ಅಂಥವರು ಮತ್ತೊಬ್ಬ ಮನುಷ್ಯನ ಹೃದಯದ ಅಭಿಪ್ರಾಯತತ್ವವನ್ನು ಕಂಡುಹಿಡಿಯುವ ಶಕ್ತಿಯುಳ್ಳವರಾಗಿರಬೇಕು. ಅವರು ಎತ್ತರವಾಗಿರಬೇಕು. ಅಲೋಲುಪರಾಗಿರ ಬೇಕು. ಧರ್ಮಾಧಿಕರಣಕಾರ್ಯವನ್ನು ನಿರ್ವಹಿಸುವ ಕುಶಲರಾಗಿರಬೇಕು. ಜನರ ಮನಸ್ಸನ್ನಪಹರಿಸುವಂತಹ ಚತುರರಾಗಿರಬೇಕು.

**ಏವಂವಿಧಾಸ್ತಥಾ ಕಾರ್ಯಾ ರಾಜ್ಞಾ ದೌವಾರಿಕಾ ಜನಾಃ ।**
**ಲೋಹವಸ್ತ್ರಾದಿಧಾತೂನಾಂ ರತ್ನಾನಾಂ ಚ ವಿಭಾಗವಿತ್ ॥ ೩೦ ॥**

**ವಿಜ್ಞಾತಾ ಫಲ್ಗುಸಾರಾಣಾಂ ತ್ವನಾಹಾರ್ಯಃ ಶುಚಿಸ್ಸದಾ ।**
**ನಿಪುಣಶ್ಚಾಪ್ರಮತ್ತಶ್ಚ ಧನಾಧ್ಯಕ್ಷಃ ಪ್ರಕೀರ್ತಿತಃ ॥ ೩೧ ॥**

**ಆಯದ್ವಾರೇಷು ಸರ್ವೇಷು ಧನಾಧ್ಯಕ್ಷಸಮಾನರಾಃ ।**
**ವ್ಯಯದ್ವಾರೇಷು ಸರ್ವೇಷು ಕರ್ತವ್ಯಾಃ ಪೃಥಿವೀಕ್ಷಿತಾ ॥ ೩೨ ॥**

**ಪರಂ ಪಾರಂ ಗತೋ ಯಃ ಸ್ಯಾದಷ್ಟಾಂಗೇಷು ಚಿಕಿತ್ಸಿತೇ ।**
**ಅನಾಹಾರ್ಯಸ್ಸ ವೈದ್ಯಃ ಸ್ಯಾದ್ಧರ್ಮಾತ್ಮಾ ಚ ಕುಲೋದ್ಗತಃ ॥ ೩೩ ॥**

---

೩೦. ಮೋಹ್ತೇಸರರ ಬಳಿ ಕೆಲಸಕ್ಕಿರುವ ಸೇವಕರು (ದ್ವಾರಪಾಲಕರು) ಪ್ರಭುಚಿತ್ತವೃತ್ತಿಯನ್ನನುಸರಿಸಿ ಕೆಲಸಮಾಡುವವರಾಗಿರಬೇಕು. ಲೋಹವಸ್ತ್ರಾದಿ ಧಾತುವಿಶೇಷಗಳನ್ನು ತಕ್ಕತಕ್ಕ ಸ್ಥಳದಲ್ಲಿ ವರಸೆಯಾಗಿ ಜೋಡಿಸಿ ಭಾಗಭಾಗಮಾಡಿ ಇಡತಕ್ಕವರಾಗಿರಬೇಕು.

೩೧. ಇನ್ನು ಧನಾಧ್ಯಕ್ಷನ (ಖಜಾಂಚಿಯ) ಲಕ್ಷಣವನ್ನು ವಿವರಿಸುವೆನು:-- ಧನಾಧ್ಯಕ್ಷನು ಸಾರಾಸಾರನಿಪುಣನಾಗಿರಬೇಕು. ಸರ್ವದಾ ಶುಚಿಯಾಗಿಯೂ ನಿಸ್ಪೃಹನಾಗಿಯೂ ಇರಬೇಕು. ಕಾರ್ಯನಿಪುಣನಾಗಿಯೂ ಜಾಗರೂಕನಾಗಿಯೂ ಇರಬೇಕು.

೩೨. ಖಜಾಂಚಿ (ಟ್ರೆಜರರ್) ಯ ಬಳಿ ಇರುವ ಹಣಕಾಸನ್ನು ಲೆಖ್ಖ ಮಾಡುವ ಜನರು ತನ್ನ ಧಣಿಯಂತೆಯೇ ನಿಸ್ಪೃಹರಾಗಿಯೂ ನಿರ್ಮಲಚಿತ್ತ ರಾಗಿಯೂ ಇರಬೇಕು. ಅರಮನೆಗೆ ಬರುವ ಹಣವನ್ನೆಣಿಸಿ ತೆಗೆದುಕೊಳ್ಳು ವಾಗಲೂ, ಖರ್ಚಾದ ಮೊಬಲಗನ್ನು ಹೊರಕ್ಕೆ ಕೊಡುವಾಗಲೂ ಬಹಳ ಜಾಗರೂಕ ರಾಗಿ ರಾಜಭಕ್ತಿನಿರತರಾಗಿ ನಡೆದುಕೊಳ್ಳಬೇಕು.

೩೩. ಅರಮನೆಯ ವೈದ್ಯರ ವಿಚಾರವನ್ನು ತೆಗೆದುಕೊಳ್ಳೋಣ:— ಆರ್ಷೇಯವಾಗಿಯೂ ಕುಲಪರಂಪರೆಯಿಂದ ಬಂದವರಾಗಿಯೂ ಇರುವ ವೈದ್ಯರನ್ನೇ ಅರಮನೆಯಲ್ಲಿ ನಿಯಮಿಸಿಕೊಳ್ಳಬೇಕು. ವೈದ್ಯನು ಅಷ್ಟಾಂಗಹೃದಯವನ್ನು ಚೆನ್ನಾಗಿ ವ್ಯಾಸಂಗಮಾಡಿ ತಿಳಿದಿರಬೇಕಲ್ಲದೆ, ಚಿಕಿತ್ಸಾಭಾಗದಲ್ಲಿ ಬಹಳ ಘಟಕ ನಾಗಿರಬೇಕು. ಆ ವೈದ್ಯನು ಧರ್ಮಾತ್ಮನಾಗಿಯೂ ನಿಸ್ಪೃಹನಾಗಿಯೂ ಇರ ಬೇಕು.

ಪ್ರಾಣಾಚಾರ್ಯಸ್ಸ ವಿಜ್ಞೇಯೊ ವಚನಂ ತಸ್ಯ ಭೂಭುಜಾ।
ರಾಮು ಸ್ನೇಹಾತ್ಸದಾ ಕಾರ್ಯಂ ಯಥಾ ಕಾರ್ಯಂ ಪೃಥಗ್ಜನೈಃ ॥ ೩೪ ॥

ಹಸ್ತಿಶಿಕ್ಷಾವಿಧಾನಜ್ಞೋ ವನಜಾತಿವಿಶಾರದಃ।
ಕ್ಲೇಶಕ್ಷಮಸ್ತಥಾ ರಾಜ್ಞೋ ಗಜಾಧ್ಯಕ್ಷಃ ಪ್ರಶಸ್ಯತೇ ॥ ೩೫ ॥

ಏತೈರೇವ ಗುಣೈರ್ಯುಕ್ತೋ ಸ್ವಾಧೀನಶ್ಚ ವಿಶೇಷತಃ।
ಗಜಾರೋಹೋ ನರೇಂದ್ರಸ್ಯ ಸರ್ವಕರ್ಮಸು ಶಸ್ಯತೇ ॥ ೩೬ ॥

ಹಯಶಿಕ್ಷಾವಿದಾನಜ್ಞಸ್ತಚ್ಚಿಕಿತ್ಸಿತಪಾರಗಃ।
ಅಶ್ವಾಧ್ಯಕ್ಷೋ ಮಹೀಭರ್ತುಃ ಸ್ವಾಸನಶ್ಚ ಪ್ರಶಸ್ಯತೇ ॥ ೩೭ ॥

---

೩೪. ಇಂತಹ ವೈದ್ಯನನ್ನು ಮಹಾರಾಜನು ತನ್ನ ಪ್ರಾಣಕ್ಕೇ ಗುರುವಾದವನೆಂದು ಭಾವಿಸಬೇಕು. ಅವನ ಮಾತನ್ನು ಮೀರಬಾರದು. ಬೇರೆಜನಗಳಿಂದಾಗುವ ಕೆಲಸವೇನಾದರೂ ಇದ್ದರೆ ವೈದ್ಯನ ಸಲಹೆಯನ್ನು ಪಡೆದು ಅವನ ಮಾತಿನಂತೆ ನಡೆಯಬೇಕು.

೩೫. ಇನ್ನು ಗಜಶಾಲಾಧ್ಯಕ್ಷನ ಲಕ್ಷಣವನ್ನು ತಿಳಿಸುತ್ತೇನೆ :—ಗಜಶಾಲೆಯ ಅಧಿಕಾರಿಯು ಗಜಶಿಕ್ಷಾವಿಧಾನವನ್ನರಿತವನಾಗಿರಬೇಕು. ಕಾಡಿನಿಂದ ಹಿಡಿದುತಂದು ಆನೆಕರೋಟಿಯಲ್ಲಿ ಆ ಕಾಡಾನೆಯನ್ನು ಬಿಟ್ಟರೆ ಅದನ್ನು ಪಳಗಿಸುವಂತಹ ಶಾಸ್ತ್ರವನ್ನರಿತವನಾಗಿರಬೇಕು.

೩೬. ಇಂತಹ ಗಜಶಾಸ್ತ್ರವಿಶಾರದನಾದ ಗಜಾಧ್ಯಕ್ಷನು ಗಜವನ್ನು ಸ್ವಾಧೀನಮಾಡಿಕೊಂಡು ಅಂತಹ ಆನೆಯ ಮೇಲೆ ಮಹಾರಾಜನನ್ನು ಪ್ರಮಾದವಾಗದಂತೆ ನಿರ್ಭಯವಾಗಿ ಕೂರಿಸಿ ಸಕಲ ಮಂಗಳಕಾರ್ಯಗಳಲ್ಲಿಯೂ ಗಜಾರೋಹಣ ಮಾಡಿಸುವಂತಹ ಚಾತುರ್ಯವನ್ನರಿತಿರಬೇಕು.

೩೭. ಇನ್ನು ಅಶ್ವಾಧ್ಯಕ್ಷನ ವಿಷಯವನ್ನು ವಿವರಿಸುತ್ತೇನೆ ;—ಅಶ್ವಶಾಲಾಧ್ಯಕ್ಷನಾಗಿರಬೇಕಾದವನಿಗೆ ಅಶ್ವಶಿಕ್ಷಾವಿಧಾನವು ತಿಳಿದಿರಬೇಕು. ಅಶ್ವಚಿಕಿತ್ಸಾಕ್ರಮವೂ ಅವನಿಗೆ ಚೆನ್ನಾಗಿ ತಿಳಿದಿರಬೇಕು. ಇಂತಹ ಅಶ್ವಾಧ್ಯಕ್ಷನೇ ಮಹಾರಾಜನಿಗೆ ಪ್ರೇಮಪಾತ್ರನಾಗಲು ಯೋಗ್ಯನಾದವನು.

**ಅನಾಹಾರ್ಯಶ್ಚ ಶೂರಶ್ಚ ತಥಾ ಪ್ರಾಜ್ಞಃ ಕುಲೋದ್ಗತಃ ।**
**ದುರ್ಗಾಧ್ಯಕ್ಷಃ ಸ್ಮೃತೋ ರಾಮ ಉದ್ಯುಕ್ತಃ ಸರ್ವಕರ್ಮಸು ॥ ೩೮ ॥**

**ವಾಸ್ತು ವಿದ್ಯಾವಿಧಾನಜ್ಞೋ ಲಗ್ನಹಸ್ತೋ ಜಿತಶ್ರಮಃ ।**
**ದೀರ್ಘದರ್ಶೀ ಚ ಶೂರಶ್ಚ ಸ್ಥಪತಿಃ ಪರಿಕೀರ್ತಿತಃ ॥ ೩೯ ॥**

**ಯಂತ್ರಮುಕ್ತೇ ಪಾಣಿಮುಕ್ತೇ ಅಮುಕ್ತೇ ಮುಕ್ತಧಾರಿತೇ ।**
**ಅಸ್ತ್ರಾಚಾರ್ಯೋ ನಿಯುದ್ಧೇ ಚ ಕುಶಲಶ್ಚ ವಿಶೇಷ್ಯತೇ ॥ ೪೦ ॥**

**ಪಂಚಾಶದಧಿಕಾಃ ನಾರ್ಯಃ ಪುರುಷಾಃ ಸಪ್ತತಿಸ್ತಥಾ ।**
**ಅಂತಃಪುರಚರಾಃ ಕಾರ್ಯಾ ರಾಜ್ಞಾಂ ಸರ್ವೇಷು ಕರ್ಮಸು ॥ ೪೧ ॥**

---

೩೮. ಇನ್ನು ಕೋಟೆಕೊತ್ತಗಳ ಯಜಮಾನನ ಲಕ್ಷಣವೇನೆಂದರೆ ;— ಅಂತಹ ದುರ್ಗಾಧ್ಯಕ್ಷನು ನಿಸ್ಪೃಹನಾಗಿಯೂ, ಶೂರನಾಗಿಯೂ, ಪ್ರಾಜ್ಞನಾಗಿಯೂ, ಸತ್ಕುಲಸಂಜಾತನಾಗಿಯೂ ಇರಬೇಕಲ್ಲದೆ ಯಾವ ಕೆಲಸವನ್ನು ಕೊಟ್ಟರೂ, ಮಾಡ ತಕ್ಕ ಶಕ್ತಿಯನ್ನು ಹೊಂದಿದವನಾಗಿರಬೇಕು.

೩೯. ಇನ್ನು ಸ್ಥಪತಿ (ಬಡಗಿ) ಯ ಲಕ್ಷಣವನ್ನು ಹೇಳಲಾಗುವುದು ;— ಸ್ಥಪತಿಯು ವಾಸ್ತು (ಶಿಲ್ಪ) ವಿದ್ಯಾವಿಧಾನವನ್ನು ಬಲ್ಲವನಾಗಿರಬೇಕು. ಶ್ರಮವನ್ನು ಬಲ್ಲವನಾಗಿರಬೇಕು. ಶ್ರಮವನ್ನು ಲಕ್ಷಿಸಬಾರದು. ಕೈಯಲ್ಲಿ ಆಯುಧವಿದ್ದೇ ಇರ ಬೇಕು. ದೀರ್ಘದರ್ಶಿಯಾಗಿಯೂ ಶೂರನಾಗಿಯೂ ಇರುವ ಬಡಗಿಯೇ ಸರಿಯಾದ ಬಡಗಿಯು.

೪೦. ಇನ್ನು ಅಸ್ತ್ರಾಚಾರ್ಯನ (ಧನುರ್ವೇದಗುರು) ಲಕ್ಷಣವನ್ನು ವಿವರಿಸ ಲಾಗುವುದು ;— ಯಂತ್ರಯುದ್ಧದಲ್ಲೂ, ಪ್ರಾಣಿಯುದ್ಧದಲ್ಲೂ, ಬಾಣಪ್ರಯೋಗ ದಲ್ಲೂ, ಬಾಹುಯುದ್ಧ (ಕುಸ್ತಿ) ದಲ್ಲಿಯೂ ಕುಶಲನಾದವನೇ ಅಸ್ತ್ರಾಚಾರ್ಯನೆನಿಸಿ ಕೊಳ್ಳಲರ್ಹನು.

೪೧. ಅರಮನೆಯ ರಾಣಿವಾಸದಲ್ಲಿ ಚಾಕರಿಮಾಡಲು, ಐವತ್ತಕ್ಕಿಂತಲೂ ಹೆಚ್ಚು ಸಂಖ್ಯೆಯುಳ್ಳ ಅವ್ವೆ (ದಾಸಿ) ಯರಿರಬೇಕು. ಮಹಾರಾಜರ ಹತ್ತಿರ ಕೆಲಸ ಮಾಡುವ ಕಟ್ಟಿಗೆಯವರು ಎಪ್ಪತ್ತಕ್ಕಿಂತ ಹೆಚ್ಚಾಗಿರಬೇಕು. ಇವರೆಲ್ಲರೂ ಮಹಾ ರಾಜರು ಯಾವ ಹೊತ್ತಿನಲ್ಲಿ ಯಾವ ಕೆಲಸಹೇಳಿದರೂ ಥಟ್ಟನೆ ಅದನ್ನು ನೆರವೇರಿ ಸುವುದಕ್ಕಾಗಿ ಸೊಂಟಕಟ್ಟಿ ನಿಂತೇ ಇರಬೇಕು.

ಸ್ಥವಿರಾ ಜಾತಿತತ್ತ್ವಜ್ಞಾಃ ಸತತಂ ಪ್ರತಿಜಾಗ್ರತಃ ।
ರಾಜ್ಞಃ ಸ್ಯಾದಾಯುಧಾಗಾರೇ ದಕ್ಷಃ ಕರ್ಮಸು ಚೋದ್ಯತಃ ॥ ೪೨ ॥

ಕರ್ಮಾಣ್ಯಪರಿಮೇಯಾನಿ ರಾಜ್ಞಾಂ ಭೃಗುಕುಲೋದ್ವಹ ।
ಉತ್ತಮಾಧಮಮಧ್ಯಾನಿ ಬುದ್ಧ್ವಾ ಕರ್ಮಾಣಿ ಪಾರ್ಥಿವ ॥ ೪೩ ॥

ಉತ್ತಮಾಧಮಮಧ್ಯಾಂಸ್ತು ಪುರುಷಾನ್ವಿನಿಯೋಜಯೇತ್ ।
ನ ಕರ್ಮಣಿ ವಿಪರ್ಯಾಸಾದ್ರಾಜಾ ನಾಶಮವಾಪ್ನುಯಾತ್ ॥ ೪೪ ॥

ನಿಯುಕ್ತಪುರುಷೇ ಭಕ್ತಿಂ ಶ್ರುತಂ ಶೌರ್ಯಂ ಬಲಂ ಕುಲಂ ।
ಜ್ಞಾತ್ವಾ ವೃತ್ತಿರ್ವಿಧಾತವ್ಯಾ ಪುರುಷಾಣಾಂ ಮಹೀಕ್ಷಿತಾ ॥ ೪೫ ॥

---

೪೨. ಆಯುಧಶಾಲೆಯಲ್ಲಿರಬೇಕಾದ ನೌಕರರು ವಯಸ್ಸಾದವರಾಗಿರಬೇಕು. ಆಯುಧ ಜಾತಿ ತತ್ವಗಳನ್ನು ಬಲ್ಲಿದವರಾಗಿರಬೇಕು. ಸರ್ವದಾ ಜಾಗರೂಕರಾಗಿರಬೇಕು. ಕಾರ್ಯದಕ್ಷರಾಗಿರಬೇಕು.

೪೩-೪೪. ಅರಮನೆಯಲ್ಲಿ ಮಾಡಬೇಕಾದ ರಾಜಕಾರ್ಯಗಳು ಅಷ್ಟಿಷ್ಟಲ್ಲ. ಅವು ಅಪರಿಮಿತವಾಗಿವೆ. ಆ ಕೆಲಸಗಳಲ್ಲಿ ಉತ್ತಮವಾದುದಾವುದು ? ಮಧ್ಯಮವಾದುದಾವುದು ? ಅಧಮತರಗತಿಯದಾವುದು ? ಎಂಬುದನ್ನು ತಿಳಿದುಕೊಂಡು ಆಯಾ ಕೆಲಸಗಳಿಗೆ ತಕ್ಕಂತೆ ಉತ್ತಮಾಧಮಮಧ್ಯಮಜನರನ್ನು ನೇಮಿಸಿಕೊಳ್ಳುವುದೊಳ್ಳೆಯದು. ಹಾಗೆ ಆಯಾಯ ಚಾಕರಿಗಳಿಗೆ ತಕ್ಕಂತಹವರನ್ನೇ ನೇಮಿಸಿಕೊಳ್ಳುವುದು ಒಳ್ಳೆಯದು. ಹಾಗೆ ಆಯಾಯ ಚಾಕರಿಗಳಿಗೆ ತಕ್ಕಂತಹವರನ್ನು ನೇಮಿಸಿಕೊಳ್ಳದೆ ವಿಪರ್ಯಾಸ (ವ್ಯತ್ಯಾಸ) ವಾಗಿ ಅಯೋಗ್ಯರನ್ನೇನಾದರೂ, ಕೆಲಸಕ್ಕೆ ನೇಮಿಸಿಬಿಟ್ಟು ಸರಿಯಾಗಿ ಅವರಿಂದ ಕೆಲಸವು ಸಾಗದೆಹೋಗುವುದಾದರೆ ರಾಜನೇ ನಾಶಕ್ಕೆ ಗುರಿಯಾದಾನು ?

೪೫. ಮಹಾರಾಜನು ಒಬ್ಬ ಮನುಷ್ಯನನ್ನು ಒಂದು ಕೆಲಸಕ್ಕೆ ನೇಮಿಸಿಬಿಟ್ಟ ಮೇಲೆ, ಆರೀತಿ ನಿಯುಕ್ತನಾದ ಪುರುಷನಲ್ಲಿ ತೋರಿಬರುವ ರಾಜಭಕ್ತಿ, ಅವನ ವಿದ್ಯಾಚಾತುರ್ಯ, ಶೌರ್ಯ, ಬಲ, ಕುಲಗಳನ್ನು ಚೆನ್ನಾಗಿ ವಿಮರ್ಶೆಮಾಡಿ ಅವನಿಗೆ ಜೀವನವೃತ್ತಿ (ಬಹುಮಾನ) ಯನ್ನು ಕಲ್ಪಿಸಿಕೊಡಬೇಕು.

ಪುರುಷಾನ್ತರವಿಜ್ಞಾನೇ ತತ್ತ್ವಮಾತ್ರ ನಿಬಂಧನಾಃ ।
ನರೇಂದ್ರಲಕ್ಷ್ಯಾ ಧರ್ಮಜ್ಞಾಸ್ತತ್ರಾಯತ್ತೋ ಭವೇನ್ನೃಪಃ ॥ ೪೬ ॥

ಸ್ವಭೃತ್ಯಾಶ್ಚ ತಥಾ ಪುಷ್ಟಾ ಸ್ಸತತಂ ಪ್ರತಿಮಾನಿತಾಃ ।
ರಾಜ್ಞಾ ಸಹಾಯಾಃ ಕರ್ತವ್ಯಾಃ ಪೃಥಿವೀಂ ಜೇತುಮಿಚ್ಛತಾ ॥ ೪೭ ॥

ಯಥಾರ್ಹಂ ಚಾಥ ಸುಭೃತಾನ್ರಾಜಾ ಕರ್ಮಸು ಯೋಜಯೇತ್ ।
ಧರ್ಮಿಷ್ಠಾನ್ಧರ್ಮಕಾರ್ಯೇಷು ಶೂರಾನ್ಸಂಗ್ರಾಮಕರ್ಮಣಿ ॥ ೪೮ ॥

ನಿಪುಣಾನರ್ಥಕೃತ್ಯೇಷು ಸರ್ವತ್ರ ಚ ತಥಾ ಶುಚೀನ್ ।
ಸ್ತ್ರೀಷು ಷಂಡಾನ್ನಿಯುಂಜೀತ ತೀಕ್ಷ್ಣಾನ್ದಾರುಣಕರ್ಮಸು ॥ ೪೯ ॥

---

೪೬. ಮಹಾರಾಜನು ಮತ್ತೊಬ್ಬರ ಹೃದಯದಲ್ಲಿ ತೋರಿಬರುವ ಭಾವನೆ, ಅವರ ತತ್ವಬಂಧನಗಳನ್ನು ಲಕ್ಷ್ಯದಲ್ಲಿಟ್ಟು ಸಂಭಾವನೆಮಾಡಬೇಕು.

೪೭. ಸಕಲಭೂಮಂಡಲವನ್ನೂ ಜಯಿಸಲಪೇಕ್ಷಿಸುವ ಮಹಾರಾಜನು ತನ್ನಬಳಿ ತನ್ನ ಕೆಲಸವನ್ನು ಮಾಡುತ್ತಿರುವ ಭೃತ್ಯ (ಆಶ್ರಿತ) ಜನರಿಗೆ ಯಾವಾಗಲೂ ಸನ್ಮಾನವನ್ನು ಮಾಡುತ್ತಾ, ಅವರ ಜೀವನಕ್ಕೆ ತಕ್ಕಂತೆ ದ್ರವ್ಯವನ್ನು ಕೊಡುತಲಿರಬೇಕು.

೪೮. ಮಹಾರಾಜನು ತನ್ನ ಆಜ್ಞೆಯಂತೆ ಕೆಲಸಮಾಡಲು ಒಪ್ಪಿಕೊಂಡು ಕೆಲಸಮಾಡುತ್ತಿರುವ, ಜನರನ್ನು ಆಯಾಯ ಕಾರ್ಯಗೌರವಗಳಲ್ಲಿ ನಿಯೋಜನೆ ಮಾಡಿದ ಬಳಿಕ, ಅವರು ಮಾಡುತ್ತಿರುವ ಕೆಲಸಗಳ ಸ್ವರೂಪವನ್ನು ತಿಳಿದವನಾಗಿ, ಧರ್ಮಿಷ್ಠರಾದವರನ್ನು ಧರ್ಮಕಾರ್ಯಗಳಲ್ಲಿಯೂ, ಶೂರರಾದವರನ್ನು ಯುದ್ಧ ಕಾರ್ಯಗಳಲ್ಲಿಯೂ ನಿಯಮಿಸಬೇಕು.

೪೯. ದ್ರವ್ಯವಿಚಾರದಲ್ಲಿ ನಿಪುಣರನ್ನೂ, ಶುಚಿಯಾದವರನ್ನು, ಸಕಲಕಾರ್ಯಗಳಲ್ಲಿಯೂ, ನಪುಂಸಕರಾದವರನ್ನು ಅಂತಃಪುರ (ಜನಾನಾ) ಸ್ತ್ರೀಯರ ಬಳಿಯಲ್ಲಿಯೂ, ಕಷ್ಟಕೆಲಸಮಾಡುವಾಗ ಬಹಳ ಬಲಿಷ್ಠರನ್ನೂ ನೇಮಿಸಬೇಕು.

ಧರ್ಮೇ ಚಾರ್ಥೇ ಚ ಕಾಮೇ ಚ ಭಯೇ ಚ ಭೃಗುನಂದನ ।
ರಾಜಾ ಯಥಾರ್ಹಂ ಕುರ್ಯಾತ್ತಾನ್ಸ್ಯುಪಧಾಭಿಃ ಪರೀಕ್ಷಿತಾನ್ ॥ ೫೦ ॥

ಸಮತೀತೋ ಯಥಾಹಾರ್ಯಾಂ ಕುರ್ಯಾದ್ಧಸ್ತಿವನೇ ಚರಾನ್ ।
ಉತ್ಪಾದಾನ್ವೇಷಣೇ ಯತ್ತಾನಧ್ಯಕ್ಷಾನ್ಸ್ತತ್ರ ಕಾರಯೇತ್ ॥ ೫೧ ॥

ಏವಮಾದೀನಿ ಕರ್ಮಾಣಿ ಯತ್ನೈಃ ಕಾರ್ಯಾಣಿ ಭಾರ್ಗವ ।
ಸರ್ವಥಾ ನೇಷ್ಯತೇ ರಾಜ್ಞಸ್ತೀಕ್ಷ್ಣೋಪಕರಣಕ್ಷಯಃ ॥ ೫೨ ॥

ಪಾಪಸಾಧ್ಯಾನಿ ಕರ್ಮಾಣಿ ಯಾನಿ ರಾಜ್ಞಾಂ ಭೃಗೂತ್ತಮ ।
ಸನ್ತಸ್ತಾನಿ ನ ಕುರ್ವಂತಿ ತಸ್ಮಾತ್ತಾನ್ಬಿಭೃಯಾನ್ನೃಪಃ ॥ ೫೩ ॥

---

೫೦. ಧರ್ಮಾರ್ಥಕಾಮಭಯಾದಿಗಳು ಸನ್ನಿಹಿತವಾದ ಸಂದರ್ಭದಲ್ಲಿ ಮಹಾರಾಜನಾದವನು, ನಾನಾ ವಿಧದಲ್ಲಿ ತನ್ನಿಂದ ಬಹುಕಾಲದಿಂದ ಪರೀಕ್ಷಿತರಾಗಿ ತೇರ್ಗಡೆ ಹೊಂದಿದ ಜನರನ್ನೇ ಯಥೋಚಿತವಾಗಿ ನೇಮಿಸಿಕೊಳ್ಳಬೇಕು.

೫೧. ಕಾಡಾನೆಗಳು ಓಡಾಡುವ ಅಡವಿಯಲ್ಲಿ ಹೆದರದೆ ಓಡಾಡುವುದು ಎಷ್ಟು ಕಷ್ಟವೋ, ಅದರಂತೆ ಅರಮನೆಯಲ್ಲಿ ಕೆಲಸಮಾಡುವುದೂ ಅಷ್ಟೇ ಕಷ್ಟವೆಂದರಿತು, ಅದಾವನು ಅರಮನೆಯ ಕೆಲಸದಲ್ಲಿ ನುರುಗಿರುವನೋ ಅಂತಹವನನ್ನೇ ಅರಮನೆಯ ದೊಡ್ಡದೊಡ್ಡ ಅಧಿಕಾರದಲ್ಲಿ ನಿಯಮಿಸಿಕೊಳ್ಳಬೇಕಯ್ಯ! ಪರಶುರಾಮ!!

೫೨. ಎಲೈ ಪರಶುರಾಮನೇ! ಕೇಳು. ಮೇಲೆ ಹೇಳಿದಮೇರೆ ಸಕಲ ಕಾರ್ಯಗಳನ್ನೂ ಪ್ರಯತ್ನದಿಂದ ನಿಶ್ಚಯಿಸಿಕೊಳ್ಳಬೇಕು. ಹೀಗೆ ಮಾಡಿದರೆ ಮಹಾರಾಜನು ಸಂಪಾದಿಸಿದ ಸಕಲತೀಕ್ಷ್ಣೋಪಕರಣಗಳೂ ಸರಿಯಾದ ಸ್ಥಳದಲ್ಲಿ ಸೇರಿ ಸುರಕ್ಷಿತವಾಗಿರುತ್ತವೆ.

೫೩. ಪಾಪಸಾಧ್ಯವಾದ ಕರ್ಮಗಳನ್ನು ಸಜ್ಜನರಿಗೆ ಹೇಳಿದರೆ, ಅವರು ಅದನ್ನು ಮಾಡಲಾರರು. ಆದ್ದರಿಂದ ಮಹಾರಾಜನು ಅದಕ್ಕೆ ತಕ್ಕಂತಹ ಜನರನ್ನೇ ಗೊತ್ತುಮಾಡಿಕೊಳ್ಳಬೇಕು.

**ನೇಷ್ಯತೇ ಪೃಥಿವೀಶಾನಾಂ ತೀಕ್ಷ್ಣೋಪಕರಣಕ್ಷಯಃ ।**
**ಯಸ್ಮಿನ್ಕರ್ಮಣಿ ಯಸ್ಯ ಸ್ಯಾದ್ವಿಶೇಷೇಣ ಚ ಕೌಶಲಂ　　|| ೫೪ ||**

**ತಸ್ಮಿನ್ಕರ್ಮಣಿ ತಂ ರಾಜಾ ಪರೀಕ್ಷ್ಯ ವಿನಿಯೋಜಯೇತ್ ।**
**ಪಿತೃಪೈತಾಮಹಾನ್ಭೃತ್ಯಾನ್ಸರ್ವಕರ್ಮಸು ಯೋಜಯೇತ್　　|| ೫೫ ||**

**ವಿನಾ ದಾಯಾದಕೃತ್ಯೇಷು ತತ್ರ ತೇ ಹಿ ಸಮಾಸತಃ ।**
**ರಾಜಾ ದಾಯಾದಕೃತ್ಯೇಷು ಪರೀಕ್ಷ್ಯ ಸ್ವಕೃತಾನ್ನರಾನ್　　|| ೫೬ ||**

**ನಿಯುಂಜೀತ ಮಹಾಭಾಗಃ ತಸ್ಯ ತೇ ಹಿತಕಾರಿಣಃ ॥**
**ಪರರಾಜಗೃಹಾತ್ಪ್ರಾಪ್ತಾನ್ ಜನಸಂಗ್ರಹಕಾಮ್ಯಯಾ　　|| ೫೭ ||**

**ಶಿಷ್ಟಾನ್ವಾಪ್ಯಥವಾ ದುಷ್ಟಾನ್ಸಂಶ್ರಯೇತ ಪ್ರಯತ್ನತಃ ।**
**ದುಷ್ಟಂ ವಿಜ್ಞಾಯ ವಿಶ್ವಾಸಂ ನ ಕುರ್ಯಾತ್ತತ್ರ ಭೂಮಿಪಃ　　|| ೫೮ ||**

---

೫೪. ತೀಕ್ಷ್ಣೋಪಕರಣಗಳಿಂದಾಗಬೇಕಾದ ಕಾರ್ಯವು ಅಂತಹ ಕ್ರೂರಾತ್ಮ ದಿಂದಲೇ ಆಗಬೇಕಾದುದರಿಂದ, ಯಾವ ತೀಕ್ಷ್ಣಕಾರ್ಯದಲ್ಲಿ ಯಾರಿಗೆ ಪರಿಶ್ರಮ ವಿದೆಯೋ ಅಂತಹವರನ್ನೇ ಆಯಾ ಕೆಲಸಗಳಿಗೆ ಗೊತ್ತುಮಾಡಬೇಕು.

೫೫. ಯಾರಿಗೆ ಯಾವಕೆಲಸ ಬರುವುದೋ ಅಂಥವರಿಗೆ ಅಂತಹ ಕೆಲಸ ವನ್ನೇ ಕೊಡಬೇಕು. ಕೆಲಸಕೊಡುವುದಕ್ಕಿಂತ ಮುಂಚೆ ಅವರ ತಂದೆ-ತಾತನ ಕಾಲದಿಂದ ಅರಮನೆಯಲ್ಲಿ ಕೆಲಸಮಾಡಿದ ಜನರ ವಂಶಸ್ಥರಿಗೇ ಎಲ್ಲಾ ಕೆಲಸ ಗಳನ್ನೂ ನೋಡಿಕೊಡಬೇಕು.

೫೬. ಮೇಲೆ ವಿವರಿಸಿದ ಲಕ್ಷಣವುಳ್ಳವರನ್ನೆಲ್ಲಾ ದಾಯಾದಕೃತ್ಯ (ದಾಯಾದ ವಿಭಾಗ) ವಿನಹ ಇತರ ಕೆಲಸಗಳಲ್ಲಿ ನಿಯೋಜಿಸಬೇಕು. ದಾಯವಿಭಾಗ ಮಾಡುವ ಸಂದರ್ಭದಲ್ಲಿ ಮಾತ್ರ ತನ್ನ ಹಿತಚಿಂತಕರಾದ ಮನುಷ್ಯರನ್ನೇ ಚೆನ್ನಾಗಿ ಪರೀಕ್ಷಿಸಿ ಗೊತ್ತುಮಾಡಬೇಕು.

೫೭-೫೮. ತನ್ನ ಕಡೆಗೆ ಬೇಕಾದ ಜನಸಂಗ್ರಹಾಪೇಕ್ಷೆಯಿಂದ ಪರರಾಜರ ರಾಜ್ಯಕ್ಕೆ ಹೋಗಿ ಅಲ್ಲಿ ಚೆನ್ನಾಗಿ ಪರೀಕ್ಷಿಸಿ ತನ್ನ ರಾಜ್ಯಕ್ಕೆ ತರಲ್ಪಟ್ಟ ಜನರು, ದುಷ್ಟರೇ-ಶಿಷ್ಟರೇ ಎಂಬುದನ್ನು ಸಾವಕಾಶವಾಗಿ ಪರೀಕ್ಷಿಸಿ ಅಂಥವರಲ್ಲಾವನಾದರೂ ದುಷ್ಟನೆಂದು ತಿಳಿದುಬಂದರೆ ಅಂತಹವನ ವಿಷಯದಲ್ಲಿ ವಿಶ್ವಾಸವನ್ನಿಡಕೂಡದು.

**ವೃತ್ತಿಂ ತಸ್ಯಾಪಿ ವರ್ತೇತ ಜನಸಂಗ್ರಹಕಾಮ್ಯಯಾ ।**
**ರಾಜಾ ದೇಶಾನ್ತರಪ್ರಾಪ್ತಂ ಪುರುಷಂ ಪೂಜಯೇದ್ಭೃಶಂ ॥ ೫೯ ॥**

**ಸಹಾಯಂ ದೇಶಸಂಪ್ರಾಪ್ತಂ ಬಹುಮಾನೇನ ಚಿಂತಯೇತ್ ।**
**ಕಾಮಂ ಭೃತ್ಯಾರ್ಜನಂ ರಾಜಾ ನೈವ ಕುರ್ಯಾದ್ಭೃಗೂತ್ತಮ ॥ ೬೦ ॥**

**ನ ವೈ ವಾಸಂ ವಿಭಕ್ತಂ ತು ಭೃತ್ಯಂ ಕುರ್ಯಾತ್ಕಥಂಚನ ।**
**ಶಸ್ತ್ರಮಗ್ನಿಂ ವಿಷಂ ಸರ್ಪಾನ್ನಿಸ್ತ್ರಿಂಶಮಪಿ ಚೈಕತಃ ॥ ೬೧ ॥**

**ಭೃತ್ಯಾ ಮನುಜ ಶಾರ್ದೂಲ ಕುಭೃತ್ಯಾಶ್ಚ ತಥೈಕತಃ ।**
**ತೇಷಾಂ ಚಾರೇಣ ವಿಜ್ಞಾನಂ ರಾಜಾ ವಿಜ್ಞಾಯ ನಿತ್ಯಶಃ ॥ ೬೨ ॥**

**ಗುಣಿನಾಂ ಪೂಜನಂ ಕುರ್ಯಾನ್ನಿರ್ಗುಣಾನಾಂ ಚ ಶಾಸನಂ ।**
**ಕಥಿತಾಃ ಸತತಂ ರಾಮ ರಾಜಾನಶ್ಚಾರಚಕ್ಷುಷಃ ॥ ೬೩ ॥**

---

೫೯. ಜನಸಂಗ್ರಹಕಾಮ್ಯನಾದ ರಾಜನು ದುಷ್ಟರನ್ನೂ ಸಹ ತೀರಾ ತಿರಸ್ಕರಿಸದೆ, ಅವರಿಗೂ ನೌಕರಿಯನ್ನು ಕೊಡಬೇಕು. ಆದರೆ ಅಂತಹವರ ವಿಷಯದಲ್ಲಿ ಒಂದು ಕಣ್ಣಿಟ್ಟೇ ಇರಬೇಕು. ಗೌರವಸ್ಥರಾದ ದೇಶಾಂತರದ ಜನರಾರಾದರೂ ತನ್ನನ್ನು ನೋಡಲು ಬಂದರೆ ಅವರನ್ನು ಮಹಾರಾಜನು ಗೌರವಿಸಬೇಕು.

೬೦. ದೇಶಸಂಪ್ರಾಪ್ತವಾದ ಕ್ರಮದಿಂದ ಅವನಿಗೆ ಬಹುಮಾನಮಾಡಬೇಕು. ಯಥೇಚ್ಛವಾಗಿ ಭೃತ್ಯಾರ್ಜನೆಯನ್ನು ಮಾಡಬಾರದು.

೬೧. ಭೃತ್ಯನಾದವನು ವಿಭಕ್ತನಾಗಿರಲು ಅವಕಾಶಕೊಡಬಾರದು. ಶಸ್ತ್ರವನ್ನೂ, ಅಗ್ನಿಯನ್ನೂ, ಸರ್ಪದವಿಷವನ್ನೂ, ಕತ್ತಿಯನ್ನೂ ಪ್ರತ್ಯೇಕವಾಗಿರಿಸಬೇಕು.

೬೨. ಎಲೈ ಪರಶುರಾಮನೇ ! ಕೇಳು. ಭೃತ್ಯರಲ್ಲಿ ಅನೇಕ ಕೆಟ್ಟಮನಸ್ಸಿನ ದುಷ್ಟರಿರಬಹುದು. ಅಂಥವರಮೇಲೆ ಪ್ರತಿದಿನವೂ ಕಣ್ಣಿಟ್ಟು ಗೂಢಚಾರರ ಮೂಲಕ ಅವರ ಯೋಗ್ಯತೆಯನ್ನು ರಾಜನು ಪರೀಕ್ಷಿಸುತ್ತಲೇ ಇರಬೇಕು.

೬೩. ರಾಜರು ಗೂಢಚಾರರನೇಕರನ್ನು ನಿಯಮಿಸಿ ರಾಜ್ಯದಲ್ಲಿರುವ ಜನರ ಯೋಗ್ಯತೆಯನ್ನೆಲ್ಲಾ ಚೆನ್ನಾಗಿ ವಿಮರ್ಶಿಸಿ, ಅವರಲ್ಲಿ ಗುಣಾಢ್ಯರಾದವರಿಗೆ ವಿಶೇಷವಾಗಿ ಸಹಾಯಮಾಡಬೇಕು. ದುಷ್ಟರನ್ನು ದಂಡಿಸಬೇಕು. ಈ ಕಾರಣದಿಂದಲೇ ರಾಜರಾದವರಿಗೆ ಚಾರಚಕ್ಷು (ಗೂಢಚಾರರೆಂಬ ಕಣ್ಣುಳ್ಳವ) ಗಳೆಂದು ಹೆಸರು ಬಂದಿರುವುದು.

**ಸ್ವದೇಶೇ ಪರದೇಶೇ ಚ ಜಾತಿಶೀಲಾನ್ವಿಚಕ್ಷಣಾನ್ ।**
**ಅನಾಹಾರ್ಯಾನ್ಕ್ಲೇಶಸಹಾನ್ನಿಯುಂಜೀತ ಸದಾ ಚರಾನ್ ॥ ೬೪ ॥**

**ಜನಸ್ಯಾವಿತತಾ ನ್ಸೌಮ್ಯಾಂಸ್ತಥಾ ಜ್ಞಾತಾನ್ಪರಸ್ಪರಂ ।**
**ವಣಿಜೋ ಮಂತ್ರಕುಶಲಾನ್ಸಾಂವತ್ಸರ ಚಿಕಿತ್ಸಕಾನ್ ॥ ೬೫ ॥**

**ತಥಾ ಪ್ರವ್ರಜಿತಾಕಾರಾನ್ರಾಜಾ ಚಾರಾನ್ನಿಯೋಜಯೇತ್ ।**
**ನೈಕಸ್ಯ ರಾಜಾ ಶ್ರದ್ಧಧ್ಯಾಚ್ಚಾರಸ್ಯಾಪಿ ಚ ಭಾಷಿತಂ ॥ ೬೬ ॥**

**ದ್ವಯೋಸ್ಸಂವಾದಮಾಜ್ಞಾಯ ಸಂದಧ್ಯಾನ್ನೃಪತಿಸ್ತತಃ ।**
**ಪರಸ್ಪರಸ್ಯಾವಿದಿತೌ ಯದಿ ಸ್ಯಾತಾಂ ನ ತಾವುಭೌ ॥ ೬೭ ॥**

---

೬೪. ಈಗ ಗೂಢಚಾರರಾಗಿರುವವರ ಲಕ್ಷಣವನ್ನು ತಿಳಿಸುತ್ತೇನೆ, ಕೇಳು. ಸ್ವದೇಶದಲ್ಲಿಯಾಗಲಿ, ಪರದೇಶದಲ್ಲಿಯಾಗಲಿ ಆ ಗೂಢಚಾರರು ವಾಸವಾಗಿರ ಬಹುದು. ಆದರೆ ಅವರು ವಿಚಕ್ಷಣರಾಗಿಯೂ, ಜಾತಿಶೀಲ (ಉತ್ತಮಜಾತಿ) ರಾಗಿಯೂ ಇರಬೇಕು. ಅವರು ನಿಸ್ಪೃಹರಾಗಿರಬೇಕು. ಕ್ಲೇಶಗಳನ್ನು ಸಹಿಸ ತಕ್ಕವರಾಗಿರಬೇಕು. ಇಂತಹವರನ್ನೇ ಚುನಾಯಿಸಬೇಕು.

೬೫. ಗೂಢಚಾರರು ಬಹು ಸೌಮ್ಯರಾಗಿ ಕಾಣಿಸಿಕೊಳ್ಳಬೇಕು. ಒಬ್ಬರಿ ಗೊಬ್ಬರು ಪರಿಚಯವುಳ್ಳವರಾಗಿರಬೇಕು. ಇಂಥವರು ವರ್ತಕರಂತೆಯೂ, ಮಂತ್ರ ವಾದಿಗಳಂತೆಯೂ, ಜೋಯಿಸರಂತೆಯೂ, ವೈದ್ಯರಂತೆಯೂ, ಬೈರಾಗಿಗಳಂತೆಯೂ ವೇಷಹಾಕಿಕೊಂಡು ಸಂಚರಿಸುತ್ತಾ ಪ್ರಪಂಚವೃತ್ತಾಂತವನ್ನೂ, ಜನರ ಮಾತು ಕಥೆಗಳನ್ನೂ ತಿಳಿದುಕೊಳ್ಳುತಲಿರಬೇಕು.

೬೬-೬೭. ಒಬ್ಬ ಗೂಢಚಾರನು ಒಂದು ಮಾತನ್ನು ಹೇಳಿಬಿಟ್ಟನೆಂದರೆ ಅದನ್ನು ಮಹಾರಾಜನು ಥಟ್ಟನೆ ನಂಬಿಬಿಡಬಾರದು. ಇಬ್ಬರಿಂದ ಅದನ್ನು ಖಚಿತ ಮಾಡಿಕೊಳ್ಳಬೇಕು. ಆ ವಿಷಯದಲ್ಲಿ ಬೇರೆಯವರೇನು ಮಾತನಾಡಿಕೊಳ್ಳುತ್ತಾ ರೆಂಬುದನ್ನು ತಿಳಿಯಬೇಕು. ಮಹಾರಾಜನು ಬೇರೆ ಬೇರೆಯವರನ್ನು ವಿಚಾರಿಸುವ ಸಂಗತಿ ಅವರಲ್ಲೊಬ್ಬರಿಗೊಬ್ಬರಿಗೆ ಪರಸ್ಪರ ತಿಳಿಯಕೂಡದು.

**ತಸ್ಮಾದ್ರಾಜಾ ಪ್ರಯತ್ನೇನ ಗೂಢಾಂಶ್ಚಾರಾನ್ಪ್ರಯೋಜಯೇತ್ ।**
**ರಾಜ್ಯಸ್ಯ ಮೂಲಮೇತಾವದ್ಯದ್ರಾಜ್ಞಶ್ಚಾರದೃಷ್ಟಿತಾ ॥ ೩೮ ॥**

**ಚಾರಾಣಾಮಪಿ ಯತ್ನೇ ನ ರಾಜ್ಞಾ ಕಾರ್ಯಂ ಪರೀಕ್ಷಣಂ ।**
**ರಾಗಾಪರಾಗೌ ಭೃತ್ಯಾನಾಂ ಜನಸ್ಯ ಚ ಗುಣಾಗುಣಾನ್ ॥ ೩೯ ॥**

**ಶುಭಾನಾಮಶುಭಾನಾಂ ಚ ವಿಜ್ಞಾನಂ ರಾಮ ಕರ್ಮಣಾಂ ।**
**ಸರ್ವಂ ರಾಜ್ಞಾಂ ಚರಾಯತ್ತಂ ತೇಷ್ವಾಯತ್ತಸ್ಸದಾ ಭವೇತ್ ॥ ೨೦ ॥**

**ಕರ್ಮಣಾ ಕೇನ ಮೇ ಲೋಕೇ ಜನಸ್ಸರ್ವೋಽನುರಜ್ಯತೆ ।**
**ವಿರಜ್ಯೇತ ತಥಾ ಕೇನ ವಿಜ್ಞೇಯಂ ತನ್ಮಹೀಕ್ಷಿತಾ ॥ ೨೧ ॥**

**ವಿರಾಗಜನನಂ ಸರ್ವಂ ವರ್ಜನೀಯಂ ಪ್ರಯತ್ನತಃ ॥ ೨೧ ॥**

---

೩೮. ಆದ್ದರಿಂದ ಮಹಾರಾಜನು ಅತ್ಯಂತ ಪ್ರಯತ್ನಮಾಡಿ ಗೂಢಚಾರರನ್ನು (ಡಿಟೆಕ್ಟೀವ್) ಗೊತ್ತುಮಾಡಿಕೊಂಡಿರಬೇಕು. ಇಂತಹ ಗೂಢಚಾರರೇ ರಾಜ್ಯದ ತಳ ಹದಿಗೆ ಸಮಾನವಾದ್ದರಿಂದ ಇಂತಹ ಚಾರದೃಷ್ಟಿತ್ವವು ಮಹಾರಾಜನಿಗೆ ಇದ್ದೇ ಇರಬೇಕು.

೩೯-೨೦. ಗೂಢಚಾರರನ್ನು ರಾಜನು ಏಕಾಏಕಿ ನಂಬಿಬಿಡಬಾರದು. ಅವರು ಮಾಡುವ ಕೆಲಸಗಳನ್ನು ಚೆನ್ನಾಗಿ ಪರೀಕ್ಷೆಮಾಡುತ್ತಲಿರಬೇಕು. ತಾನೂ ಸಹ ಭೃತ್ಯಜನರ ರಾಗಾಪರಾಗಗಳನ್ನೂ, ಗುಣಾವಗುಣಗಳನ್ನೂ, ಶುಭಾಶುಭವಿಜ್ಞಾನವನ್ನೂ, ಕರ್ಮಕೌಶಲವನ್ನೂ ತೀಕ್ಷ್ಣದೃಷ್ಟಿಯಿಂದ ನೋಡುತ್ತಲೇ ಇರಬೇಕು. ಮುಖ್ಯವಾಗಿ ಹೇಳುವುದೇನೆಂದರೆ ;—ಸಕಲವನ್ನೂ ರಾಜನು ಗೂಢಚಾರರಿಗೆ ವಹಿಸಿ ಅವರ ವಿಷಯದಲ್ಲಿ ಬಹು ಜಾಗರೂಕತೆಯನ್ನು ವಹಿಸಿರಬೇಕು.

೨೧. ನಾನು ಹೇಗೆ ಎಂತಹ ಕೆಲಸಮಾಡಿದರೆ, ಜನರು ನನ್ನಲ್ಲಿ ಪ್ರೀತಿಯನ್ನಿಡುವರೋ, ಎಂತಹ ಕೆಲಸದಿಂದ ಜನರು ಜುಗುಪ್ಸೆಪಡುವರೋ ಎಂಬ ವಿಚಾರವನ್ನು ಮಹಾರಾಜನು ಚೆನ್ನಾಗಿ ತಿಳಿದುಕೊಂಡ ಬಳಿಕ ವಿರಾಗಜನಕವಾದ (ಜನರಿಗೆ ಪ್ರೀತಿಯಿಲ್ಲದ) ಕೆಲಸವನ್ನು ಖಂಡಿತವಾಗಿಯೂ ಬಿಟ್ಟುಬಿಡಬೇಕಯ್ಯಾ ! ಪರಶುರಾಮ ! !

**ಜನಾನುರಾಗಪ್ರಭವೋ ಹಿ ಲಕ್ಷ್ಮ್ಯೋ**
**ರಾಜ್ಞಾಂ ಯತೋ ಭಾರ್ಗವವಂಶಚಂದ್ರ ।**
**ತಸ್ಮಾತ್ಪ್ರಯತ್ನೇನ ನರೇಂದ್ರಮುಖ್ಯೈಃ**
**ಕಾರ್ಯೋಽನುರಾಗೋ ಭುವಿ ಮಾನವೇಷು　　　　॥ ೭೨ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಸಹಾಯಸಂಪತ್ತಿರ್ನಾಮ**
**ಚತುರ್ವಿಂಶೋಽಧ್ಯಾಯಃ**

---

೭೨. ಪರಶುರಾಮ ! ನನ್ನ ಮಾತನ್ನು ಮನಸ್ಸಿಟ್ಟು ಕೇಳು. ಮಹಾರಾಜನ ಲಕ್ಷ್ಮ್ಯವು ಸರ್ವದಾ ಜನಾನುರಾಗವನ್ನು ಸಂಪಾದಿಸುವ ಕಡೆಗೇ ಇರಬೇಕಯ್ಯಾ ! ಆದುದರಿಂದಲೇ ನಾನು ಇದುವರಿಗೆ ನಿನಗೆ ಒತ್ತಿಯೊತ್ತಿ ಮಹಾರಾಜರುಗಳಾದವರು ಜನಾನುರಾಗಪರರಾಗುವುದರಲ್ಲೇ ಹೆಚ್ಚು ಅಸಕ್ತರಾಗಿರಬೇಕೆಂದು ಹೇಳಿರುವೆನೆಂದು ತಿಳಿದುಕೋ.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ರಾಜಸಹಾಯಸಂಪತ್ತಿಯೆಂಬ ಹೆಸರಿನ
ಇಪ್ಪತ್ತನಾಲ್ಕನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಪಂಚವಿಂಶತಿತಮೋಽಧ್ಯಾಯಃ

### ಪುಷ್ಕರ ಉವಾಚ

**ಯಥಾನುವರ್ತಿತವ್ಯಂ ಸ್ಯಾದ್ರಾಮ ರಾಜೋಪಜೀವಿಭಿಃ ।**
**ತಥಾ ತೇ ಕಥಯಿಷ್ಯಾಮಿ ನಿಬೋಧ ಗದತೋ ಮಮ ॥ ೧ ॥**

**ಆಜ್ಞಾ ಸರ್ವಾತ್ಮನಾ ಕಾರ್ಯಾ ಸ್ವಶಕ್ತ್ಯಾ ಭೃಗುನಂದನ ।**
**ಆಕ್ಷಿಪ್ಯ ವಚನಂ ತಸ್ಯ ನ ವಕ್ತವ್ಯಂ ತಥಾ ವಚಃ ॥ ೨ ॥**

**ಅನುಕೂಲಂ ಪ್ರಿಯಂ ತಸ್ಯ ವಕ್ತವ್ಯಂ ಜನಸನ್ನಿಧೌ ।**
**ರಹೋಗತಸ್ಯ ವಕ್ತವ್ಯಮಪ್ರಿಯಂ ಯದ್ಧಿತಂ ಭವೇತ್ ॥ ೩ ॥**

---

### ಇಪ್ಪತ್ತೈದನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನನ್ನು ಕುರಿತು ಮತ್ತೂ ಹೇಳುತ್ತಾನೆ. ಮಹಾರಾಜನನ್ನು ಆಶ್ರಯಿಸಿಕೊಂಡು ಕೆಲಸಮಾಡುವ ಉಪಜೀವಿ (ನೌಕರರು) ಗಳು ಯಾವ ರೀತಿ ನಡೆದುಕೊಳ್ಳಬೇಕೆಂಬ ವಿಚಾರವನ್ನೀಗ ತಿಳಿಸುತ್ತೇನೆ, ಕೇಳಯ್ಯ.

೨. ಮಹಾರಾಜನ ಆಜ್ಞೆಯು ಸರ್ವಾತ್ಮನಾ ಸ್ವಶಕ್ತಿಯಿಂದಲೇ ನಿರ್ವಹಿಸಲ್ಪಡಬೇಕು. ಮಹಾರಾಜನು ಆಡಿದ ಮಾತನ್ನು ಆಕ್ಷೇಪಿಸಿ ಯಾವನೂ ಎದುರು ಮಾತನ್ನೇ ಆಡಕೂಡದು.

೩. ಜನಗಳೆದುರಿಗಿರುವಾಗ ಅವರೆದುರಿಗೆ ಮಹಾರಾಜನಿಗೆ ಅನುಕೂಲವಾಗಿಯೂ, ಪ್ರಿಯವಾಗಿಯೂ ಇರುವ ಮಾತನ್ನೇ ಆಡಬೇಕು. ಒಂದು ವೇಳೆ ಅದು ಮಹಾರಾಜನಿಗೆ ಅಪ್ರಿಯವೆಂದು ತೋರಿ ಬಂದು ಪರಿಣಾಮದಲ್ಲಿ ಹಿತಕರವಾಗುವುದಿದ್ದರೆ, ಆ ವಿಷಯವನ್ನು ರಹಸ್ಯವಾಗಿ ಮಹಾರಾಜರೊಬ್ಬರೇ ಇದ್ದಾಗ ಹೇಳಬೇಕು.

**ಪರಾರ್ಥಮಥ ವಕ್ತವ್ಯಂ ಸ್ವಸ್ಥೇ ಚೇತಸಿ ಭಾರ್ಗವ ।**
**ಸ್ವಾಸ್ಥ್ಯಂ ಸುಹೃದ್ಭಿರ್ವಕ್ತವ್ಯಂ ನ ಸ್ವಯಂ ತು ಕಥಂಚನ ॥ ೪ ॥**

**ಕಾರ್ಯಾತಿಪಾತಕಂ ಕಾರ್ಯೇ ರಕ್ಷಿತವ್ಯಂ ಪ್ರಯತ್ನತಃ ।**
**ನ ಚ ಹಿಂಸ್ಯಧನಂ ಕಿಂಚಿನ್ನಿಯುಕ್ತೇನ ಚ ಕರ್ಮಣಿ ॥ ೫ ॥**

**ನೋಪೇಕ್ಷ್ಯಂ ತಸ್ಯ ಮಾನಂ ಚ ತಥಾ ರಾಜ್ಞಾ ಪ್ರಿಯೋ ಭವೇತ್ ।**
**ರಾಜ್ಞಶ್ಚ ನ ತಥಾ ಕಾರ್ಯಂ ವೇಷಭಾಷಿತಚೇಷ್ಟಿತಂ ॥ ೬ ॥**

**ರಾಜಲೀಲಾ ನ ಕರ್ತವ್ಯಾ ತದ್ದಿಷ್ಟಂ ಚ ವಿವರ್ಜಯೇತ್ ।**
**ರಾಜ್ಞಸ್ಸಮಾಧಿಕೌ ವೇಷೌ ನ ತು ಕಾರ್ಯೌ ವಿಜಾನತಾ ॥ ೭ ॥**

---

೪. ಮಹಾರಾಜರ ಮನಸ್ಸು ಸರಿಯಾಗಿದ್ದ ಸಮಯವನ್ನರಿತು ಇತರರ ವಿಚಾರವನ್ನೂ, ಅವರಿಗಾಗಬೇಕಾದ ಪ್ರಯೋಜನವನ್ನೂ ತಿಳಿಸಬೇಕು. ತನಗೇನಾದರೂ ಪ್ರಯೋಜನವಾಗಬೇಕಾಗಿದ್ದರೆ, ಅದನ್ನು ಮಹಾರಾಜರಿಗೆ ತಾನೇ ಹೇಳಿಕೊಳ್ಳಬಾರದು. ತನಗೂ, ಮಹಾರಾಜರಿಗೂ ಆಪ್ತ ಸ್ನೇಹಿತರಾದವರ ಮೂಲಕ ಸ್ವವಿಷಯವನ್ನು ತಿಳಿಸಬೇಕು.

೫. ಮಾಡಬೇಕಾದ ಕಾರ್ಯವು ಕೆಡದೆ ಇದ್ದ ರೀತಿಯಿಂದ ಅದನ್ನು ಬಹಳ ಮಟ್ಟಿಗೆ ರಕ್ಷಿಸಿಕೊಂಡಿರಬೇಕು. ಒಂದು ಕೆಲಸವನ್ನೊಪ್ಪಿಕೊಂಡವನು ಅದರಿಂದೆಷ್ಟೇ ತೊಂದರೆಯಾದರೂ ಅದನ್ನು ಸಾಧಿಸಲೇಬೇಕು.

೬. ತನಗೆ ಬರುವ ಮರ್ಯಾದೆಯನ್ನು ಉಪೇಕ್ಷಿಸಬಾರದು. ಆ ಕೆಲಸದಿಂದ ರಾಜನಿಗೆ ಸಂತೋಷವಾಗುವ ರೀತಿ ನಡೆದುಕೊಳ್ಳಬೇಕು. ರಾಜನು ಮಾಡುವ ಕಾರ್ಯವನ್ನೂ, ವೇಷಭಾಷಿತಚೇಷ್ಟಿತಗಳನ್ನೂ ಗಮನಿಸಬಾರದು.

೭. ರಾಜನಂತೆ ಲೀಲೆಯನ್ನು ಮಾಡಬಾರದು. ಅವನಿಗಿಷ್ಟವಿಲ್ಲದ ಕೆಲಸವನ್ನು ಮಾಡಬಾರದು. ಬುದ್ಧಿವಂತನಾದವನು ರಾಜನಿಗೆ ಸಮಾನವಾದ ವೇಷಭೂಷಣಗಳನ್ನು ಧರಿಸಿರಬಾರದು.

**ದ್ಯೂತಾದಿಷು ತಥೈವಾಸ್ಯ ಕೌಶಲಂ ತು ಪ್ರದರ್ಶಯೇತ್ ।**
**ಪ್ರದರ್ಶ್ಯ ಕೌಶಲಂ ಚಾಸ್ಯ ರಾಜಾನಂ ನ ವಿಶೇಷಯೇತ್ ॥ ೮ ॥**

**ಅಂತಃಪುರಧನಾಧ್ಯಕ್ಷೈರ್ವೈರಿದೂತೈರ್ನಿರಾಕೃತೈಃ ।**
**ಸಂಸರ್ಗಂ ನ ವ್ರಜೇದ್ರಾಮ ವಿನಾ ಪಾರ್ಥಿವಶಾಸನಂ ॥ ೯ ॥**

**ಸಿಸ್ನೇಹತಾಂ ಚಾವಮಾನಂ ತತ್ಪ್ರಯುಕ್ತಂ ಚ ಗೋಪಯೇತ್ ।**
**ಯಚ್ಚ ಗುಹ್ಯಂ ಭವೇದ್ರಾಜ್ಞಸ್ತನ್ನ ಲೋಕೇ ಪ್ರಕಾಶಯೇತ್ ॥ ೧೦ ॥**

**ನೃಪೇಣ ಶ್ರಾವಿತಂ ಯತ್ಸ್ಯಾದ್ಗುಹ್ಯಾದ್ಗುಹ್ಯಂ ಭೃಗೂತ್ತಮ ।**
**ನ ತತ್ಸಂಶ್ರಾವಯೇಲ್ಲೋಕೇ ತಥಾ ರಾಜ್ಞಃ ಪ್ರಿಯೋ ಭವೇತ್ ॥ ೧೧ ॥**

---

೮. ಪಗಡೆ, ಚದುರಂಗ ಮುಂತಾದ ಆಟ (ದ್ಯೂತ) ಗಳನ್ನು ಮಹಾರಾಜ ನೊಡನೆ ಆಡುವಾಗ ತನ್ನ ಚಮತ್ಕಾರವನ್ನು ತೋರಿಸಿಕೊಳ್ಳಬೇಕು. ಆದರೆ ಕೌಶಲ ವನ್ನು ತೋರಿಸಿದ ಬಳಿಕ ರಾಜನನ್ನು ವಿಶೇಷಿಸಿ (ಹೀಯಾಳಿಸಿ) ಮಾತ್ರ ಮಾತನಾಡಿ ಬಿಡಬಾರದು.

೯. ರಾಜನ ಕಟ್ಟಪ್ಪಣೆಯಾಗುವವರೆಗೂ ಅಂತಃಪುರಧನಾಧ್ಯಕ್ಷರುಗಳಿಂದಲೂ, ನಿರಾಕೃತರಾದ ವೈರಿದೂತರಿಂದಲೂ ಸಂಬಂಧವನ್ನು ಬಿಡಕೂಡದು.

೧೦. ತನ್ನನ್ನು ಹೊಗಳಿಸಿಕೊಳ್ಳುವುದು, ಮಹಾರಾಜನನ್ನು ನಿಮಿತ್ತಮಾಡಿ ಕೊಂಡು ಇನ್ನೊಬ್ಬರನ್ನು ಅವಮಾನಮಾಡುವಂತಹ ಕೆಲಸಗಳನ್ನೂ, ಮಾತುಗಳನ್ನೂ ಆಡಕೂಡದು. ಮಹಾರಾಜನಿಗೇನಾದರೂ ಅವಮಾನವಾದರೆ ಅದನ್ನು ಹೊರಕ್ಕೆ ಬಿಡಕೂಡದು. ಮಹಾರಾಜನ ವಿಷಯದಲ್ಲಿ ಯಾವ ಯಾವ ವಿಷಯಗಳನ್ನು ಗುಟ್ಟಾಗಿಟ್ಟಿರಬೇಕೋ ಅಂತಹವುಗಳನ್ನು ಲೋಕದಲ್ಲಿ ಸರ್ವಥಾ ಪ್ರಕಟಪಡಿಸ ಕೂಡದು.

೧೧. ರಾಜನಿಂದ ತನಗೆ ತಿಳಿಸಲ್ಪಟ್ಟ ಮಾತೆಂದರೆ, ಅದು ರಹಸ್ಯಗಳಿಗೆಲ್ಲಾ ರಹಸ್ಯವಾದುದೆಂದು ಭಾವಿಸಿ ಅದನ್ನು ಇನ್ನೊಬ್ಬರ ಕಿವಿಗೇ ಹಾಕಬಾರದು. ಹಾಗಿದ್ದವನೇ ರಾಜನ ಆಪ್ತಕಾರ್ಯದರ್ಶಿ (ಸೆಕ್ರಟರಿ) ಯಾಗಿರಲರ್ಹನು.

ಆಜ್ಞಾಪ್ಯಮಾನೇ ಚಾನ್ಯಸ್ಮಿನ್ನಮುತ್ಥಾಯ ತ್ವರಾನ್ವಿತಃ ।
ಅಹಂ ಕಿಂಕರವಾಣೀತಿ ವಾಚ್ಯೋ ರಾಜಾ ವಿಜಾನತಾ ॥ ೧೨ ॥

ಕಾರ್ಯಾವಸ್ಥಾಂ ಚ ವಿಜ್ಞಾಯ ಕಾರ್ಯಮೇತತ್ತಥಾ ಭವೇತ್ ।
ಸತತಂ ಕ್ರಿಯಮಾಣೇಸ್ಮಿಂಲ್ಲಾಘವಂ ತು ವ್ರಜೇದ್ಬುಧಃ । ॥ ೧೩ ॥

ರಾಜ್ಞಃ ಪ್ರಿಯಾಣಿ ವಾಕ್ಯಾನಿ ನ ಚಾತ್ಯರ್ಥಂ ಪುನಃಪುನಃ ।
ನಹಾಸ್ಯ ಶೀಲಶ್ಚ ಭವೇನ್ನ ಚಾಪಿ ಭ್ರುಕುಟೀಮುಖಃ ॥ ೧೪ ॥

ನಾತಿವಕ್ತಾ ನ ನಿರ್ವಕ್ತಾ ನ ಚ ಮಾತ್ಸರಿಕಸ್ತಥಾ ।
ಆತ್ಮಸಂಭಾವಿತಶ್ಚೈವ ನ ಭವೇತ್ತು ಕಥಂ ಚನ ॥ ೧೫ ॥

---

೧೨. ಒಬ್ಬನಿಗೆ ಮಹಾರಾಜನು ಒಂದು ಕೆಲಸವನ್ನು ಹೇಳಿ ಆ ಕೆಲಸವನ್ನು ಅವನು ಮಾಡಲು ಒಪ್ಪಿಕೊಂಡೊಡನೆಯೇ, ಮತ್ತೊಬ್ಬ ಭೃತ್ಯನು ಬೇಗ ಬೇಗ ಮೇಲಕ್ಕೆದ್ದು ನಿಂತು ಮಹಾಸ್ವಾಮಿ ! ನನಗೇನಪ್ಪಣೆ ! ಎಂದು ಕೇಳುತಲಿರಬೇಕು.

೧೩. ಈ ಕೆಲಸದ ಸ್ವರೂಪವಿಂತಹುದು ; ಇದನ್ನು ಮಾಡಿದರೆ ಹೀಗೇ ಆಗುವುದು, ಎಂದು ಸರಿಯಾಗಿ ತಿಳಿದುಕೊಳ್ಳದೆ ಕೆಸಲಕ್ಕೆ ಥಟ್ಟನೆ ಒಪ್ಪಿಕೊಂಡು ಬಿಡುವ ಮನುಷ್ಯನು ಬಹಳ ಲಾಘವಕ್ಕೆ ಗುರಿಯಾಗುತ್ತಾನೆ.

೧೪. ರಾಜನು ನಿಯಮಿಸಿದ ಕೆಲಸಕ್ಕೆ ಒಪ್ಪಿಕೊಂಡಾದ ಮೇಲೆ ಆ ವಿಚಾರ ವಾಗಿ ಸಂದೇಹಪಟ್ಟು ಪದೇ ಪದೇ ಕೇಳುತ್ತಿರಬಾರದು. ರಾಜನಿಗೆ ಎದುರಾಗಿ ನಿಂತಿದ್ದಾಗ ಹಾಸ್ಯಶೀಲನಾಗಿರಬಾರದು ; ಹುಬ್ಬುಗಂಟಿಕ್ಕಿಕೊಂಡಿರಬಾರದು.

೧೫. ರಾಜನೆದುರಿಗೆ ಮನಸ್ವೀ ಮಾತನಾಡಬಾರದು ; ಮಾತನಾಡದೆ ಮೌನ ವಾಗಿಯೂ ಇರಬಾರದು. ಮಾತ್ಸರ್ಯಭಾವವನ್ನು ತ್ಯಾಗಮಾಡಿಬಿಡಬೇಕು. ತನ್ನನ್ನು ತಾನೇ ಹೊಗಳಿಕೊಳ್ಳುತ್ತಾ ಆತ್ಮಸಂಭಾವಿತನೆನಿಸಿಕೊಳ್ಳಬಾರದು.

ದುಷ್ಕೃತಾನಿ ನರೇಂದ್ರಸ್ಯ ನ ಚ ಸಂಕೀರ್ತಯೇತ್ಕ್ವಚಿತ್ ।
ವಸ್ತ್ರಂ ಪತ್ರಮಲಂಕಾರಂ ರಾಜ್ಞಾ ದತ್ತಂ ತು ಧಾರಯೇತ್ ॥ ೧೬ ॥

ಔದಾರ್ಯೇಣ ನ ತದ್ದೇಯಮನ್ಯಸ್ಮಿನ್ಭೂತಿಮಿಚ್ಛತಾ ।
ನಚೈವಾಧ್ಯಶನಂ ರಾಜ್ಞಃ ಸ್ವಪನಂ ಚಾಪಿ ಕಾರಯೇತ್ ॥ ೧೭ ॥

ನಾನಿರ್ದಿಷ್ಟೇ ತಥಾ ದ್ವಾರೇ ಪ್ರವಿಶೇತ ಕಥಂಚನ ।
ನ ಚ ಪಶ್ಯೇತ ರಾಜಾನಮಯೋಗ್ಯಾಸು ಚ ಭೂಮಿಷು ॥ ೧೮ ॥

ರಾಜ್ಞಸ್ತು ದಕ್ಷಿಣೇ ಪಾರ್ಶ್ವೇ ವಾಮೇ ಚೋಪವಿಶೇತ್ತದಾ ।
ಪುರಸ್ತಾತ್ತು ಯಥಾ ಪಶ್ಚಾದಾಸನಂ ತು ವಿಗರ್ಹಿತಂ ॥ ೧೯ ॥

ಜೃಂಭಾ ನಿಷ್ಠೀವನಂ ಕಾಮಂ ಕೋಪಂ ಪರ್ಯಂಕಿಕಾಶ್ರಯಂ ।
ಮುಕುಟಂ ವಾತಮುದ್ಗಾರಂ ತತ್ಸಮೀಪೇ ವಿವರ್ಜಯೇತ್ ॥ ೨೦ ॥

---

೧೬. ಪಾಪಕಾರ್ಯಗಳನ್ನೂ ಕೆಟ್ಟ ಪದ(ಶಬ್ದ)ಗಳನ್ನೂ ಮಹಾರಾಜನೆದುರಿಗೆ ಹೇಳಬಾರದು. ಮಹಾರಾಜನು ಬಹುಮಾನವಾಗಿ ಕೊಟ್ಟ ವಸ್ತ್ರಪತ್ರಾಲಂಕಾರ ಸಾಮಗ್ರಿಗಳನ್ನು ತಾನೇ ಧರಿಸಿಕೊಳ್ಳಬೇಕು. ಐಶ್ವರ್ಯಕಾಮನಾದವನು ತನಗೆ ರಾಜದತ್ತವಾದ ವಸ್ತುಗಳನ್ನು ಔದಾರ್ಯಬುದ್ಧಿಯಿಂದ ಖಂಡಿತವಾಗಿ ಇನ್ನೊಬ್ಬನಿಗೆ ಕೊಟ್ಟುಬಿಡಬಾರದು.

೧೭. ರಾಜನೆದುರಿಗೆ ಕೂತುಕೊಂಡು ಊಟಮಾಡಬಾರದು. ರಾಜನೆದುರಿಗೆ ಮಲಗಿಕೊಂಡು ನಿದ್ದೆಮಾಡಬಾರದು,

೧೮. ಹೋಗಕೂಡದೆಂದು ನಿಷೇಧಿಸಿರುವ ಬಾಗಿಲುಗಳಲ್ಲಿ ಪ್ರವೇಶಮಾಡಬಾರದು. ಅಯೋಗ್ಯವಾದ ಸ್ಥಳಗಳಲ್ಲಿ ಮಹಾರಾಜನನ್ನು ನೋಡಕೂಡದು.

೧೯. ಯಾರೇ ಆಗಲಿ ಮಹಾರಾಜನ ಎಡಪಕ್ಕದಲ್ಲಾಗಲೀ ಬಲಪಕ್ಕದಲ್ಲಾಗಲಿ ಕುಳಿತುಕೊಳ್ಳಬೇಕೇ ಹೊರತು ಮುಂದುಗಡೆಯಲ್ಲಾಗಲಿ ಹಿಂಬದಿಯಲ್ಲಾಗಲಿ ಯಾವಾಗಲೂ ಕುಳಿತುಕೊಳ್ಳಬಾರದು.

೨೦. ರಾಜನ ಹತ್ತಿರ ಕೂತಿದ್ದಾಗ ಆಕಳಿಸಬಾರದು. ಸೀನಬಾರದು. ಕಾಮಕ್ರೋಧಗಳನ್ನು ತೋರಿಸಿಕೊಳ್ಳಬಾರದು. ಮಂಚದ ಮೇಲೆ ಹತ್ತಿ ಕುಳಿತುಕೊಳ್ಳಬಾರದು. ರುಮಾಲನ್ನು ಸುತ್ತಿಕೊಳ್ಳಬಾರದು. ವಾಂತಿಮಾಡಬಾರದು. ಅಪಾನವಾಯುವನ್ನು ಬಿಡಬಾರದು.

ಸ್ವಯಂ ತಥಾ ನ ಕುರ್ವೀತ ಸ್ವಗುಣಾಖ್ಯಾಪನಂ ಬುಧಃ ।
ಸ್ವಗುಣಾಖ್ಯಾಪನೇ ಕುರ್ಯಾತ್ಪರಾನೇವ ಪ್ರಯೋಜಕಾನ್ ॥ ೨೧ ॥

ಹೃದಯಂ ನಿರ್ಮಲಂ ಕೃತ್ವಾ ಪರಂ ಭಕ್ತಿಮುಪಾಶ್ರಿತೈಃ ।
ಅನುಜೀವಿಗಣೈರ್ಭಾವ್ಯಂ ನಿತ್ಯಂರಾಜ್ಞಾಮತಂದ್ರಿತೈಃ ॥ ೨೨ ॥

ಶಾಠ್ಯಂ ಲೌಲ್ಯಮುಪೈಶುನ್ಯಂ ನಾಸ್ತಿಕ್ಯಂ ಕ್ಷುದ್ರ ಥಾಂತಥಾ ।
ಚಾಪಲ್ಯಂ ಚ ಪರಿತ್ಯಾಜ್ಯಂ ನಿತ್ಯಂ ರಾಜಾನುಜೀವಿನಾ ॥ ೨೩ ॥

ಶ್ರುತೇನ ವಿದ್ಯಾಶಿಲ್ಪೈಶ್ಚ ಸಂಯೋಜ್ಯಾತ್ಮಾನಮಾತ್ಮನಾ ।
ರಾಜಸೇವಾಂ ತತಃ ಕುರ್ಯಾದ್ಭೂತಯೇ ಭೀತಿವರ್ಧನಃ ॥ ೨೪ ॥

---

೨೧. ತನ್ನ ಗುಣಗಳನ್ನು ತಾನೇ ಪ್ರಶಂಸಿಸಿಕೊಳ್ಳಬಾರದು. ತನ್ನಲ್ಲಿರುವ ಸುಗುಣಗಳನ್ನು ಇತರರು ಚೆನ್ನಾಗಿ ತಿಳಿದು ರಾಜನಿಗೆ ತಿಳಿಸುವಂತೆ ಪ್ರಯತ್ನಮಾಡಬೇಕು.

೨೨. ಮಹಾರಾಜನಾದವನು,—ಯಾವನು ತನ್ನ ವಿಷಯದಲ್ಲಿ ನಿರ್ಮಲ ಹೃದಯದಿಂದಲೂ, ನಿಷ್ಕಾಪಟ್ಯದಿಂದಲೂ, ಶುದ್ಧ ಭಕ್ತಿಯಿಂದಲೂ ಇರುವನೋ ಅಂತಹ ಅನುಜೀವಿ (ರಾಜಸೇವಿ) ಯನ್ನೇ ಹತ್ತಿರದಲ್ಲಿಟ್ಟುಕೊಂಡು ಅವನನ್ನು ಕಾಪಾಡಿಕೊಳ್ಳುತ್ತಿರಬೇಕು.

೨೩. ರಾಜಾಶ್ರಯದಲ್ಲಿರುವ ಮನುಷ್ಯನು ಶಾಠ್ಯವನ್ನೂ, ಲೌಲ್ಯವನ್ನೂ ಬಿಟ್ಟವನಾಗಿರಬೇಕು. ಚಾಡಿಕೋರತನವನ್ನು ಮಾಡಬಾರದು. ಕ್ಷುದ್ರಭಾವವೂ, ನಾಸ್ತಿಕ್ಯವೂ ಅವನಿಗಿರಬಾರದು. ಮನಶ್ಚಾಂಚಲ್ಯವಂತೂ ಖಂಡಿತವಾಗಿ ಇರಲೇಕೂಡದು

೨೪. ರಾಜಾನುಜೀವಿಯು ಐಶ್ವರ್ಯವಂತನಾಗಬೇಕಾದರೆ ವಿದ್ಯಾವಂತನಾಗಿಯೂ, ಚಮತ್ಕಾರಿಯಾಗಿಯೂ, ತನ್ನಲ್ಲಿ ತಾನೇ ನಿಶ್ಚಯಜ್ಞಾನವುಳ್ಳವನಾಗಿಯೂ, ಸ್ವಾಮಿಭಕ್ತನಾಗಿಯೂ ಇದ್ದು ರಾಜಸೇವೆಯನ್ನು ತೃಪ್ತಿಕರವಾಗಿ ಮಾಡುತ್ತಿರಬೇಕು.

ನಮಸ್ಕಾರ್ಯಸ್ಸದಾ ಚಾಸ್ಯ ಪುತ್ರವಲ್ಲಭಮಂತ್ರಿಣಃ ।
ಸಚಿವೈಶ್ಚಾಸ್ಯ ವಿಶ್ವಾಸಂ ನ ತು ಕಾರ್ಯಂ ಕಥಂಚನ ॥ ೨೫ ॥

ಅಪೃಷ್ಟಶ್ಚಾಸ್ಯ ನ ಬ್ರೂಯಾತ್ಕಾಮಂ ಬ್ರೂಯಾತ್ತಥಾಽಪದಿ ।
ಹಿತಂ ಪಥ್ಯಂ ಚ ವಚನಂ ಹಿತೈಸ್ಸಹ ಸುನಿಶ್ಚಿತಂ ॥ ೨೬ ॥

ಚಿತ್ತಂ ಚೈವಾಸ್ಯ ವಿಜ್ಞೇಯಂ ನಿತ್ಯಮೇವಾನುಜೀವಿನಾ ।
ಭರ್ತುರಾರಾಧನಂ ಕುರ್ಯಾಚ್ಚಿತ್ತಜ್ಞೋ ಮಾನವಃ ಸುಖಂ ॥ ೨೭ ॥

ರಾಗಾಪರಾಗೌ ಚೈವಾಸ್ಯ ವಿಜ್ಞೇಯೌ ಭೂತಿಮಿಚ್ಛತಾ ।
ತ್ಯಜೇದ್ವಿರಕ್ತಂ ನೃಪತಿಂ ರಕ್ತಾದ್ವೃತ್ತಿಂ ತು ಕಾಮಯೇತ್ ॥ ೨೮ ॥

---

೨೫. ಪುತ್ರರೂ, ವಲ್ಲಭರೂ, ಮಂತ್ರಿಗಳೂ ಸಹ ನಮಸ್ಕಾರಾರ್ಹರಾಗಿರಬೇಕು. ಆದರೆ ಇವರ ಸಚಿವರುಗಳೊಡನೆ ಹೆಚ್ಚು ವಿಶ್ವಾಸವನ್ನಿಡಬಾರದು.

೨೬. ಮಹಾರಾಜನು ತಾನಾಗಿ ಪ್ರಶ್ನೆ ಮಾಡದೆ ಇರುವಾಗ ಯಾವ ಮಾತನ್ನೂ ಆಡಬಾರದು. ಆದರೆ ಆಪತ್ಕಾಲ ಒದಗಿದಾಗ ಮಾತ್ರ ಅನುಜೀವಿಯಾದವನು ತನ್ನ ಮನಸ್ಸಿನ ಕೋರಿಕೆಯನ್ನು ಮಹಾರಾಜನಿಗೆ ಹೇಳಿಕೊಳ್ಳಬೇಕು. ಯಾವಾಗ ಮಾತನಾಡಬೇಕಾದರೂ ಮೊದಲೇ ಹಿತಚಿಂತಕರೊಡನೆ ಆಲೋಚನೆಮಾಡಿ ನಿಷ್ಕರ್ಷೆಮಾಡಿಕೊಂಡೇ ಹಿತವೂ, ಪಥ್ಯವೂ ಆದ ಮಾತನ್ನಾಡಬೇಕು.

೨೭. ರಾಜಾಶ್ರಯದಲ್ಲಿರುವ ಅನುಜೀವಿಯು ಪ್ರತಿದಿನವೂ ಮಹಾರಾಜನ ಚಿತ್ತವನ್ನರಿತೇ ಮಾತನಾಡಬೇಕು. ಈ ರೀತಿ ರಾಜಚಿತ್ತಾನುವರ್ತಿಯಾದ ಮಾನವನು ಸುಖವನ್ನು ಹೊಂದುವನು.

೨೮. ರಾಜನು ರಾಗವಿರಾಗಗಳಲ್ಲಿರುವ ಸಮಯವನ್ನು ಚೆನ್ನಾಗಿ ತಿಳಿದು ಯಾವ ಭೃತ್ಯನು ವಿರಕ್ತಿಸಮಯವನ್ನು ಬಿಟ್ಟು ಅನುರಕ್ತವೃತ್ತಿಯಿಂದಿರುವ ಸಮಯದಲ್ಲಿ ತನ್ನ ಇಷ್ಟವನ್ನು ತಿಳಿಯಪಡಿಸಿದರೆ, ಆಗಲೀಗ ಅವನ ಕೋರಿಕೆಯು ನೆರವೇರುವುದು.

ಕರ್ಮೋಪಕಾರಯೋರ್ನಾಶಂ ವಿಪಕ್ಷಾಭ್ಯುದಯಂ ತಥಾ ।
ಆಶಾಸಂವರ್ಧನಂ ಕೃತ್ವಾ ಫಲನಾಶಂ ಕರೋತಿ ಚ ॥ ೨೯ ॥

ಅಕೋಪೋಽಪಿ ಪ್ರಕೋಪಾಭಃ ಪ್ರಸನ್ನೋಽಪಿ ಚ ನಿಷ್ಫಲಃ ।
ವಾಕ್ಯಂ ಸಮುಂದಂ ವದತಿ ವೃತ್ತಿಚ್ಛೇದಂ ಕರೋತಿ ಚ ॥ ೩೦ ॥

ಪ್ರವೇಶವಾಕ್ಯಾನುದಿತೌ ನ ಸಂಭಾವಯತೀತ್ಯಥ ।
ಆರಾಧನಾಸು ಸರ್ವಾಸು ಸುಪ್ತವಚ್ಚ ವಿಚೇಷ್ಟತೇ ॥ ೩೧ ॥

ಕಥಾಸು ದೋಷೈಃ ಕ್ಷಿಪತಿ ವಾಕ್ಯಭೇದಂ ಕರೋತಿ ಚ ।
ಲಕ್ಷ್ಯತೇ ವಿಮುಖಶ್ಚೈವ ಗುಣಸಂಕೀರ್ತನೇ ಕೃತೇ ॥ ೩೨ ॥

---

೨೯. ಯಾವನು ತನಗೆ ಮಾಡಿದ ಉಪಕಾರದ ವಿಷಯದಲ್ಲಿ ಕೃತಜ್ಞತೆಯಿಡುವುದಿಲ್ಲವೋ, ಶತ್ರುಗಳ ಅಭ್ಯುದಯವನ್ನಾವನು ಕೋರುವನೋ, ಯಾವನು ಅತ್ಯಾಶಾಪರನಾಗಿರುವನೋ ಅವನು ಫಲವನ್ನೆಲ್ಲಾ ನಾಶಪಡಿಸಿಕೊಳ್ಳುತ್ತಾನೆ.

೩೦. ಮಹಾರಾಜನು ಯಾವುದಕ್ಕೂ ಮನಸ್ಸಿಲ್ಲದೆ ವಿರಕ್ತನಾಗಿರುವ ಲಕ್ಷಣವನ್ನು ಹೇಳುತ್ತೇನೆ, ಕೇಳು :—ಏನೇನೂ ಕೋಪವಿಲ್ಲದೇ ಹೋದರೂ ಮಹಾ ಕೋಪಿಷ್ಠನಂತೆ ನಟಿಸುವನು. ಪ್ರಸನ್ನನಾಗಿದ್ದರೂ ಯಾವ ಫಲವನ್ನೂ ಮಾಡದೆ ಇರುವುದು ; ಕಚ್ಚುತ್ತಾ ಬಿಡುತ್ತಾ ಮಾತನಾಡುವುದು ; ಕೆಲಸದಿಂದ ತೆಗೆದು ಬಿಡುವುದು ; ಎಲ್ಲೋ ನೋಡುತ್ತಿರುವನಂತೆ ತೋರುತ್ತಿರುವುದು ; ಯಾವ ಮಾತನ್ನಾಡಿದರೂ ಕಿವಿಗೇ ಹಾಕಿಕೊಳ್ಳದೆ ಇರುವುದು.

೩೧. ಯಾರೋ ಹೊರಗೆ ಬಂದು ನಿಂತಿದಾರೆಯೆಂದು ಪ್ರತೀಹಾರಿಯು ಹೇಳಿದರೂ ಅದನ್ನು ಮನಸ್ಸಿಗೇ ತಂದುಕೊಳ್ಳದೆ ಮಾತನಾಡದೆ ಇರುವುದು. ಯಾರೇನು ಮರ್ಯಾದೆಮಾಡಿ ಪೂಜಿಸಿ ಗೌರವಿಸಿ ಸ್ತೋತ್ರಮಾಡಿದರೂ ಮಲಗಿಕೊಂಡು ನಿದ್ದೆಮಾಡುವವನಂತೆ ನಟಿಸುವುದು.

೩೨. ಏನಾದರೂ ವೃತ್ತಾಂತವನ್ನು ಯಾರಾದರೂ ಹೇಳಿದರೆ ಅದರಲ್ಲಿ ದೋಷವನ್ನು ಹುಡುಕುವುದು, ಮಾತುಮಾತಿಗೂ ತಪ್ಪು ಹುಡುಕುವುದು. ಮಾತನಾಡಲು ಆರಂಭಿಸಿದರೆ ಅದನ್ನು ಲಕ್ಷ್ಯಮಾಡದೆ ಅಜ್ಞಾನದಲ್ಲಿರುವುದು.

**ದೃಷ್ಟಿಂ ಕ್ಷಿಪತ್ಯಥಾನ್ಯತ್ರ ಕ್ರಿಯಮಾಣೇ ಚ ಕರ್ಮಣಿ ।**
**ವಿರಕ್ತಲಕ್ಷಣಂ ಶ್ರುತ್ವಾ ಶೃಣು ರಕ್ತಸ್ಯ ಲಕ್ಷಣಂ ॥ ೩೩ ॥**

**ದೃಷ್ಟ್ವಾ ಪ್ರಸನ್ನೋ ಭವತಿ ವಾಕ್ಯಂ ಗೃಹ್ಣಾತಿ ಚಾದರಾತ್ ।**
**ಕುಶಲಾದಿಪರಿಪ್ರಶ್ನೇ ಸಂಪ್ರಯಚ್ಛತಿ ಚಾಸನಂ ॥ ೩೪ ॥**

**ವಿವಿಕ್ತದರ್ಶನೇ ಚಾಸ್ಯ ರಹಸ್ಯೇ ನ ಚ ಶಂಕತೇ ।**
**ಜಾಯತೇ ಹೃಷ್ಟವದನಃ ಶ್ರುತ್ವಾ ತಸ್ಯ ತು ಸಂಕಥಾಂ ॥ ೩೫ ॥**

**ಅಪ್ರಿಯಾಣ್ಯಪಿ ವಾಕ್ಯಾನಿ ತದುಕ್ತಾನ್ಯಭಿನಂದತಿ ।**
**ಉಪಾಯನಂ ಚ ಗೃಹ್ಣಾತಿ ಸ್ತೋಕಮಪ್ಯಾದರಾತ್ತಥಾ ॥ ೩೬ ॥**

---

೩೩. ಜನರು ಕೆಲಸಮಾಡುತ್ತಿರುವಾಗ ಅದರ ಕಡೆ ನೋಡದೆ ಬೇರೆಕಡೆ ದೃಷ್ಟಿಯಿಟ್ಟಿರುವುದು. ಇವುಗಳೆಲ್ಲಾ ವಿರಕ್ತಲಕ್ಷಣಗಳೆಂದು ತಿಳಿಯಬೇಕು. ಇನ್ನು ರಕ್ತನಾದ (ಉತ್ಸಾಹಶಾಲಿಯಾಗಿರುವ) ವನ ಲಕ್ಷಣವನ್ನು ಹೇಳುತ್ತೇನೆ, ಕೇಳು.

೩೪. ಯಾರನ್ನಾದರೂ ನೋಡಿದರೆ ಪ್ರಸನ್ನದೃಷ್ಟಿಯಿಂದ ನೋಡುವುದು. ಅವರು ಹೇಳಿದ ಮಾತನ್ನು ಆದರಣೆಯಿಂದ ಕೇಳುವುದು. ಯಾರಾದರೂ ಕುಶಲ ಪ್ರಶ್ನೆಯನ್ನು ಮಾಡಿದರೆ, ಬನ್ನಿ! ಆಸನದ ಮೇಲೆ ಕುಳಿತುಕೊಳ್ಳಿ! ಎಂದು ಉಪಚರಿಸುವುದು.

೩೫. ಯಾರೂ ಇಲ್ಲದೆ ಇದ್ದಾಗ ರಹಸ್ಯವಾಗಿ ಯಾರಾದರೂ ಬಂದು ನೋಡಬೇಕೆಂದು ಹೇಳಿದರೆ, ಅವರ ವಿಷಯದಲ್ಲಿ ಏನೂ ಸಂದೇಹಪಟ್ಟುಕೊಳ್ಳದೆ ಆದರಣೆಯಿಂದ ನಗುನಗುತ್ತಾ ಅವರನ್ನು ಬರಮಾಡಿಕೊಂಡು ಅವರೊಡನೆ ಸುಖಸಂಕಥಾಲಾಪವನ್ನು ಮಾಡುವುದು.

೩೬. ಅವರು ತನಗೆ ಅಪ್ರಿಯವಾದ ಮಾತನ್ನಾಡಿದಾಗ್ಯೂ ಅವರ ಮಾತಿಗೆ ಅಭಿನಂದಿಸುವುದು. ಅವರೇನಾದರೂ ಒಂದು ಫಲಪುಷ್ಪಾದ್ಯುಪಾಯನವನ್ನು ತಂದು ಕೊಟ್ಟರೆ ಅದೆಷ್ಟೇ ಸ್ವಲ್ಪ ಪದಾರ್ಥವಾಗಿದ್ದಾಗ್ಗೂ ಅದನ್ನು ಆದರದಿಂದ ಸ್ವೀಕರಿಸುವುದು.

ಕಥಾನ್ತರೇಷು ಸರತಿ ಪ್ರಹೃಷ್ಟವದನಸ್ತಥಾ ।
ಇತಿ ರಕ್ತಸ್ಯ ಕರ್ತವ್ಯಾ ಸೇವಾ ಭೃಗುಕುಲೋದ್ವಹ ॥
ಆಪತ್ಸು ನ ತ್ಯಜೇತ್ಪೂರ್ವಂ ವಿರಕ್ತಮಪಿ ಸೇವಿತಂ ॥ ೩೭ ॥

ಮಿತ್ರಂ ನ ಚಾಪತ್ಸು ತಥಾ ನ ಭೃತ್ಯಂ
ವ್ರಜಂತಿ ಯೇ ನಿರ್ಗುಣಮಪ್ರಮೇಯಂ ।
ಪ್ರಭುಂ ವಿಶೇಷೇಣ ಚ ತೇ ವ್ರಜಂತಿ
ಸುರೇಂದ್ರಧಾಮಾಸುರವೃಂದಜುಷ್ಟಂ ॥ ೩೮ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಅನುಜೀವಿವೃತ್ತಂ ನಾಮ ಪಂಚವಿಂಶೋಽಧ್ಯಾಯಃ

---

೩೭. ಅವರೊಡನೆ ಪ್ರಸನ್ನವದನನಾಗಿ ಸಂತೋಷಪಡುತ್ತಾ ಆಮಾತೀ ಮಾತುಗಳನ್ನಾಡುತ್ತಾ ಕುಳಿತುಕೊಳ್ಳುವುದು. ಇವೆಲ್ಲ ಲಕ್ಷಣಗಳೂ ಅನುರಾಗಪರ (ರಕ್ತ) ನಾದ ರಾಜನ ಲಕ್ಷಣವೆಂದು ತಿಳಿದುಕೊಳ್ಳಬೇಕಯ್ಯಾ !

೩೮. ಮಹಾರಾಜನು ಒಂದು ವೇಳೆ ಪೂರ್ವೋಕ್ತಲಕ್ಷಣಗಳುಳ್ಳ ವಿರಕ್ತಿಯಿಂದ ಕೂಡಿದವನಾದಾಗ್ಯೂ, ಆಪತ್ಕಾಲದಲ್ಲಿ ಅವನ ಹಿತಚಿಂತಕರು ಅವನನ್ನು ಕೈಬಿಡದೆ ಸೇವಿಸುತ್ತಲೇ ಇರಬೇಕು. ಆಪತ್ಕಾಲ ಬಂದಾಗ ಮಿತ್ರರನ್ನೂ, ಭೃತ್ಯರನ್ನೂ, ಅದರಲ್ಲೂ ವಿಶೇಷವಾಗಿ ನಿರ್ಗುಣನೂ ಅಪ್ರಮೇಯನೂ ಆದ ಪ್ರಭುವನ್ನೂ ಸಹ ಯಾರು ಅಲಕ್ಷ್ಯಮಾಡದೆ ಅವರಿಗೆ ಉಪಕಾರಮಾಡುತ್ತಾರೆಯೋ, ಅಂತಹ ಮಹನೀಯರು ಸ್ವರ್ಗಲೋಕದಲ್ಲಿ ದೇವೇಂದ್ರನ ಸಭೆಯನ್ನು ಅಲಂಕರಿಸುತ್ತಾರೆ.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಅನುಜೀವಿಗಳ (ಸೇವಕರ) ವೃತ್ತಿಯೆಂಬ ಹೆಸರಿನ ಇಪ್ಪತ್ತೈದನೆಯ ಅಧ್ಯಾಯ ಮುಗಿಯಿತು.

*

॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಷಡ್ವಿಂಶತಿತಮೋಽಧ್ಯಾಯಃ

ಪುಷ್ಕರ ಉವಾಚ

ರಾಜಾ ಸಹಾಯಸಂಯುಕ್ತಃ ಪ್ರಭೂತಯವಸೇಂಧನಂ ।
ರಮ್ಯಮಾನತಸಾಮನ್ತಃ ಪಶವ್ಯಂ ದೇಶಮಾವಸೇತ್ ॥ ೧ ॥

ವೈಶ್ಯಶೂದ್ರಜನಪ್ರಾಯಮನಾಹಾರ್ಯಂ ತಥಾ ಪರೈಃ ।
ಕಿಂಚಿದ್ಬ್ರಾಹ್ಮಣಸಂಯುಕ್ತಂ ಬಹುಕರ್ಮಕರಂ ತಥಾ ॥ ೨ ॥

---

## ಇಪ್ಪತ್ತಾರನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:—ಮಹಾರಾಜನಾದವನು ಮನೋಹರವಾಗಿಯೂ, ಒಳ್ಳೇ ಮಂತ್ರಿಸೇನಾಪತಿಗಳಿಂದ ಯುಕ್ತನಾಗಿಯೂ, ಸಕಲಸಂಪತ್ಸಮೃದ್ಧಿಯಿಂದಲೂ, ಧನಧಾನ್ಯಪಶುಸಮೃದ್ಧಿಯಿಂದಲೂ ಕೂಡಿದ ನಾನಾವಿಧ ಸಹಾಯಸಂಪತ್ತುಳ್ಳ ದೇಶದಲ್ಲಿ ವಾಸಮಾಡಬೇಕು.

೨. ವೈಶ್ಯಶೂದ್ರರೇ ಆ ದೇಶದಲ್ಲಿ ಹೆಚ್ಚಾಗಿರಬೇಕು. ಆ ದೇಶವು ಶತ್ರುಗಳಿಗೆ ಅಭೇದ್ಯವಾಗಿರಬೇಕು. ನಿಷ್ಠರಾಗಿಯೂ, ಕರ್ಮಠರಾಗಿಯೂ, ನಾನಾವಿಧ ಶ್ರೌತಕರ್ಮಗಳನ್ನು ಮಾಡತಕ್ಕವರಾಗಿಯೂ ಇರುವ ಕೆಲವು ಮಂದಿ ಬ್ರಾಹ್ಮಣರಿಂದ ಮಾತ್ರವೇ ಆ ದೇಶವು ವಿರಾಜಿಸಲ್ಪಡಬೇಕು.

**ಅದೇವಮಾತೃಕಂ ಕರ್ಮಸ್ವನುರಕ್ತ ಜನಾಚಿತಂ ।**
**ಕರ್ಶೈರಪೀಡಿತಂ ಚಾಪಿ ಬಹುಪುಷ್ಪಂ ಫಲಂ ತಥಾ ॥ ೩ ॥**

**ಅಗಮ್ಯಂ ಪರಚಕ್ರಾಣಾಂ ತದ್ವಾದಸಹಮಾಪದಿ ।**
**ಸಮದುಃಖಸುಖಂ ರಾಜ್ಞಃ ಸತತಂ ಚ ಪ್ರಿಯೇ ಸ್ಥಿತಂ ॥ ೪ ॥**

**ಸರೀಸೃಪವಿಹೀನಂ ಚ ವ್ಯಾಧಿತಸ್ಕರವರ್ಜಿತಂ ।**
**ಏವಂವಿಧಂ ಯಥಾಲಾಭಂ ರಾಜಾ ವಿಷಯ ಮಾವಸೇತ್ ॥ ೫ ॥**

---

೩. ಆ ದೇಶದಲ್ಲಿ ಒಳ್ಳೇ ಹೊಳೆಗಳೂ, ಅದಕ್ಕೆ ಹಾಕಿದ ಅಣೆಕಟ್ಟಿನಿಂದ ಕೂಡಿದ ನೀರುಗಳಿಂದ ನಾನಾಮುಖವಾಗಿ ಹೊರಟ ನಾಲೆ (ಕಾಲುವೆ) ಗಳೂ ಅದರ ಕೆಳಗೆ ನದೀಮಾತೃಕವಾದ ಭೂಮಿ (ಗದ್ದೆ) ಗಳೂ ಯಥೇಚ್ಛವಾಗಿರಬೇಕು. ವ್ಯವಸಾಯ (ಕೃಷಿ) ಕರ್ಮದಲ್ಲಿ ಉತ್ಸಾಹಿಗಳಾಗಿಯೂ ಪಟುಗಳಾಗಿಯೂ ಇರುವ ರೈತರಿಂದ ಆ ದೇಶವು ತುಂಬಿರಬೇಕು. ಆ ರೈತರಿಗೆ ಹೆಚ್ಚುಕಂದಾಯವನ್ನು ವಿಧಿಸಬಾರದು. ಅವರು ಯಾವಾಗಲೂ ಬಹು ಪುಷ್ಪವನ್ನೂ ಫಲವನ್ನೂ ಬೆಳೆದು ಧೇಶಕ್ಕೆ ಒದಗಿಸುತ್ತಿರಬೇಕು.

೪. ಪರ (ಶತ್ರು) ಸೈನ್ಯವು ಆ ದೇಶಕ್ಕೆ ಸುಲಭವಾಗಿ ಬರುವಂತಿರಬಾರದು. ತನ್ನಲ್ಲಿರುವ ಸೈನ್ಯವು ಕಷ್ಟಕಾಲದಲ್ಲಿ ಶತ್ರುಗಳೊಡನೆ ಯುದ್ಧಮಾಡಿ ಗೆಲ್ಲುವುದಾಗಿರಬೇಕು. ಆ ದೇಶದ ಜನರು ಮಹಾರಾಜನ ಸುಖದುಃಖಗಳಲ್ಲಿ ಸಮನಾಗಿ ಸಹಾಯ ಮಾಡುತ್ತಿರಬೇಕು. ಯಾವಾಗಲೂ ಮಹಾರಾಜನಿಗೆ ಪ್ರಿಯವನ್ನು ಕೋರತಕ್ಕವರಾಗಿರಬೇಕು.

೫. ಆ ದೇಶದಲ್ಲಿ ಹಾವುಗಳೇ ಮುಂತಾದ ವಿಷಜಂತುಗಳ ಕಾಟವಿರಬಾರದು. ವ್ಯಾಧಿತಸ್ಕರಭಯಗಳು ಆ ದೇಶದಲ್ಲಿರಕೂಡದು. ಪ್ರಜಾಹಿಂಸೆಯನ್ನು ಬಿಟ್ಟು ಆ ದೇಶದಲ್ಲಿ ಎಷ್ಟು ಉತ್ಪತ್ತಿಯಾಗುವುದೋ, ಅದರಿಂದಲೇ ಮಹಾರಾಜನು ಯಥಾಲಾಭದಿಂದ ಸಂತುಷ್ಟನಾಗಿರಬೇಕು.

**ತತ್ರ ದುರ್ಗಂ ನೃಪಃ ಕುರ್ಯಾತ್ ಷಣ್ಣಾಮೇಕತಮಂ ಬುಧಃ ।**
**ಧನ್ವದುರ್ಗಂ ಮಹೀದುರ್ಗಂ ನರದುರ್ಗಂ ತಥೈವ ಚ ॥ ೬ ॥**

**ವಾರ್ಕ್ಷಂ ಚೈವಾಂಬುದುರ್ಗಂ ಚ ಗಿರಿದುರ್ಗಂ ಚ ಭಾರ್ಗವ ।**
**ಸರ್ವೇಷಾಮೇವ ದುರ್ಗಾಣಾಂ ಗಿರಿದುರ್ಗಂ ಪ್ರಶಸ್ಯತೆ ॥ ೭ ॥**

**ದುರ್ಗಂ ಚ ಪರಿಖೋಪೇತಂ ನೃಪಾಟ್ಟಾಲಕಸಂಯುತಂ ।**
**ಶತಘ್ನೀಯಂತ್ರಮುಖ್ಯೈಶ್ಚ ಶತಶಶ್ಚ ತಥಾ ಯುತಂ ॥ ೮ ॥**

---

೬. ಅಂತಹ ಉತ್ತಮದೇಶದಲ್ಲಿ ಮಹಾರಾಜನು ಆರು ವಿಧವಾದ ಕೋಟೆಯನ್ನು ಕಟ್ಟಿ ಅದರೊಳಗೆ ರಾಜಗೃಹವನ್ನು ಭದ್ರವಾಗಿ ಕಲ್ಪಿಸಬೇಕು. ಆ ಅರು ವಿಧ ದುರ್ಗ (ಕೋಟೆ) ಗಳಾವುವೆಂದರೆ ;—ಒಂದರ ಸುತ್ತಲೆಲ್ಲಾ ಆಯುಧಗಳೇ ಇರಬೇಕು. ಮತ್ತೊಂದು ವಿಧವಾದ ಕೋಟೆಯಲ್ಲಿ ಬರೀ ಮೈದಾನ ಕಂದಕವಾಗಿರಬೇಕು. ಮತ್ತೊಂದು ವಿಧದ ಕೋಟೆಯೊಳಗೆ ಮನುಷ್ಯರು (ಸೈನಿಕರು) ವಾಸವಾಗಿರಬೇಕು.

೭. ಒಂದು ಸುತ್ತಿನಲ್ಲೆಲ್ಲಾ ಮರಗಳನ್ನು ತುಂಬಾ ಬೆಳೆಸಿರಬೇಕು. ಅದರ ಸುತ್ತಲೂ ನೀರಿನ ಕಂದಕವಿರುವಂತೆ (ನೀರು) ಮಾಡಬೇಕು. ಅದರಿಂದಾಚೆ ಎತ್ತರವಾದ ಕಲ್ಲುಗೋಡೆಗಳನ್ನು ಹಾಕಿ ಶತ್ರುಗಳಿಗೆ ಅಭೇದ್ಯವಾಗಿರುವಂತೆ ಕೋಟೆಯನ್ನು ಕಟ್ಟಿಸಬೇಕು.

೮. ಆ ಕೋಟೆಯು ಅಗಳುಗಳಿಂದಲೂ ಅಟ್ಟಲಕಗಳಿಂದಲೂ ಕೂಡಿರಬೇಕು. ಕೋಟೆಯ ಸುತ್ತಲೂ ಅಲ್ಲಲ್ಲಿ ಫಿರಂಗಿಗಳನ್ನು ನೂರಾರು ಸಾವಿರಾರು ಗಟ್ಟಲೆಯಲ್ಲಿ ಸುತ್ತಲೂ ಬಾಯಿ ತೆಗೆದುಕೊಂಡಿರುವ ರೀತಿಯಲ್ಲಿ ಜೋಡಿಸಿರಬೇಕು.

(ಹಳೇ ಕಾಲದ ಮೈಸೂರನ್ನು ಅಂದರೆ ಸುಮಾರು ೫೦ ವರ್ಷಗಳ ಹಿಂದಿನ ಕೋಟೆಯ ದೃಶ್ಯವನ್ನು ಸ್ಮರಿಸಿಕೊಳ್ಳಿರಿ. ಅದರಂತೆ ಶ್ರೀರಂಗಪಟ್ಟಣ ಚಿತ್ರದುರ್ಗ-ಚನ್ನರಾಯಪಟ್ಟಣ ಮುಂತಾದ ಸ್ಥಳಗಳ ಕೋಟೆಕೊತ್ತಳಗಳನ್ನು ಕಟ್ಟಿದ್ದ, ಇಂದಿಗೂ ಅಚ್ಚಳಿಯದೆ ನಿಂತಿರುವ ಕೆಲವು ಪ್ರಾಚೀನ ಭಗ್ನಾವಶೇಷಗಳನ್ನು ಒಮ್ಮೆ ನೋಡಿರಿ, ಇವೆಲ್ಲವೂ ಸ್ಮರಣೆಗೆ ಬರುವುದು. ಅಥವಾ ಅವಕಾಶವಿದ್ದರೆ ಹಂಪೆಯ ಹಳೇ ಭಗ್ನಾವಶಿಷ್ಟಗಳನ್ನೂ, ಹಾಗೆಯೇ ಕರ್ಣಾಟಕದ ಹಿಂದಿನ ವೈಭವವನ್ನೂ ನೋಡಿಬನ್ನಿರಿ, ಇವುಗಳೆಲ್ಲ ಬಹು ಹಿಂದಿನ ಕಾಲದ ದುರ್ಗಗಳ ವಿಷಯವಾಗಿದೆ.)

**ಗೋಪುರಂ ಸಕವಾಟಂ ಚ ತತ್ರ ಸ್ಯಾತ್ಸುಮನೋಹರಂ ।**
**ಸಪತಾಕಗಜಾರೂಢೋ ಯೇನ ರಾಜಾ ವಿಶೇತ್ಪುರಂ　　॥ ೯ ॥**

**ಚತಸ್ರಶ್ಚ ತಥಾ ತತ್ರ ಕಾರ್ಯಾಶ್ಚಾಪಣವೀಥಯಃ ।**
**ಏಕಸ್ಮಿಂಸ್ತತ್ರ ವೀಥ್ಯಗ್ರೇ ದೇವವೇಶ್ಮ ಭವೇದ್ದೃಢಂ　　॥ ೧೦ ॥**

**ವೀಥ್ಯಗೇ ಚ ದ್ವಿತೀಯೇ ವೈ ರಾಜವೇಶ್ಮಾಭಿಧೀಯತೇ ।**
**ಧರ್ಮಾಧಿಕರಣಂ ಕಾರ್ಯಂ ವೀಥ್ಯಗೇ ಚ ತೃತೀಯಕೇ　　॥ ೧೧ ॥**

**ಚತುರ್ಥೇ ಚೈವ ವೀಥ್ಯಗ್ರೇ ಗೋಪುರಂ ಚ ವಿಧೀಯತೇ ।**
**ಆಯತಂ ಚತುರಸ್ರಂ ವಾ ವೃತ್ತಂ ಚಾಕಾರಯೇತ್ಪುರಂ　　॥ ೧೨ ॥**

---

೯. ಕೋಟೆಯ ನಾಲ್ಕು ದಿಕ್ಕುಗಳೂ ಭದ್ರವಾಗಿದ್ದು, ಪೂರ್ವದ್ವಾರದಲ್ಲಿ ಗೋಪುರ (ಪೂರ್ವದ್ವಾರ)ವನ್ನು ಮನೋಹರವಾಗಿ ಕಟ್ಟಿಸಬೇಕು. ಮಹಾರಾಜನು ಧ್ವಜಚ್ಛತ್ರಾದಿಗಳಿಂದೊಡಗೂಡಿ ಆನೆಯ ಮೇಲೆ ಸವಾರಿ (ಮೆರವಣಿಗೆ)ಮಾಡಿಕೊಂಡು ಬರುವಾಗ, ಆ ಸವಾರಿಯು ಧಾರಾಳವಾಗಿ ಕಿಷ್ಕಿಂಧವಿಲ್ಲದಂತೆ ಪುರಪ್ರವೇಶಮಾಡುವಂತೆ ಆ ಗೋಪುರದ್ವಾರವನ್ನು ವಿಸ್ತಾರವಾಗಿ ಕಟ್ಟಿಸಿರಬೇಕು.

೧೦. ನಾಲ್ಕು ದಿಕ್ಕಿನ ಕೋಟೆಯ ಬುಡದಲ್ಲೂ ದೊಡ್ಡ ದೊಡ್ಡದಾದ ನಾಲ್ಕು ಅಂಗಡೀಬೀದಿಗಳಿರಬೇಕು. ಅದರಲ್ಲಿ ಮೊದಲನೇ (ದಕ್ಷಿಣಭಾಗದ ಪೂರ್ವಪಶ್ಚಿಮ) ಬೀದಿಯ ತುದಿಯಲ್ಲೂ ಒಂದು ದೇವಸ್ಥಾನವಿರಬೇಕು.

೧೧. ಎರಡನೇ ಬೀದಿ ಅಂದರೆ ಊರಿನ ಪಶ್ಚಿಮ ಪಾರ್ಶ್ವದ ದಕ್ಷಿಣೋತ್ತರ ಬೀದಿಯ ತುದಿಯಲ್ಲಿ ಅರಮನೆಯನ್ನು ಕಟ್ಟಿಸಿರಬೇಕು. ಮೂರನೇ ಬೀದಿಯ ಅಂದರೆ ಉತ್ತರಪಾರ್ಶ್ವದ ಪೂರ್ವಪಶ್ಚಿಮ ಬೀದಿಯ ತುದಿಯಲ್ಲಿ ಧರ್ಮಾಧಿಕೃತರಾದ ಅಧಿಕಾರಿಗಳ ಮನೆಗಳಿರಬೇಕು.

೧೨. ನಾಲ್ಕನೇ ಬೀದಿಯ ಅಂದರೆ ಪೂರ್ವದಿಕ್ಕಿನ ದಕ್ಷಿಣೋತ್ತರ ಬೀದಿಯ ಮಧ್ಯದಲ್ಲಿ (ಅಗ್ರ) ಮೇಲೆ ವಿವರಿಸಿದ ಲಕ್ಷಣದಂತೆ ಕೋಟೆಯ ಬಾಗಿಲು (ಪುರದ್ವಾರ ಅಥವಾ ಗೋಪುರ) ಇರಬೇಕು. ಅದರೊಳಗಿರುವ ಊರು ಚತುರಸ್ರಾಕಾರವಾಗಿಯಾಗಲೀ ವೃತ್ತಾಕಾರವಾಗಿಯಾಗಲೀ ಇರಬೇಕು.

ಮುಕ್ತಿಹೀನಂ ತ್ರಿಕೋಣಂ ಚ ಯವಮಧ್ಯಂ ತಥೈವ ಚ ।
ಅರ್ಧಚಂದ್ರಪ್ರಕಾರಂ ಚ ವಜ್ರಾಕಾರಂ ಚ ವರ್ಜಯೇತ್ ॥ ೧೩ ॥

ಅರ್ಧಚಂದ್ರಂ ಪ್ರಶಂಸಂತಿ ನದೀತೀರೇ ತು ತದ್ವಶಾತ್ ।
ಅನ್ಯತ್ರ ತನ್ನ ಕರ್ತವ್ಯಂ ಪ್ರಯತ್ನೇನ ವಿಜಾನತಾ ॥ ೧೪ ॥

ರಾಜ್ಞಃ ಕೋಶಗೃಹಂ ಕಾರ್ಯಂ ದಕ್ಷಿಣೇ ರಾಜವೇಶ್ಮನಃ ।
ತಸ್ಯಾಪಿ ದಕ್ಷಿಣೇ ಭಾಗೇ ಗಜಸ್ಥಾನಂ ವಿಧೀಯತೇ ॥ ೧೫ ॥

ಗಜಾನಾಂ ಪ್ರಾಙ್ಮುಖೀ ಶಾಲಾ ಕರ್ತವ್ಯಾ ಚಾಪ್ಯುದಙ್ಮುಖೀ ।
ಆಗ್ನೇಯೇ ಚ ತಥಾ ಭಾಗೇ ಆಯುಧಾಗಾರ ಇಷ್ಯತೇ ॥ ೧೬ ॥

ಮಹಾನಸಂ ಚ ಧರ್ಮಜ್ಞಃ ಕರ್ಮಶಾಲಾಸ್ತಥಾಪರಾಃ ।
ಗೃಹಂ ಪುರೋಧಸಃ ಕಾರ್ಯಂ ವಾಮತೋ ರಾಜವೇಶ್ಮನಃ ॥ ೧೭ ॥

---

೧೩. ಹಾಗಲ್ಲದೆ ಪಟ್ಟಣವು ಮುಕ್ತಿಹೀನಾಕಾರವಾಗಿಯಾಗಲೀ, ತ್ರಿಕೋಣಾಕಾರವಾಗಿಯಾಗಲೀ, ಯವಮಧ್ಯವಾಗಿಯಾಗಲೀ, ಅರ್ಧಚಂದ್ರಾಕೃತಿಯಾಗಿಯಾಗಲೀ, ವಜ್ರಾಕಾರವಾಗಿಯಾಗಲೀ ಇರಬಾರದು.

೧೪. ನದೀತೀರದಲ್ಲಿ ಊರನ್ನು ಕಟ್ಟಬೇಕಾಗಿದ್ದ ಸಂದರ್ಭದಲ್ಲಿ ಅವುಗಳು ಅರ್ಧಚಂದ್ರಾಕಾರವಾಗಿರಬಹುದೆಂದು ತಿಳಿದವರು ಹೇಳುತ್ತಾರೆ. (ಕಾಶಿ-ಅಯೋಧ್ಯ-ಮಥುರ-ಪಂಡರಾಪುರ ಮುಂತಾದುವು.) ಈರೀತಿ ನದೀತೀರದ ಮಹಾಕ್ಷೇತ್ರದಲ್ಲಿರುವ ರಾಜಧಾನಿಗಳನ್ನು ಅರ್ಧಚಂದ್ರಾಕಾರವಾಗಿ ಕಟ್ಟಬೇಕೇ ವಿನಹ ಉಳಿದ ಸ್ಥಳಗಳಲ್ಲಿ ಕಟ್ಟುವ ಊರುಗಳು ಹಾಗಿರಲೇಬಾರದು.

೧೫. ಮಹಾರಾಜನ ಅರಮನೆಯ ದಕ್ಷಿಣಭಾಗದಲ್ಲಿ ಕೋಶಗೃಹ (ಖಜಾನೆ) ವಿರಬೇಕು. ಅದಕ್ಕಿಂತ ದಕ್ಷಿಣದಿಕ್ಕಿನಲ್ಲಿ ಗಜಾಲಯವಿರಬೇಕು.

೧೬. ಈ ಗಜಶಾಲೆಯು ಪೂರ್ವಾಭಿಮುಖವಾಗಿಯಾಗಲೀ, ಉತ್ತರಾಭಿಮುಖವಾಗಿಯಾಗಲೀ ಇರಬೇಕು. ಆಗ್ನೇಯ ಭಾಗದಲ್ಲಿ ಆಯುಧಶಾಲೆಯಿರಬೇಕು.

೧೭. ಇದೇ ಮೇರೆಗೆ ಅಡಿಗೇ ಮನೆಗಳನ್ನೂ (ಬಿಡದಿ), ಇತರ ವಿಧವಾದ ಕರ್ಮಶಾಲೆಗಳನ್ನೂ ಕಟ್ಟಿಸಬೇಕು. ಮಹಾರಾಜರ ಅರಮನೆಯ ಎಡಭಾಗದಲ್ಲಿ ಪುರೋಹಿತರ ಮನೆಯನ್ನು ಕಟ್ಟಿಸಬೇಕು.

**ಮಂತ್ರಿ ದೈವವಿದಾಂ ಚೈವ ಚಿಕಿತ್ಸಾಕರ್ತುರೇವ ಚ ।**
**ತತ್ರೈವ ಚ ತಥಾ ಭಾಗೇ ಕೋಷಾ ಗಾರಂ ವಿಧೀಯತೇ ॥ ೧೮ ॥**

**ಗವಾಂ ಸ್ಥಾನಂ ತು ಕರ್ತವ್ಯಂ ತುರಗಾಣಾಂ ತಥೈವ ಚ ।**
**ಉತ್ತರಾಭಿಮುಖೀ ಶ್ರೇಣೀ ತುರಗಾಣಾಂ ವಿಧೀಯತೆ ॥ ೧೯ ॥**

**ಪ್ರಾಙ್ಮುಖೀ ಚಾಪಿ ಧರ್ಮಜ್ಞ ಪರಿಶೇಷಾ ವಿಗರ್ಹಿತಾ ।**
**ತುರಗಾಶ್ಚ ತಥಾ ಧಾರ್ಯಾಃ ಪ್ರಶಸ್ತೈಃ ಸಾರ್ವರಾತ್ರಿಕೈಃ ॥ ೨೦ ॥**

**ಕುಕ್ಕುಟಾನ್ವಾನರಾಂಶ್ಚೈವ ಮರ್ಕಟಾಂಶ್ಚ ನರಾಧಿಪಃ ।**
**ಧಾರಯೇ ದಥ, ಶಾಲಾಸು ಸವತಾಂ ಧೇನುಮೇವ ಚ ॥ ೨೧ ॥**

---

೧೮. ಮತ್ತು ಅದೇ ಸಾಲಿನಲ್ಲಿ ಕ್ರಮವಾಗಿ ಮಂತ್ರಿ, ಜೋಯಿಸ, ವೈದ್ಯರುಗಳಿಗೆಲ್ಲಾ ಮನೆಯನ್ನು ಕಟ್ಟಿಸಿಕೊಡಬೇಕು. ಅದೇ ಭಾಗದಲ್ಲಿ ಅರಮನೆಯ ಕಣಜ (ಧಾನ್ಯ ಸಂಗ್ರಹಾಲಯ)ವನ್ನು ಕಟ್ಟಿಸಬೇಕು.

೧೯. ಮತ್ತು ಹಾಗೆಯೇ ಅದೇ ಬೀದಿಯನ್ನು ಅಭಿವೃದ್ಧಿಮಾಡುತ್ತಾ ಹೋಗಿ ಅಲ್ಲಿ ಹಸುವಿನ ಕರೋಹಟ್ಟಿ (ಗೋಶಾಲೆ), ಕುದುರೆಗಳ ಲಾಯ (ಅಶ್ವಶಾಲೆ) ಗಳನ್ನು ಕಟ್ಟಿಸಬೇಕು. ಅಶ್ವಶಾಲೆಯು ಮಾತ್ರ ಉತ್ತರಾಭಿಮುಖವಾದ ಸಾಲುಗಳಾಗಿ ಕಟ್ಟಲ್ಪಡಬೇಕು.

೨೦. ಉಳಿದ ಎಲ್ಲಾ ವಿಧವಾದ ಮನೆಗಳನ್ನೂ ಪೂರ್ವಾಭಿಮುಖವಾಗಿಯೇ ಕಟ್ಟಿಸಬೇಕು. ಕುದುರೆಗಳೊಂದೊಂದಕ್ಕೂ ಒಬ್ಬೊಬ್ಬ ಕಾಸ್ತಾರ (ಕುದುರೆ ಆಳು) ನಿರಬೇಕು.

೨೧. ತಕ್ಕ ತಕ್ಕ ಶಾಲೆಗಳನ್ನು ಕಟ್ಟಿಸಿ ಅಲ್ಲಿ ಕೋಳಿಗಳನ್ನೂ, ನಾನಾ ವಿಧವಾದ ಕಪಿಗಳನ್ನೂ, ಕರುವಿನಿಂದ ಕೂಡಿದ ಹಾಲುಕರೆಯುವ ಹಸುಗಳನ್ನೂ ಅಲ್ಲಿ ಇಡಿಸಬೇಕು.

**ಅಜಾಶ್ಚ ಧಾರ್ಯಾ ಯತ್ನೇನ ತುರಗಾಣಾಂ ಹಿತೈಷಿಣಾ ।**
**ಗೋಗಜಾಶ್ವವಿಶಾಲಾಸು ತತ್ಪುರೀಷಸ್ಯ ನಿಷ್ಕ್ರಮಂ ॥ ೨೨ ॥**

**ಅಸ್ತಂಗತೇನ ಕರ್ತವ್ಯಂ ದೇವದೇವೇ ದಿವಾಕರೇ ।**
**ತತಸ್ತತ್ರ ಯಥಾನ್ಯಾಯಂ ರಾಜಾ ವಿಜ್ಞಾಯ ಸಾರವಿತ್ ॥ ೨೩ ॥**

**ದದ್ಯಾದಾವಸಥಸ್ಥಾನಂ ಸರ್ವೇಷಾ ಮನುಪೂರ್ವಶಃ ।**
**ಯೋಧಾನಾಂ ಶಿಲ್ಪಿನಾಂ ಚೈವ ಸರ್ವೆಷಾಮವಿಶೇಷತಃ ॥ ೨೪ ॥**

**ದದ್ಯಾದಾವಸಥಾನ್ದುರ್ಗೇ ಮಂತ್ರಕಾಲವಿದಾಂ ಸತಾಂ ।**
**ಗೋವೈದ್ಯಾನಶ್ವವೈದ್ಯಾಂಶ್ಚ ಗಜವೈದ್ಯಾಂಸ್ತಥೈವಚ ॥ ೨೫ ॥**

**ಆಹರೇತ ಭೃಶಂ ರಾಜಾ ದುರ್ಗೇ ಪರಬಲಾರುಜಃ ।**
**ಕುಶೀಲವಾನಾಂ ವಿಪ್ರಾಣಾಂ ದುರ್ಗೇ ಸ್ಥಾನಂ ವಿಧೀಯತೇ ॥ ೨೬ ॥**

---

೨೨. ಆಡುಕುರಿಗಳಿಗೂ ತಕ್ಕ ಶಾಲೆಗಳನ್ನು ಕಟ್ಟಿಸಿ ಅವುಗಳನ್ನು ಸಾಕಬೇಕು. ಇವುಗಳು ತುರಗಗಳಿಗೆ ಸಂರಕ್ಷಕಗಳಾದ ಪ್ರಾಣಿಗಳು. ಹಸುವಿನ ಸಗಣಿ, ಆಡಿನ ಹಿಕ್ಕೆ, ಆನೆಯ ಲದ್ದಿ, ಕುದುರೆಯ ಲದ್ದಿ ಇವುಗಳನ್ನು ಆಗಿಂದಾಗ್ಗೆ ತೆಗೆಯಿಸಿ, ಅದಕ್ಕಾಗಿ ಏರ್ಪಡಿಸಿದ ವಿಸ್ತಾರವಾದ ಗೊಬ್ಬರದ ಗುಂಡಿಗಳಲ್ಲಿ ಹಾಕಿಸಿಬಿಡಬೇಕು.

೨೩. ಈ ಲದ್ದಿಗಳ (ಗೊಬ್ಬರಗಳ)ನ್ನೆಲ್ಲಾ ಹಗಲುಹೊತ್ತಿನಲ್ಲೇ ಸಾಗಿಸಿ ಆಯಾ ಶಾಲೆಗಳನ್ನು ಸ್ವಚ್ಛಗೊಳಿಸುತ್ತಿರಬೇಕು. ಸಾಯಂಕಾಲವಾದ ಮೇಲೆ ಈ ಕೆಲಸವನ್ನು ಮಾಡಕೂಡದು. ಇದನ್ನೆಲ್ಲಾ ರಾಜನು ವಿಚಾರಿಸುತ್ತಿರಬೇಕು.

೨೪. ದುರ್ಗದೊಳಗೆ ಮಂತ್ರಿ ಮತ್ತು ಜೋಯಿಸರಿಗೆ ಒಳ್ಳೆಯ ವಸತಿಗಳನ್ನು ಕಟ್ಟಿಸಿಕೊಡಬೇಕು. ಮತ್ತು ಹೊರದೇಶಗಳಿಂದ ಗೋವೈದ್ಯರನ್ನೂ ಅಶ್ವಚಿಕಿತ್ಸಕರನ್ನೂ ಕರೆಯಿಸಿ ಅವರಿಗೆ ಮನೆಗಳನ್ನು ಕಟ್ಟಿಸಿಕೊಡಬೇಕು.

೨೫. ಯೋಧರಿಗೂ, ಶಿಲ್ಪಿಗಳಿಗೂ, ಇತರ ಸಾಮಾನ್ಯ ಕೆಲಸಗಾರರಿಗೂ ಸಹ ಒಂದೇ ವಿಧವಾದ ಮನೆಗಳನ್ನು ಕಟ್ಟಿಸಿಕೊಡಬೇಕು.

೨೬. ಎಲ್ಲ ಪ್ರಾಣಿಗಳಿಗೂ ಬರುವ ನಾನಾ ವಿಧವಾದ ರೋಗರುಜಿನಗಳನ್ನು ವಾಸಿಮಾಡುವುದಕ್ಕಾಗಿ ವೈದ್ಯರುಗಳನ್ನು ಗೊತ್ತುಮಾಡಿ ಅವರಿಗೂ ಮನೆಗಳನ್ನು ಕಟ್ಟಿಸಿಕೊಡಬೇಕು. ಗಾಯಕ (ಸಂಗೀತಗಾರ)ರಿಗೂ ಬ್ರಾಹ್ಮಣರಿಗೂ ಕೋಟೆಯೊಳಗೆ ಮನೆಗಳನ್ನು ಕಟ್ಟಿಸಿಕೊಡಬೇಕು.

ನ ಬಹೂನಾಂ ನ ತೈ ರ್ದುರ್ಗಂ ವಿನಾ ಕಾರ್ಯಂ ತಥಾ ಭವೇತ್ ।
ದುರ್ಗೇ ಚ ಯಂತ್ರಾಃ ಕರ್ತವ್ಯಾ ನಾನಾಪ್ರಹರಣಾನ್ವಿತಾಃ　　॥ ೨೭ ॥

ಸಹಸ್ರಘಾತಿನೋ ರಾಮ ತೈಸ್ತು ರಕ್ಷಾ ವಿಧೀಯತೇ ।
ದುರ್ಗೇ ದ್ವಾರಾಣಿ ಗುಪ್ತಾನಿ ಕಾರ್ಯಾಣ್ಯಪಿ ಚ ಭೂಭುಜಾ　　॥ ೨೮ ॥

ಸಂಚಯಶ್ಚಾತ್ರ ಸರ್ವೇಷಾಂ ಚಾಯುಧಾನಾಂ ಪ್ರಶಸ್ಯತೇ ।
ಧನುಷಾಂ ಕ್ಷೇಪಣೀಯಾನಾಂ ತೋಮರಾಣಾಂ ಚ ಭಾರ್ಗವ　　॥ ೨೯ ॥

ಶರಾಣಾಮಥ ಖಡ್ಗಾನಾಂ ಖನಕಾನಾಂ ತಥೈವ ಚ ।
ಲಗುಡಾನಾಂ ಗುಡಾನಾಂ ಚ ಹುಡಾನಾಂ ಪರಿಘೈಃ ಸಹ　　॥ ೩೦ ॥

---

೨೭. ಕೋಟೆಯಲ್ಲಿ ನಾನಾ ವಿಧವಾದ ಕೆಲಸಗಳನ್ನರಿತು ನುರಿತ ಅನೇಕ ಮಂದಿ ಜನರಿಲ್ಲದೆ-ಹೋದರೆ ರಾಜ್ಯದ ಕೆಲಸವು ಸುಸೂತ್ರವಾಗಿ ಸಾಗುವುದಿಲ್ಲವಾದ್ದರಿಂದ ಬಹುಜನ ಕೆಲಸಗಾರರನ್ನು ಗೊತ್ತುಮಾಡಿಕೊಳ್ಳಬೇಕು.

೨೮. ನಾನಾ ವಿಧವಾದ ಪ್ರಹರಣಗಳಿಂದ ಕೂಡಿದ ಯಂತ್ರಗಳನ್ನೂ ಸಹ ದುರ್ಗದಲ್ಲಿ ಸ್ಥಾಪಿಸಬೇಕು. ಆ ನಾನಾ ವಿಧ ಯಂತ್ರಗಳನ್ನು ನಡೆಸಲು ತಿಳಿದ ಸಾವಿರಾರು ಮಂದಿ ಕೆಲಸಗಾರರಿರಬೇಕು. ಯಂತ್ರ (ಮೆಷೀನ್) ಗಳನ್ನು ಬಹಳ ಎಚ್ಚರಿಕೆಯಿಂದ ನೋಡಿಕೊಳ್ಳಬೇಕು. ಕೋಟೆಯೊಳಗೆ ಕೆಲವು ಗುಪ್ತದ್ವಾರಗಳನ್ನು ರಾಜನು ಮಾಡಿಸಿರಬೇಕು. (ಶತ್ರುಗಳಿಗೆ ಅರಿಯದಂತೆ).

೨೯. ಆ ಗುಪ್ತದ್ವಾರಗಳಲ್ಲಿ ನಾನಾ ವಿಧವಾದ ಆಯುಧಗಳನ್ನು ಸಂಗ್ರಹಿಸಿ ಇಡಬೇಕು. ಬಿಲ್ಲು (ಧನುಸ್ಸು) ಗಳೂ, ತೋಮರಗಳೂ, ಬಾಣಗಳೂ, ಕತ್ತಿಗಳೂ, ಗುದ್ದಲಿಗಳೂ,

೩೦. ದೊಣ್ಣೆಗಳೂ, ಇತರ ವಿಧವಾದ ನಾನಾ ಆಯುಧಗಳೂ, ಫಿರಂಗಿಗಳೂ, ನಾನಾ ವಿಧವಾದ ಶಕ್ತ್ಯಾಯುಧಗಳೂ, ಪರಶ್ವಧ, ಚಕ್ರ, ಕತ್ತಿ, ಗುರಾಣಿಗಳೂ ಅಲ್ಲಿರಬೇಕು.

**ಅಶ್ಮಾನಾಂ ಚ ಪ್ರಭೂತಾನಾಂ ಮುದ್ಗರಾಣಾಂ ತಥೈವ ಚ ।**
**ಕಣಿಯಾನಾಂ ತ್ರಿಶೂಲಾನಾಂ ಪಟ್ಟಿಶಾನಾಂ ಚ ಭಾರ್ಗವ ॥ ೩೧ ॥**

**ಪ್ರಾಸಾನಾಂ ಚ ತ್ಸರೂಣಾಂ ಚ ಶಕ್ತೀನಾಂ ಚ ನರೋತ್ತಮ ।**
**ಪರಶ್ವಧಾನಾಂ ಚಕ್ರಾಣಾಂ ಚರ್ಮಣಾಂ ಚರ್ಮಭಿಃ ಸಹ ॥೩೨॥**

**ಕುದ್ದಾಲರಜ್ಜುವೇತ್ರಾಣಾಂ ಪಿಟಿಕಾನಾಂ ತಥೈವ ಚ ।**
**ಹ್ರಸ್ವಕಾನಾಂ ಚ ಪಾತ್ರಾಣಾಮುಗರಸ್ಯ ಚ ಸಂಚಯಂ ॥ ೩೩ ॥**

**ಸರ್ವೇಷಾಂ ಚಿತ್ರಭಾಂಡಾನಾಂ ಸಂಚಯಶ್ಚಾತ್ರ ಇಷ್ಯತೇ ।**
**ವಾದಿತ್ರಾಣಾಂ ಚ ಸರ್ವೇಷಾಮೌಷಧಾನಾಂ ತಥೈವ ಚ ॥ ೩೪ ॥**

**ಯವಸಾನಾಂ ಪ್ರಭೂತಾನಾಂ ಚೇಂಧನಸ್ಯ ಚ ಸಂಚಯಂ ।**
**ಗುಡಸ್ಯ ಸರ್ವಶೈಲಾನಾಂ ಗೋರಸಾನಾಂ ತಥೈವ ಚ ॥ ೩೫ ॥**

---

೩೧. ಕಲ್ಲುಗುಂಡುಗಳೂ, ವನಕೆಗಳೂ, ಹಾರೆಗಳೂ, ಈಟಿಗಳೂ, ಭರ್ಜಿಗಳೂ, ಲಗುಡಗುಡಹುಡಪರಿಘಾಧ್ಯಾಯುಧ ವಿಶೇಷಗಳೂ ಅಲ್ಲಿ ಸಂಗ್ರಹವಾಗಿರಬೇಕು.

೩೨-೩೩. ಕೊಡಲಿ, ಗುದ್ದಲಿ, ಪಿಕಾಶಿ, ಮಚ್ಚು, ಪಿಚ್ಚುಕತ್ತಿ, ಚಿಕ್ಕಹಾರೆ, ದೊಡ್ಡಹಾರೆ, ಮುಂತಾದ ಆಯುಧಗಳೆಲ್ಲ ಇರಬೇಕು.

೩೪. ಸಕಲವಿಧವಾದ ಚಿತ್ರಭಾಂಡಗಳ ಸಂಗ್ರಹವನ್ನೂ ದುರ್ಗದೊಳಗೆ ರಕ್ಷಿಸಿಕೊಂಡಿರಬೇಕು. ಸಕಲವಿಧವಾದ ವಾದ್ಯ (ನಗಾರಿ, ತಮಟೆ, ಡೋಲು ಮುಂತಾದುವು) ಗಳ ಸಂಗ್ರಹವೂ ಕೋಟೆಯಲ್ಲಿರಬೇಕು.

೩೫. ಸಕಲವಿಧವಾದ ಔಷಧಗಿಡಗಳೂ, ಔಷಧಮೂಲಿಕೆಗಳೂ, ಔಷಧ ಬೇರುಗಳೂ ದುರ್ಗದಲ್ಲಿ ಸಂರಕ್ಷಿತವಾಗಿರಬೇಕು. ಹಸುಗಳೇ ಮುಂತಾದುವುಗಳ ಆಹಾರಕ್ಕಾಗಿ ಯಥೇಚ್ಛವಾಗಿ ಸಂಗ್ರಹಿಸಿರಬೇಕು. ಎಲ್ಲ ದುರ್ಗಗಳಲ್ಲಿಯೂ ಗೋರಸ ಮತ್ತು ಗುಡಗಳನ್ನು ಸಂಗ್ರಹಿಸಿಡಬೇಕು.

**ಚರ್ಮಣಾಂ ಚ ಸಸರ್ಜ್ಜಾನಾಂ ಸ್ನಾಯೂನಾಮುಸ್ಥಿಭಿಸ್ಸಹ ।**
**ಗೋರಸಸ್ಯ ಪಟಾನಾಂ ಚ ಧಾನ್ಯಾನಾಂ ಸರ್ವತಸ್ತಥಾ ॥ ೩೬ ॥**

**ತಥೈವ ಪ್ರಪಟಾನಾಂ ಚ ಯವಗೋಧೂಮಯೋರಪಿ ।**
**ರತ್ನಾನಾಂ ಸರ್ವವಸ್ತ್ರಾಣಾಂ ಲೋಹಾನಾಂ ಚಾಪ್ಯಶೇಷತಃ ॥ ೩೭ ॥**

---

೩೬. ಸಿಂಹ, ಹುಲಿ, ಕಿರುಬ, ಚಿರತೆ ಮುಂತಾದ ಪ್ರಾಣಿಗಳ ಚರ್ಮಗಳನ್ನು ಸಂಗ್ರಹಿಸಿಡಬೇಕು. ಸರ್ಜರಸ, ಪ್ರಾಣಿಗಳ ಮೂಳೆಗಳೊಡನೆ ಕೂಡಿದ ನರಗಳು, ಗೋಮಾಂಸವನ್ನು ಕಟ್ಟಿದ ಬಟ್ಟೆಯ ಗಂಟುಗಳು (ಇವೆಲ್ಲವೂ ಔಷಧಕ್ಕೆ ಉಪಯುಕ್ತವಾದುವು), ಸಕಲ ವಿಧವಾದ ಧಾನ್ಯಗಳೂ ಸಂಗ್ರಹೀತವಾಗಿರಬೇಕು,

೩೭. ಟಿಪ್ಪಣಿ :—ಇನ್ನು ಮುಂದೆ ಸಕಲ ವಿಧರೋಗೋಪಯುಕ್ತಗಳಾದ ಔಷಧಗಳನ್ನೂ, ನಾನಾವಿಧವಾದ ನಾರುಬೇರುಗಳನ್ನೂ ಸಹ ಜನೋಪಕಾರಕ್ಕಾಗಿಯೂ ಲೋಕೋಪಕಾರಕ್ಕಾಗಿಯೂ ದುರ್ಗದಲ್ಲಿ ಸಂರಕ್ಷಿಸಿಟ್ಟಿರಬೇಕೆಂದು ಹೇಳುತ್ತಾ ಆ ಪದಾರ್ಥಗಳನ್ನು ಮುಂದೆ ವಿವರಿಸುತ್ತಾರೆ ;—ತಥೈವ ಪ್ರಪಟಾನಾಂಚ ಎಂಬ ಶ್ಲೋಕದಿಂದಾರಂಭಿಸಿ ಈ ಔಷಧ ವನಸ್ಪತಿಗಳ ಹೆಸರುಗಳು ಬರೆಯಲ್ಪಡುವುವು. ಪ್ರಥಮಖಂಡದಲ್ಲಿ ವನಸ್ಪತಿದ್ರವ್ಯ ಸಂದರ್ಭದಲ್ಲಿ ನಾನು ಬರೆದಿರುವ ಕೆಲವು ಮಾತುಗಳು ವಾಚಕರ ನೆನಪಿನಲ್ಲಿರಬಹುದು. ಈಗಲೂ ಈ ಮುಂದೆ ಬರೆಯುವ ಪದಗಳಲ್ಲಿ ಅನೇಕ ಶಬ್ದಗಳಿಗೆ ಸರಿಯಾದ ಕನ್ನಡ ಅರ್ಥವು ದೊರೆಯುವುದಿಲ್ಲ. ಕೆಲವು ವಸ್ತು (ದ್ರವ್ಯ) ಗಳ ಪರಿಚಯವೂ ಅನೇಕರಿಗಿರುವುದಿಲ್ಲ. ಲಕ್ಷ್ಮಣನು ರಾವಣನ ಅಷ್ಟಘಂಟಾಪ್ರಯೋಗದಿಂದ ಮೂರ್ಛಿತನಾಗಿದ್ದಾಗ ಸುಷೇಣನು ಸಂಜೀವಪರ್ವತದಲ್ಲಿ ಅನೇಕ ಮೂಲಿಕೆಗಳನ್ನು ಆರಿಸಿ ಚಿಕಿತ್ಸೆಮಾಡಿ ಗುಣಪಡಿಸಿದನೆಂದು ಉಕ್ತವಾಗಿದೆ. ಈಗಲೂ ಬಾಬಾಬುಡ್ಗಗಿರಿಯಲ್ಲಿಯೂ ವನಮಧ್ಯಗಳಲ್ಲಿಯೂ ಸಕಲ ವಿಧವಾದ ಹಸುರುಗಳೂ ಮೂಲಿಕೆಗಳೂ ದೊರೆಯುತ್ತವೆ. ಈಚೆಗೆ ನಮ್ಮ ಮೈಸೂರಿನ ಆಯುರ್ವೇದೀಯ ವಿಶ್ವವಿದ್ಯಾನಿಲಯದವರು ಇಂತಹ ಅನೇಕ ವನಸ್ಪತಿಗಳನ್ನು ಬೆಳೆಸಲು ಒಂದು ಉದ್ಯಾನವನ್ನು (ಫಾರಂ) ಸಹ ಸ್ಥಾಪನೆಮಾಡಿರುತ್ತಾರೆ. ಇದಕ್ಕಾಗಿ ಆಯುರ್ವೇದಕ್ಕೆ ಈಗಲೂ ಪೂಜ್ಯತೆಯಿದೆ. ಇದು ವೈದ್ಯಶಾಸ್ತ್ರದ ಚರಕ, ಸುಶ್ರುತ, ಅಷ್ಟಾಂಗಹೃದಯ, ಶಾರ್ಙ್ಗಧರಸಂಹಿತಾ, ಯೋಗರತ್ನಾಕರಾದಿ ನಾನಾ ಗ್ರಂಥಗಳಲ್ಲಿ ವಿಸ್ತಾರವಾಗಿ ನಿರೂಪಿಸಲ್ಪಟ್ಟಿದೆ. ಆ ಸಕಲ ಶಾಸ್ತ್ರಸಾರಭೂತವಾದ ಈಗ ವಿವರಿಸುವ ದುರ್ಗಸಂಪತ್ತಿ ಮತ್ತು ಮುಂದಿನ ಅಗದಂಕರಾಧ್ಯಾಯವನ್ನು

ಕಲಾಯಮುದ್ಗಮಾಷಾಣಾಂ ಚಣಕಾನಾಂ ತಿಲೈಃ ಸಹ ।
ತಥಾ ಚ ಸರ್ವಸಸ್ಯಾನಾಂ ಪಾಂಶುಗೋಮಯಯೋರಪಿ ॥ ೩೮ ॥

ಶಣಸರ್ಜರಸಂ ಭೂರ್ಜಜತುಲಾಕ್ಷಾಕಟಂಕಟಾಂ ।
ರಾಜಾ ಸಂಚಿನುಯಾದ್ದುರ್ಗೇ ಯಚ್ಚಾನ್ಯದಪಿ ಕಿಂಚನ ॥ ೩೯ ॥

ಕುಂಭಾಃಸಾಶೀವಿಷಾ ಧಾರ್ಯಾ ವ್ಯಾಘ್ರಸಿಂಹಾದಯಸ್ತಥಾ ।
ಮೃಗಾಶ್ಚ ಪಕ್ಷಿಣಶ್ಚೈವ ಪಶವಶ್ಚ ಪೃಥಗ್ವಿಧಾಃ ॥ ೪೦ ॥

ಸಂಚೇಯಾನಿ ವಿರುದ್ಧಾನಾಂ ಸುಗುಪ್ತಾನಿ ಪೃಥಕ್ಪೃಥಕ್ ।
ಕರ್ತವ್ಯಾನಿ ಮಹಾಭಾಗ ಯತ್ನೇನ ಪೃಥಿವೀಕ್ಷಿತಾ ॥ ೪೧ ॥

ಉಕ್ತಾನಿ ಚಾಪ್ಯನುಕ್ತಾನಿ ರಾಜದ್ರವ್ಯಾಣ್ಯಶೇಷತಃ ।
ಸುಗುಪ್ತಾನಿ ಪುರೇ ಕುರ್ಯಾಜ್ಜನಾನಾಂ ಹಿತಕಾಮ್ಯಯಾ ॥ ೪೨ ॥

---

ವ್ಯಾಸಂಗಮಾಡಿ ಸಕಲರೂ ಇವುಗಳ ಪ್ರಯೋಜನವನ್ನು ಹೊಂದುವುದಾದರೆ, ಮಹಾರಾಜರವರು ಲೋಕೋಪಕಾರಕ್ಕಾಗಿ ಮಾಡುತ್ತಿರುವ ಪುರಾಣಲೇಖನಪ್ರಕಟನ ವ್ಯವಸಾಯದ ಶ್ರಮವು ಸಾರ್ಥಕವಾಗುವುದು. ಕನ್ನಡದಲ್ಲಿ ಅರ್ಥಸಿಕ್ಕದೆ ಇದ್ದ ಮತ್ತು ದುರ್ಲಭವಾದ ಔಷಧಿಲತೆಗಳ ಹೆಸರಿನ ಮುಂದೆ ?-ಪ್ರಶ್ನಾರ್ಥಕಚಿಹ್ನೆಯನ್ನು ಹಾಕಿ ಅದನ್ನು ಸ್ವ (ಮೂಲ) ಸ್ವರೂಪದಲ್ಲಿಯೇ ಬಿಟ್ಟುಬಿಡಲಾಗಿದೆ. (ಇವುಗಳು ಮೈಸೂರಿನ ಪಸಾರೆ ಅಂಗಡಿಗಳಲ್ಲೂ, ದೊಡ್ಡಗಡಿಯಾರದ ಎದುರಿಗೆ ನಾನಾವಿಧ ಸಪ್ಪೆಯು, ಹಸುರುಗಳನ್ನು ಮಾರುತ್ತ ಕುಳಿತಿರುವ ಜನರಲ್ಲಿಯೂ ಕೆಲಕೆಲವು ದೊರೆಯುತ್ತವೆ.) ಪರಪಾಷ್ಟಕ, ಹೊಟ್ಟೆರುವ ಜವೇಗೋಧಿ, ಸಕಲ ರತ್ನಗಳೂ, ಸಕಲವಿಧವಾದ ಚಿತ್ರವಸ್ತುಗಳೂ, ಸಕಲವಿಧವಾದ ಲೋಹಗಳೂ ದುರ್ಗದಲ್ಲಿ ಸಂರಕ್ಷಿಸಿ ಇಡಲ್ಪಡಬೇಕು.

೩೮-೪೨. ದುರ್ಗದಲ್ಲಿ ಸಂಗ್ರಹಿಸಿಡಬೇಕಾದ ವಸ್ತುಗಳ ವಿವರ ;—ಬಟಾಣಿ, ಕಡಲೆ, ಗೋಧಿ, ಉದ್ದು, ಹೆಸರು, ಕಡಲೆ, ಎಳ್ಳು ಮತ್ತು ಇತರವಿಧವಾದ ಸಕಲ ಸಸ್ಯಧಾನ್ಯಗಳು— ಹಸುವಿನ ಸಗಣಿಯ ಮೇಲಿನ ಧೂಳು, ಶಣಬು, ಸರ್ಜರಸ (ಅಕ್ಕಸಾಲಿಗರು ಲೋಹದ ರೇಕುಗಳನ್ನು ಅಂಟಿಸಲು ಉಪಯೋಗಿಸುವ ಮೇಣ ಅಥವಾ ಗೋಂದು)—ಭುಜಪತ್ರೆ, ಅರಗು, ಲಾಕ್ಷೆಯೆಂಬ ಮತ್ತೊಂದು ವಿಧದ ಅರಗು, ಅರಿಶಿನ, ಇನ್ನೂ ಇತರವಿಧವಾದ ಸಾಮಾನುಗಳು.

**ಜೀವಕರ್ಷಭಕಾಕೋಲೀ ರಾಮಲಕ್ಯಃ ಪರೂಷಕಂ ।**
**ಶಾಲಿಪರ್ಣೀ ಪೃಶ್ನಿಪರ್ಣೀ ಮುದ್ಗಪರ್ಣೀ ತಥೈವ ಚ ॥ ೪೩ ॥**

**ಮಾಷಪರ್ಣೀ ತಥಾ ಚೈವ ಸಾರಿಬೇ ದ್ವೇ ಬಲಾಽಭಯಂ ।**
**ವೀರಾಶ್ವಗಂಧಾ ಪೃಥ್ವೀಕಾ ಬೃಹತೀ ಕಂಟಕಾರಿಕಾ ॥ ೪೪ ॥**

**ಶೃಂಗಾಟಕಾ ರೋಧ್ರಗೋಧೀ ವರ್ಷಭೂದರ್ಭಗುಂದ್ರಕಾ ।**
**ಮಧುಪರ್ಣೀ ವಿದಾರ್ಯೌ ದ್ವೇ ಮಹಾದುರ್ಗಾ ಮಹಾ ತಥಾ ॥ ೪೫ ॥**

**ಧನ್ವನಾ ಮಹಋಗ್ವ್ಯಾಹ್ಯಾ ತ್ರಿಕೋಟೀ ರಂಡಕಂ ವಿಷಂ ।**
**ಪರ್ಣಾಸನಾಹ್ವೇ ಮೃದ್ವೀಕಾ ಫಲ್ಗುಃ ಖರ್ಜೂರಯಷ್ಟಿಕಾ ॥ ೪೬ ॥**

---

ಮೃಗಾಲಯ (ಖಾಸ್‌ಬಂಗಲೆಯ) ದಲ್ಲಿಡಬೇಕಾದ ಪ್ರಾಣಿಗಳು ;—ವಿಷ ಪೂರಿತವಾದ ಸರ್ಪಗಳು, ಹುಲಿಗಳು, ಸಿಂಹಗಳು, ಇನ್ನೂ ಇತರೇ ದುಷ್ಟ ವನಮೃಗ ಗಳು ;—ವಿವಿಧವಾದ ಅಹಿಂಸ್ರ ಪ್ರಾಣಿಗಳು, ಪಕ್ಷಿಗಳು, ಚತುಷ್ಪಾಜ್ಜಂತುಗಳು—ಒಂದಕ್ಕೊಂದು ವೈರವುಳ್ಳ ಪ್ರಾಣಿಗಳು (ಇವುಗಳನ್ನು ಬೇರೆ ಬೇರೆಯಾಗಿ ದೂರದಲ್ಲಿ ಕಾವಲಿನಲ್ಲಿಡಬೇಕು.)

ಎಲೈ ಪರಶುರಾಮನೇ! ಈಗ ನಾನು ಕೆಲವುಗಳ ಹೆಸರನ್ನು ಹೇಳಿದೇನೆ. ಕೆಲವನ್ನು ಬಿಟ್ಟುಬಿಟ್ಟಿದ್ದೇನೆ. ನಾನು ಹೇಳಿರಲಿ, ಹೇಳದೆ ಇರಲಿ, ಅಪರೂಪವಾದು ದೆಂದೂ ಹೊಸದೆಂದೂ ತೋರಿಬರುವ ಸಕಲವಿಧಸಾಮುಗ್ರಿಗಳನ್ನೂ ರಾಜನು ದುರ್ಗದಲ್ಲಿ ತಂದಿಟ್ಟುಕೊಳ್ಳಬೇಕು. ಇವುಗಳೆಲ್ಲವನ್ನೂ ಗೂಢವಾಗಿಯೇ ಕಾಪಾಡಿಕೊಂಡಿರ ಬೇಕು. ೪೩ನೆಯ ಶ್ಲೋಕದಿಂದ ೫೪ನೆಯ ಶ್ಲೋಕ ಪೂರ್ತಿಯಾಗಿ ಹೇಳಿರುವ ಔಷಧದ್ರವ್ಯಗಳು, ಮಧುರಗಣವೆಂದು ವೈದ್ಯಶಾಸ್ತ್ರದಲ್ಲಿ ಪ್ರಸಿದ್ಧವಾಗಿರುವುವು. ಆ ಮಧುರಗಣಗಳ ಹೆಸರನ್ನೀಗ ಹೇಳುತ್ತೇನೆ, ಕೇಳಯ್ಯಾ! ಪರಶುರಾಮಾ!!

ಜೀವಕ ? - ಋಷಭಕ ? - ಕಾಕೋಲಿ - ಆಮಲಕಿ (ನೆಲ್ಲಿಚೆಟ್ಟು) - ಪರೂಷಕ (ಈಚಲು)-ಒಂದೆಲೆ ಹೊನ್ನೆ-ಮೂರೆಲೆ ಹೊನ್ನೆ-ಕಾಡು ಹೆಸರು-ಮತ್ತು ಕಾಡು ಉದ್ದಿನ

ಶುಕ್ರಾತಿಶುಕ್ರಕಾಶ್ಮರ್ಯಶ್ಛತ್ರಾತಿಚ್ಛತ್ರ ವೀರಣಾ ।
ಇಕ್ಷುರಿಕ್ಷುವಿಕಾರಶ್ಚ ಫಾಣಿತಾದ್ಯಾಶ್ಚ ಭಾರ್ಗವ ॥ ೪೭ ॥

ಸಹಾಶ್ಚ ಸಹದೇವಾಶ್ಚ ವಿಶ್ವದೇವಾಢರೂಷಕಂ ।
ಮಧೂಕಪುಷ್ಪಂ ಹಂಸಾಖ್ಯಾ ಶತಪುಷ್ಪಮಧೂಲಿಕಾ ॥ ೪೮ ॥

ಶತಾವರೀ ಮಧೂಕಂ ಚ ಪ್ರಿಯಾಲಂ ತಾಲಮೇವ ಚ ।
ಆತ್ಮಗುಪ್ತಾ ಕಟ್‌ಫಲಾಖ್ಯಾ ದರದಾ ರಾಜಸೇರುಕಾ ॥ ೪೯ ॥

ರಾಜರ್ಷಭಕಧಾನಕ್ಯಾ ಋಷ್ಯಪ್ರೋಕ್ತಾ ತಥೋತ್ಕಟಾ ।
ಕಟಂಕಟಾ ಪದ್ಮಬೀಜಂ ಗೋವಲ್ಲೀ ಮಧುವಲ್ಲಿಕಾ ॥ ೫೦ ॥

ಶೀತಪಾಕೀ ಕುಲಿಂಗಾಕ್ಷೀ ಕಾಕಜಿಹ್ವೋರುಪತ್ರಿಕಾ ।
ಏರ್ವಾರುಮ್ರುಪಸೌ ಚೊಭೌ ಮುಂಜಾತಕಪುನರ್ನವಾ ॥ ೫೧ ॥

ಕಾಶೇರುಕಾ ತುಗಾಕ್ಷೀರಾ ಬಿಲ್ವೇಶಾಲೂಕಕೇಸರಂ ।
ಶೂಕಧಾನ್ಯಾನಿ ಸರ್ವಾಣಿ ಶಂಬೀಧಾನ್ಯಾನಿ ಯಾನಿಚ ॥ ೫೨ ॥

---

ಗಿಡ - ಮಾಗಳೀಬೇರು - ಸೊಗದೇಬೇರು - ಕಳ್ಳಂಗಡಲೆ - ಅಳಲೆಕಾಯಿ-ಗೇರು, ಹಿರೀ ಮದ್ದಿನ ಬೇರು-ಸಣ್ಣಜೀರಿಗೆ-ಹೆಗ್ಗುಳ್ಳ-ನೆಲಗುಳ್ಳ-ನೆಗ್ಗಲುಗಿಡ-ಕಾಡುಗೋಧಿ ?-ಬಿಳೀ ಕೊಮ್ಮೆ - ಕೆಂಪುಕೊಮ್ಮೆ - ದರ್ಭೆ - ಕೊನ್ನಾರಿಗೆಡ್ಡೆ - ಸೀಹಾಲೆ - ಹಾಲುಗುಂಬಳ - ನೆಲ ಗುಂಬಳ- ಚುರುಚುರಿಕೆ-(ತುರುಚಿ-ಇದನ್ನು ಉಜ್ಜಿದರೆ ಮೈ ಉರಿಯುತ್ತದೆ.) ಚಂಗಲ ಕೋಷ್ಠ-ಚಿಟ್ಟಹರಳು-ವಿಷ (ವತ್ಸನಾಭಿ)-ಹೊನ್ನೇಮರದ ಎಲೆ-ತೇಗದ ಮರದ ಎಲೆ-ದ್ರಾಕ್ಷಿ- ಕಲ್ಲುಹತ್ತಿ - ಖರ್ಜೂರ - ಅತಿಮಧುರ -ಶುಕ್ಲಾತಿಶುಕ್ಲ ?- ಶಿವನೀಮರ-ಕೊಡೇ ಹುಲ್ಲು ?-ಮತ್ತೀ ಎಲೆ - ಕಬ್ಬು - ಬೆಲ್ಲ - ಮೊಗದುಂಸಕ್ಕರೆ-ಗೋರಂಟಿ (ತ್ಯಾರಣ)-ಸಹ ದೇವೀಗಿಡ-ವಿಶ್ವೇದೇವ-ಆಡುಮುಟ್ಟದ ಸಪ್ಪು-ಹಿಪ್ಪೇಹೂವು-ಹಂಸಪಾದೀಗಿಡ - ಸಬ್ಬ ಸಿಗೆಸೊಪ್ಪು - ಹಾಲುಕೊರಟಿಗೆ - ಆಷಾಢೀಬೇರು ಅಥವಾ ಮಜ್ಜಿಗೆ ಗೆಡ್ಡೆ (ಹಲವು ಬಜೆ- ಮಕ್ಕಳ ತಾಯಿಯೆಂದೂ ಹೇಳುವರು)-ಹಿಪ್ಪೆ-ತಾಳೇ-ನಸುಗುನ್ನಿಗಿಡ-ಶಿವನೀ-ಇಂಗಳೀಕ-ರಾಜಸೇರುಕ?-ರಾಜರ್ಷಭಕ(ಇದರಲ್ಲಿ ಉತ್ತಮ, ಮಧ್ಯಮವೆಂದು ಎರಡು ಬಗೆ)- ಧಾತಕೀಕುಸುಮ - ಋಷ್ಯಪ್ರೋಕ್ತ ?- ಉತ್ಕಟಾ ?- ಅರಿಶಿನ-ತಾವರೇಬೀಜ - ಎತ್ತಿನನಾಲಗೆ ಗಿಡ- ಹಾಲುಕೊರಟಿಕೆ-ಬರೀ ಕೊರಟಿಕೆ-ಶೀತಪಾಕೀ ?-ಕುಳಿಂಗಾಕ್ಷೀ ?-

ಕ್ಷೀರಂ ಕ್ಷೌದ್ರಂ ತಥಾ ಶುಕ್ಲಂ ಮಜ್ಜಾ ತೈಲಂ ವಸಾ ಘೃತಂ ।
ನಿಕೋಚಾಭಿಷುಕಾಕ್ಷೋಟಂ ವಾತಾಪಂ ಸೋರುಖಾಣಕಂ ॥ ೫೩ ॥

ಏವಮಾದೀನಿ ಚಾನ್ಯಾನಿ ವಿಜ್ಞೇಯೋ ಮಧುರೋ ಗಣಃ ।
ರಾಜಾ ಸಂಚಿನುಯಾತ್ಸರ್ವಂ ಪುರೇ ನಿರವಶೇಷತಃ ॥ ೫೪ ॥

ದಾಡಿಮಾಽಮ್ರಾತಕಾಂ ಲೀನಂ ತಂತಿಡೀಕಾಮ್ಲವೇ ತಸಂ ।
ಭವ್ಯಕಃ ಕಂಡಲೀಕಶ್ಚ ಮಕರಂದಕರೂಷಕಂ ॥ ೫೫ ॥

ಬೀಜಪೂರಕಕಾಂಡೀರ ಮಾಲತೀ ರಾಜಧನ್ವನಾ ।
ಕೋಲಕದ್ವಯಪರ್ಣಾನಿ ದ್ವಯೋರಲ್ಲೀಕಯೋರಪಿ ॥ ೫೬ ॥

ಪಾಲೇವತಂ ಭಾಗರಿಕಂ ಪ್ರಾಚೀನಾರೂಕಮೇವ ಚ ।
ಕಪಿತ್ಥಾಮಲಕಂ ಚುಕ್ರಂ ಕಲಿಂದಂ ಚ ಶಠಸ್ಯ ಚ ॥ ೫೭ ॥

ಜಾಂಬವಂ ನವನೀತಂ ಚ ಸೌವೀರಕತುಷೋಚಕೇ ।
ಸುರಾಸವಂ ಚ ಮದ್ಯಾನಿ ಮಂಡಂ ತಕ್ರದಧೀನಿ ಚ ॥ ೫೮ ॥

---

ಕಾಗೇಗೊಂಡೇಗಿಡ - ಉರುಪತ್ರಿಕಾ ?- ಎರಡು ವಿಧವಾದ ಏರ್ವಾರುಪಸಗಳು ?- ಮುಂಜಾಕತ ?- ಪುರ್ನವಾ - ಕೊಮ್ಮೆ ಬೇರು - ಕೊತ್ತೀಗೆಡ್ಡೆ - ತವಕ್ಷೀರ - ಬಿಲ್ವ - ಶಾಲೂಕ-ಕೇಸರಿ-ನವಣೆ, ಹಾರೆ-ಸಾಮೆ ಮುಂತಾದ ಸಕಲ ವಿಧವಾದ ಶೂಕಧಾನ್ಯಗಳು-ತೊಗರಿ-ಹೆಸರು-ಉದ್ದು-ಕಡಲೆ ಮುಂತಾದ ವಿಶಿಷ್ಟದ್ವಿದಳ (ಶಂಬೀಧಾನ್ಯ) ಗಳು-ಹಾಲು-ಜೇನುತುಪ್ಪ-ಶುಕ್ಲ-ಮಜ್ಜಾ-ತೈಲ-ವಸೆ (ಕೊಬ್ಬು) ತುಪ್ಪ-ನಿಕೋಚ-ಅಭಿಷುಕ - ಆಕ್ಷೋಟ (ಅಕರೋಟು)-ವಾತಾಪವೇ ಮುಂತಾದ ದ್ರವ್ಯಗಳೆಲ್ಲವೂ ಮಧುರಗಣಕ್ಕೆ ಸೇರಿದುವು.

೫೫-೫೯. ಇನ್ನು ಮುಂದೆ ಆಮ್ಲಗಣದ್ರವ್ಯಗಳನ್ನು ಹೇಳುತ್ತೇನೆ ದಾಳಿಂಬದಬೀಜ, ಅಮಟೇಕಾಯಿ, ತಿಂತ್ರಿಣೀ, (ಹುಣಿಸೇಹಣ್ಣು), ಓಟೇಹುಳಿ, ಭವ್ಯಕ, ಕಂಡಲೀಕ, ಮಕರಂದ, ಕರೂಷಕ, ಬೇಲದಹಣ್ಣು, ನೆಲ್ಲೀಕಾಯಿ, ಪುಳ್ಳಂ ಸರಚಿಸಪ್ಪು, ಹಾವುಮೆಕ್ಕೇಕಾಯಿ, ಶಠ, ಜಾಂಬವ, ನೇರಿಳೆಹಣ್ಣು, ನವನೀತಂ,

**ಶುಕ್ತಾನಿ ಚೈವ ಸರ್ವಾಣಿ ಜ್ಞೇಯಾನ್ಯಮ್ಲ ಗಣಾನಿ ವೈ ।**
**ಸೈಂಧವೋದ್ಭೇದನಾದೇಯಪಾಕ್ಯಸಾಮುದ್ರರೋಚಕಸಂ**
**ಕೂಪ್ಯ ಸೌವರ್ಚಲವಿಡಂ ವಾಲಕೈಲೋಪಬಾಹುಕಂ ॥ ೫೯ ॥**

**ಊಷಕ್ಷಾರಂ ಕಾಲಭಸ್ಯ ವಿಜ್ಞೇಯೋ ಲಾವಣೋ ಗಣಃ ।**
**ಏವಮಾದೀನಿ ಚಾನ್ಯಾನಿ ರಾಜಾ ಸಂಚಿನುಯಾತ್ಪುರೇ ॥ ೬೦ ॥**

**ಪಿಪ್ಪಲೀ ಪಿಪ್ಪಲೀಮೂಲಂ ಚವ್ಯ ಚಿತ್ರಕನಾಗರಂ ।**
**ಕುಬೇರಕಂ ಸಮರಿಚಂ ಶಿಗ್ರುಂ ಭಲ್ಲಾತಸರ್ಷಪಾಃ ॥ ೬೧ ॥**

**ಕುಷ್ಠಾಜಮೋದಕಿಟಿಭ ಹಿಂಗುಮೂಲಕ ಧಾನ್ಯಕಂ ।**
**ಕಾರವ್ಯಃ ಕುಚಿಕಾದಾತ್ಯಃ ಸುಮುಖಃ ಕಾಲಪಾಲಿಕಾ ॥ ೬೨ ॥**

**ಫಣಿಜ್ಜಕೋಥಲಶುನಂ ಭೂಸ್ತೃಣಂ ಸುರಸಸ್ತಥಾ ।**
**ಕಾಯಸ್ಥಾ ಚ ವಯಸ್ಥಾಚ ಹರಿತಾಲಂ ಮನಶ್ಶಿಲಾ ॥ ೬೩ ॥**

---

ಬೆಣ್ಣೆ, ಸೌವೀರಕ, ಕಲಗಚ್ಚು, ತೌಡಿನ ನೀರು, ಸುಧಾ, ಆಸವ ಮುಂತಾದ ಮದ್ಯ ವಿಶೇಷಗಳು, ಮೊಸರು, ನೀರುಮಜ್ಜಿಗೆ, ಮೊಸರು ಶುಕ್ತವೇ ಮುಂತಾದುವುಗಳೇ ಆಮ್ಲಗಣಗಳು.

೬೦. ಸೈಂಧವಲವಣ, ಅಟ್ಟುಪ್ಪು, ಬಿಡಲವಣ, ಅಡಿಗೆ ಉಪ್ಪು, ಸಮುದ್ರ ನೀರಿನ ಉಪ್ಪು, ಭಾವಿನೀರಿನ ಉಪ್ಪು, ಸುವರ್ಚಲವಣ, ಚೌಳುಪ್ಪು, ಲೋಹಭಸ್ಮ ಇವುಗಳೆಲ್ಲಾ ಲವಣಗಳೆನಿಸುವುವು-ಇವುಗಳನ್ನೆಲ್ಲಾ ದುರ್ಗದಲ್ಲಿ ಸಂಗ್ರಹಿಸಿಡಬೇಕು.

೬೧-೬೮. ಕಟುಕ (ಖಾರ) ಗಣದ್ರವ್ಯಗಳನ್ನು ಹೇಳುತ್ತೇನೆ, ಕೇಳು. ಹಿಪ್ಪಲೀ, ಮೋಡಿ, ಚವ್ಯ, ಚಿತ್ರಮೂಲ, ಶುಂಠಿ, ಕಾಮಕಸ್ತೂರಿ, ಮೆಣಸು, ನುಗ್ಗೇ, ಗೇರು, ಸಾಸುವೆ, ಚೆಂಗಲಕೋಷ್ಠ, ವಾದಕ್ಕಿ, ಕಿಟಿಭ, ಇಂಗು, ಮೂಲಂಗಿ, ಕೊತ್ತಂಬರಿಬೀಜ, ಕರೀಜೀರಿಗೆ, ಸುಮುಖಟಿ, ಕೃಷ್ಣತುಳಸಿ, ಕುಚಿಕಾದಾತ್ಯ ?-ಕುಲಪಾಲಿಕಾ ?-ಬಿಳೀಕಾಮಕಸ್ತೂರಿ, ಬೆಳ್ಳುಳ್ಳಿ, ಗಂಜಿಣೇ (ಹುಲ್ಲು) ತುಳಸೀ, ಅಳಲೇಕಾಯಿ ಮತ್ತು ಅದರ ಬೇರೆ ಬೇರೆ ಭೇದಗಳು, ಅರಿದಳ, ಮಣಿಶಿಲೆ, ಅಮೃತವಳ್ಳಿ, ಅಗಿಲು, ಜಾಪಾಳ, ಮುಳ್ಳುಮುತ್ತುಗ, ಕುಂಕುಮಕೇಸರಿ, ಸಣ್ಣ

**ಅಮೃತಾಗುರುದಂತೀ ಚ ರೋಹಿತಂ ಕುಂಕುಮಂ ತಥಾ ।**
**ಅವಲ್ಗುಜಃ ಸೋಮರಾಜೀ ಕೃಷ್ಣಸರ್ಪಾ ಶಿಲಾಜತು** ॥ ೬೪ ॥

**ಕಪಿಲ್ಲಕಂ ತ್ರೈಜವತೀ ವಿಡಂಗನಿಚುಲಾನಿ ಚ ।**
**ಏಡಕಾಕ್ಷೀ ಪ್ರಕೀರ್ಯಾಚ ಪುಂಡೀರಂ ಸ್ವರ್ಣಯೂಥಿಕಾ** ॥ ೬೫ ॥

**ಸೌಗಂಧಿಕಂ ಗೃಂಜನಕಂ ವೇಶ್ಮಧೂಮೋಽಥ ರೋಚನಾ ।**
**ಯವಾ ಐರಂಡಕಾಂಡೀರಂ ಸತ್ಯಕೀ ಹಪುಷಾ ತಥಾ** ॥ ೬೬ ॥

**ಸರ್ವಪೀತಾನಿ ಸೂತ್ರಾಣಿ ಪ್ರಾಯೋ ಹರಿತಕಾನಿ ಚ ।**
**ಫಲಾನಿ ಚೈಷಾಂ ಚ ತಥಾ ಸೂಕ್ಷ್ಮೈಲಾ ಹಿಂಗುಪತ್ರಿಕಾ** ॥ ೬೭ ॥

**ಏವಮಾದೀನಿ ಚಾನ್ಯಾನಿ ಗಣಂ ಕಟುಕಸಂಜ್ಞಕಂ ।**
**ರಾಜಾ ಸಂಚಿನುಯಾದ್ದುರ್ಗೇ ಪ್ರಯತ್ನೇನ ಭೃಗೂತ್ತಮ** ॥ ೬೮ ॥

**ಮುಸ್ತಚಂದನಹ್ರೀಬೇರ ಕೃತಮಾಲಕದಾರವಂ ।**
**ಹರಿದ್ರಾನಲದೋಶೀರ ಮಂಕ್ತಾಮಲಕವಾಸ್ತುಕಂ** ॥ ೬೯ ॥

---

ಓಮು (ವಾದಕ್ಕಿ) ದೊಡ್ಡಓಮು (ಓಮಂವಾಟರ್) ಸರ್ಪಾಕ್ಷೀಮೂಲಿಕೆ, ಶಿಲಾಜಿತು, ಮೆಟ್ಲಗಿಡ, ಗಂಗುಂಗೆಬೀಜ, ವಾಯುವಿಳಂಗ, ನೀರಬ್ರಹ್ಮಿ (ಹೊಳೆಮಧ್ಯದಲ್ಲಿ ಎತ್ತರವಾಗಿ ಬಿಡುವ ಗಿಡ) ನೀರಹಬ್ಬೆಮರ, ಏಡಕುಕ್ಷಿ?-ತಪಸೀಮರ, ಪುಂಡೀರ ವೃಕ್ಷ?-ಹಳದಿಶಾವಂತಿಗೆ ಸೌಗಂಧಿಕಾಪುಷ್ಪ, ಬಿಳೀ ಈರುಳ್ಳಿ, ಗೃಹಧೂಮ, (ಇಲ್ಲಣ), ಗೋರೋಚನ, ಯವಕ್ಷಾರ, ದಪ್ಪಹರಳು, ಸತ್ಯಕೀ, ನೀರಹಬ್ಬೆ ಮತ್ತು ಹಳದೀ ಬಣ್ಣದ ಹಂಬುಗಳಿಗೆ ಸರ್ವಪೀತಸೂತ್ರಗಳೆಂದು ಹೇಳಬಹುದು, ಬಸಳೇ ಸೊಪ್ಪು ಮತ್ತು ಈ ಪೂರ್ವೋಕ್ತವಾದ ಗಿಡಗಳ ಹಣ್ಣುಗಳು, ಸಣ್ಣಯಾಲಕ್ಕಿ, ಇಂಗುಪತ್ರೆ, ಇಂಗಿನಎಲೆ, ಇದುವರಿಗೆ ಹೇಳಿದ ಸಮಸ್ತ ದ್ರವ್ಯಗಳೂ ಖಾರದ್ರವ್ಯ ಗಣಕ್ಕೆ ಸೇರಿದುದರಿಂದ ಕಟುಕಗಣವೆನಿಸಿಕೊಳ್ಳುವುವು. ಈ ಪದಾರ್ಥಗಳನ್ನೆಲ್ಲಾ ಬಹಳ ಪ್ರಯತ್ನಪಟ್ಟಾದರೂ ರಾಜರು ದುರ್ಗದಲ್ಲಿ ಸಂರಕ್ಷಿಸಿ ಇಡಬೇಕು.

೬೯-೭೫. ಕೊನ್ನಾರೆಗೆಡ್ಡೆ, ಶ್ರೀಗಂಧ, ಲಾಮಂಚ, ಕಕ್ಕೇಗಿಡ, ಮರದರಿಶಿನ, ಅರಶಿನ, ಲಾಳದಕಡ್ಡಿ, ಮುಡಿವಾಳ, ಆಮಳಕ, ವಾಸ್ತುಕ, ಚಕೋತನಸಪ್ಪು. ಪೂರ್ವಾ? ತಿನ್ನುವ ಪಡುವಲಕಾಯಿ, (ಪಟೋಲ), ಕಹಿಪಡವಲ, ಕಟುಕರೋಹಿಣಿ,

**ಪೂರ್ವಾ ಪಟೋಲಕಟುಕಾ ಸಾತತ್ವಕ್ಪತ್ರತುಂಬಕಃ ।**
**ಕಿರಾತತಿಕ್ತಕೌ ನಿಂಬಂ ಯಷ್ಟೀಕಾತಿವಿಷಾ ತಥಾ ॥ ೨೦ ॥**

**ಕಾಲೀಶಪತ್ರಂ ತಗರಂ ಸಪ್ತಪರ್ಣಂ ನಿಕಾಂತಕಂ ।**
**ಕಾಕೋದುಂಬರಕೌದೀಪ ಸುಷುವೀಕಣಿಕಾಸನಾಃ ॥ ೨೧ ॥**

**ಷಡ್‌ಗ್ರಂಥಾ ಚ ಹಿಣೀ ಮಾಂಸೀ ಪರ್ಪಟಿಂ ಮದಯಂತಿಕಾ ।**
**ರಸಾಂಜನಂ ಭೃಂಗರಸಂ ಪತಂಗಾ ಪರಿಪೈಲವಂ ॥ ೨೨ ॥**

**ದುಃಸ್ಪರ್ಶಾ ಗುರುಣೀ ಕಾಶೋ ರಸಕಂ ಗಂಧನಾಕುಲೀ ।**
**ತುಷವಲ್ಲೀ ವ್ಯಾಘ್ರನಖಂ ಶಾಂಗಷ್ಟಾಚತುರಂಗುಲಃ ॥ ೨೩ ॥**

**ರಾಸ್ನಾ ಚೈವ ಕುಶಾ ಸ್ಫೀತಾ ಹರೇಣುರಥ ರೇಣುಕಾ ।**
**ವೇತ್ರಾಗಂ ವೇತಸಸ್ತುರ್ವೀ ವಿಷಾಣಂ ಲೋಹಮಂಜನಂ ॥ ೨೪ ॥**

---

ಶುಂಠಿ, ಅಗಳುಶುಂಠಿ, ದಾಲ್ಚಿನ್ನಿ, ಲವಂಗಪತ್ರೆ, ಸೋರೆ (ಕಹಿ) ನೆಲಬೇವು, ಬೇವು, ಮುಷ್ಟಿಕಾ, ಅತಿಮಧುರ, ಅತಿಬಜೆ, ತಾಳೀಶಪತ್ರೆ, ಗ್ರಂಥಿಕತಗರ, ಏಳೆಲೆಬಾಳೆಗಿಡ, ನಿಕಾಂತಕ ?-ಕಲ್ಹತ್ತೀಗಿಡ, ದೀಪ, ವಾದಕ್ಕಿ, ಸುಷವೀ, ಕಣಿಕಾಪನ ?-ಬಜೆ, ಹಿಣಿ, ಜಟಾಮಾಂಸಿ, ಪರಪಾಷ್ಟಕ, ಅಳಗುನ್ನಿಗಿಡದಸಾಂಜನ (ದರ್ವೀಕ್ವಾಥ ಮಜಾಕ್ಷೀರ ಪಾರಂವಕ್ತ್ರಾಯದಾಘನಂ । ತಥಾರಸಾಂಜನಾಖ್ಯಂ-ತು ನೇತ್ರಯೋಶ್ಚ ಪ್ರಯೋಜಯೇತ್ ॥ ಮರದರಿಶಿನದ. ಕಷಾಯಕ್ಕೆ ಅದರ ನಾಲ್ಕನೆ ಒಂದು ಭಾಗ ಆಡಿನ ಹಾಲನ್ನು ಸೇರಿಸಿ ಘಟ್ಟಿಯಾಗುವವರಿಗೆ ಕಾಯಿಸಬೇಕು. ಸಾದಿನ ಹಾಗೆ ಆದ ನಂತರ ಆ ಕಾಡಿಗೆಯನ್ನು ಸಂಗ್ರಹಿಸಿ ಕಣ್ಣುನೋವುಗಳಿಗೆ ಆ ಕಪ್ಪನ್ನು ಹಚ್ಚಿದರೆ ನೇತ್ರ ರೋಗಗಳು ಗುಣವಾಗುವುವು.) ಗರಗದಸೊಪ್ಪಿನರಸ, ಪತಂಗ ?-ವರಿಪೈಲವ ?-ತುರುಚೀಗಿಡ (ದುಸ್ಪರ್ಶ) ಕರೀಅಗಿಲು, ದರ್ಭೆ, ರಸಕ ?-ಪ್ರಂಖಣಚಟ್ಟು, ತುಷವಲ್ಲೀ ?-ವ್ಯಾಘ್ರನಖ, ಹುಲಿಯುಗುರು, ಸಾರಗದಕೊಂಬು, ಕಪ್ಪೆಗಿಡ (ಚತುರಂಗುಲ, ಆರಗ್ವಧೆ ರಾಜವೃಕ್ಷಶಮ್ಯಾಕ ಚತುರಂಗುಲಾಃ ಇತ್ಯಮರಃ) ಸಣ್ಣರಾಸ್ಮೆ, ದರ್ಭೆಹುಲ್ಲು, ವಿಷ್ಣುಕ್ರಾಂತೀ, ರೇಣುಕೇಬೀಜ, ಸಣ್ಣರೇಣುಕೆ (ಹರೇಣು ರೇಣುಕಾ ಇತ್ಯಮರಃ) ಬೆತ್ತದಕುಡಿ (ಸುಬ್ರಹ್ಮಣ್ಯಕ್ಷೇತ್ರದಲ್ಲಿ ಇಂತಹ ಬೆತ್ತದ ಕುಡಿ ಇದೆ.) ನೀರಪಾಶೆ, ತುರ್ವೀ, ವಿಷಾಣ, ಕಬ್ಬಿಣ, ಅಂಜನದಕಲ್ಲು, ಜಾಜೀ, ಕಾಡಿನ ಕಟುಕ

**ಮಾಲತೀ ವನತಿಕ್ತಾಖ್ಯಾ ವೃಷಗೋಜಿಹ್ವಕರ್ಕಶಾಃ ।**
**ಪರ್ಪಟೀ ಚ ಗುಡೂಚೀ ಚ ಗಣಸ್ತಿಕ್ತಕ ಸಂಜ್ಞಕಃ ॥ ೭೫ ॥**

**ಏವಮಾದೀನಿ ಚಾನ್ಯಾನಿ ರಾಜಾಸಂಚಿನುಯಾತ್ಪರೇ ।**
**ಅಭಯಾಮಲಕೇ ಚೋಭೇ ತಥೈವ ಚ ವಿಭೀತಕಂ ॥ ೭೬ ॥**

**ಪ್ರಿಯಂಗುಧಾತಕೀ ಪುಷ್ಪ ಮೋಚರೋಽಥಾಸನಾರ್ಜುನಾ ।**
**ಅನಂತಾಮ್ರಾಸ್ಥಿನಾಗಾಹ್ವಾಸ್ಯೋನಾ ಕಂಕಫಲಂ ತಥಾ ॥ ೭೭ ॥**

**ಭೂರ್ಜಪತ್ರಂ ಶಿಖೋದ್ಭೇದಂ ಪಾಟಲಾ ವಕುಲೋಽಷ್ಟಕಂ ।**
**ಸಮಂಗಾ ತ್ರಿವೃತಾಮೂಲಂ ಕಾರ್ಪಾಸಾ ಗೌರಿಕಾಂಜನಂ ॥ ೭೮ ॥**

**ವಿದ್ರುಮಂ ಸಮಧೂಚ್ಛಿಷ್ಟಂ ಕುಂಭೀಕಕುಮುದೋತ್ಪಲೇ ।**
**ನ್ಯಗ್ರೋಧೋದುಂಬರಾಶ್ವತ್ಥಕಿಂಶುಕಾಃ ಶಿಂಶಪಾ ಶಮೀ ॥ ೭೯ ॥**

---

ರೋಹಿಣೀ, ಆಡುಸೋಗೆ, ಎತ್ತಿನ ನಾಲಿಗೆಗಿಡ, ಕರ್ಕಶ? ಪರಪಾಷ್ಟಕ?-ಅಮೃತ ವಳ್ಳಿ ಇವೇ ಮುಂತಾದ ದ್ರವ್ಯಗಣಕ್ಕೆ ತಿಕ್ತಕ (ಕಹಿ) ಗಣದ ಪದಾರ್ಥಗಳೆಂದು ಹೆಸರು.

೭೬-೮೨. ಇದುವರೆಗೆ ಮೇಲೆ ಹೇಳಿದ ಕಹಿದ್ರವ್ಯಗಳನ್ನು ದುರ್ಗದಲ್ಲಿ ಶೇಖರಿಸಿಡಬೇಕಲ್ಲದೆ ಮುಂದೆ ಹೇಳುವ ಕಷಾಯ (ಒಗರು) ರಸದ್ರವ್ಯಗಳನ್ನು ಸಹ ಶೇಖರಿಸಿಡಬೇಕು. ಆ ಕಷಾಯದ್ರವ್ಯಗಳ ಹೆಸರನ್ನೀಗ ಹೇಳಲಾಗುವುದು.— ಅಳಲೇಕಾಯಿ, ಎರಡು ವಿಧವಾದ ನೆಲ್ಲಿ, (ನೆಲ್ಲಿ, ಕಿರುನೆಲ್ಲಿ, ಸಪ್ಪೆಗೆ ಅರ್ಹವಾದ ಸಪ್ಪು) ತಾರೇಕಾಯಿ, ನೆಳಲು, (ಪ್ರಂಖಮುಚೆಟ್ಟು ಎಂದು ತೆಲುಗಿನಲ್ಲಿ ಹೇಳು ವರು) ಧಾತಕೀಕುಸುಮ, ಮೋಚ, ಎಲವದಹಗಿಲು (ಗೋಂದು) ಚಂಗಲಕೋಷ್ಠ, ಅಸನ, ಹೊನ್ನೆ, ಅರ್ಜುನ, ಕೆಂಪಿನಮತ್ತೀಗಿಡ, ಅನಂತನಗೊಂಡೇಗಿಡ, ಜೀರಿಗೆ ಮಾವಿನ ಓಟೆ, ನಾಗಸಂಪಿಗೆ ಹೂವು, ಹೆಮ್ಮರ, ಕಂಕಫಲ, ನಾಯಿಬೇಲದಕಾಯಿ, ಭುಜಪತ್ರೆ, ಮಯೂರೀಶಿಖಿ, ಪಾದರೀಹೂವು, ಪಗಡೇಹೂವು, ಅಷ್ಟಕ?-ಮಂಜಿಷ್ಠೆ, ತಿಗಡೇಬೇರು, ಹತ್ತಿ, ಕಾವಿಕಲ್ಲು, ಅಂಜನದಕಲ್ಲು, ಹವಳದಕುಡಿ, ಜೇನುಮೇಣ, ಶಿವನೀಮರ, ನೈದಿಲೆ, ಕನ್ನೈದಿಲೆ ಹೂವುಗಳು, ಆಲ, ಅತ್ತಿ, ಅರಳಿ, ಮುತ್ತುಗ, ಮುಳ್ಳುಮುತ್ತುಗ, ಬನ್ನೀಮರದ ಚಕ್ಕೆಗಳು, ಪ್ರಿಯಾಳ?-ಏಳುಕ?-ಆಸಾರ?-

ಪ್ರಿಯಾಲಾ ಏಲುಕಾಸಾರಂ ಶಿರೀಷಂ ಪದ್ಮಕಂ ತಥಾ ।
ಬಿಲ್ವಾಗ್ನಿಮಂಥಂ ಪ್ಲಕ್ಷಶ್ಚ ಶ್ಯಾಮಾಕಾಯಚಕೌಯನಂ ॥ ೮೦ ॥

ಅಂಕೋಲೋಶೀರಬದರಾಃ ಕದಂಬಖದಿರಾಹ್ವಯಂ ।
ಯೇಷಾಂ ಪತ್ರಾಣಿ ಸಾರಾಣಿ ಮೂಲಾನಿ ಕುಸುಮಾನಿ ಚ ॥ ೮೧ ॥

ಏವಮಾದೀನಿ ಚಾನ್ಯಾನಿ ಕಷಾಯಾಖ್ಯೋ ಗಣೋಽಸ್ತಿ ಚ ।
ಪ್ರಯತ್ನೇನ ಭೃಗುಶ್ರೇಷ್ಠ ರಾಜಾಸಂಚಿನುಯಾತ್ಪುರೇ ॥ ೮೨ ॥

ಕೀಟಾಶ್ವಮಾರಣೇ ಯೋಗಾ ವ್ಯಂಗತಾಯಾಂ ತಥೈವ ಚ ।
ವಾತಧೂಮಾಂಬುಮಾರ್ಗಾಣಾಂ ದೂಷಣಾನಿ ತಥೈವ ಚ ॥ ೮೩ ॥

ಧಾರ್ಯಾಣಿ ಪಾರ್ಥಿವೈರ್ದುರ್ಗೇ ನಾಹಂ ವಕ್ಷ್ಯಾಮಿ ತಾನಿ ತೇ ।
ವಿಷಾಣಾಂ ಧಾರಣಂ ಕಾರ್ಯಂ ಪ್ರಯತ್ನೇನ ಮಹೀಭುಜಾ ॥ ೮೪ ॥

---

ಬಾಗೇಮರದಚಕ್ಕೆ, ಪದ್ಮಕ, ಬಿಲ್ವಪತ್ರೆ, ತಗ್ಗಿ, ಗೋಣೀಮರ (ಪ್ಲಕ್ಷ) ಸಾಮೇ ಧಾನ್ಯ, ಕೌಯನ ?-ರಾಜಾದನ ? ಬದಿರುಕಡಲೆ, ಸಂಪಿಗೆಹೂವು, ಪ್ರಿಯಕಪುಷ್ಪ-ಅಂಕೋಲೇಮರ, ಲಾಮಂಚ, ಎಲಚೀ, ಈಚಲು, ಕಗ್ಗಲೀಚಕ್ಕೆ, ಇವೇ ಮೊದಲಾದ ಮರಗಳ ಎಲೆಗಳೂ, ಬೇರುಗಳೂ, ಹೂವುಗಳೂ, ರಸಗಳೂ ಸಹ ದುರ್ಗದಲ್ಲಿ ಸುರಕ್ಷಿತವಾಗಿರಬೇಕು.

೮೨. ಮೇಲೆ ವಿವರಿಸಿದ ಪದಾರ್ಥಗಳಲ್ಲದೆ ಇನ್ನೂ ಎಷ್ಟೋ ವಿಧ ಕಷಾಯ ದ್ರವ್ಯಗಳಿವೆ. ಅಂತಹ ಕಷಾಯ ದ್ರವ್ಯಗಳನ್ನು ಪ್ರಯತ್ನದಿಂದ ತರಿಸಿ ಮಹಾರಾಜನು ದುರ್ಗದಲ್ಲಿ ಸಂರಕ್ಷಿಸಿಕೊಂಡಿರಬೇಕು.

೮೩. ಕೊಂಡೀಚೇಳು - ಕುದುರೆ ಮುಂತಾದುವುಗಳು ಕಡಿದರೆ ಪ್ರಾಣ ಹೋಗುವುದುಂಟು. ಇಂತಹ ಸಂದರ್ಭದಲ್ಲಿ ವಿಷವೇರಿದಾಗ ಕೆಲವು ವಿಧವಾದ ಗಾಳಿ, ಹೊಗೆ, ನೀರು-ಗಳನ್ನು ಪ್ರಯೋಗಿಸುವ ಕ್ರಮಗಳಿವೆ. ಇನ್ನೂ ಎಷ್ಟೋ ವಿಧವಾದ ರೋಗಗಳೂ ಇವೆ.

೮೪. ಅವುಗಳ ಹೆಸರು, ಲಕ್ಷಣಗಳನ್ನೀಗ ನಾನು ನಿನ್ನೊಡನೆ ಇನ್ನು ವಿಸ್ತಾರವಾಗಿ ವಿವರಿಸುವುದಿಲ್ಲ. ವೈದ್ಯಶಾಸ್ತ್ರಪಾರಂಗತರಾದವರಿಗೆ ಅವೆಲ್ಲವೂ ಗೊತ್ತಿವೆ. ಅವುಗಳ ಲಕ್ಷಣವನ್ನು ತಿಳಿದು ರಾಜನಾದವನು ಅವುಗಳನ್ನೆಲ್ಲಾ ದುರ್ಗದೊಳಗೆ ಸಂರಕ್ಷಿಸಿ ಇಟ್ಟಿರಬೇಕು.

**ವಿಚಿತ್ರಾಶ್ಚಾಗದಾ ಧಾರ್ಯಾ ವಿಷಪ್ರಶಮನಾಸ್ತಥಾ ।**
**ರಕ್ಷೋಭೂತಾದಿಶಮನಾಃ ಪಾಪಘ್ನಾಃ ಪುಷ್ಟಿವರ್ಧನಾಃ ॥ ೮೫ ॥**

**ಕಾಲಾವಿದಶ್ಚ ಪುರುಷಾಃ ಪುರೇ ಧಾರ್ಯಾಃ ಪ್ರಯತ್ನತಃ ।**
**ಭೀತಾನ್ಪ್ರಮತ್ತಾನ್ ಕುಪಿತಾನ್ ತಥೈವ ಚ ವಿಮಾನಿತಾನ್ ॥ ೮೬ ॥**

**ಕುಭೃತ್ಯಾನಕುಲೀನಾಂಶ್ಚ ನ ರಾಜಾ ವಾಸಯೇತ್ಪುರೇ ॥ ೮೭ ॥**
**ಯಂತ್ರಾಯುಧಾಟ್ಟಾಲಚಯೋಪಪನ್ನಂ**
**ಸಮಗ್ರಧಾನ್ಯೌಷಧ ಸಂಪ್ರಯುಕ್ತಂ ।**

---

೮೫. ಮಹಾರಾಜನು ಶತ್ರುಭೀತಿಯೊದಗಿದ ಸಂದರ್ಭದಲ್ಲಿ ಅವರ ಮೇಲೆ ಪ್ರಯೋಗಿಸುವುದಕ್ಕಾಗಿ ವಿಷದ್ರವ್ಯಗಳನ್ನು ಸಹ ತರಿಸಿ ಇಡಬೇಕು. ಮತ್ತು ವಿಷ ದೋಷವನ್ನು ಪ್ರಶಮನಗೊಳಿಸುವ ವಿಚಿತ್ರವಾದ ಔಷಧಿಗಳಿವೆ. ರಾಕ್ಷಸರನ್ನೂ, ಭೂತಪ್ರೇತಪಿಶಾಚಿಗಳನ್ನೂ ಸಹ ಓಡಿಸುವ ಸಕಲ ರೋಗ(ಪಾಪ)ಗಳನ್ನೂ ನಿವಾರಣೆ ಮಾಡುವ ಪುಷ್ಟಿವರ್ಧಕಗಳಾದ ಎಷ್ಟೋ ವಿಧವಾದ ಔಷಧಗಳೂ ಇವೆ.

೮೬. ರೋಗ ನಿಧಾನವನ್ನು ತಿಳಿದು ಔಷಧ ಕೊಟ್ಟು ಗುಣಪಡಿಸುವ ವೈದ್ಯರನ್ನು ಅವಶ್ಯವಾಗಿ ಕರೆತರಿಸಿ ಮಹಾರಾಜನು ಅವರಿಗೆ ಜೀವನವನ್ನು ಕಲ್ಪಿಸಿ ರಾಜಧಾನಿಯೊಳಗೆ ಇಟ್ಟುಕೊಳ್ಳಬೇಕು.

೮೭. ಭೀತರಾದವರನ್ನೂ, ಪ್ರಮತ್ತ (ಕೊಬ್ಬಿದ) ರನ್ನೂ, ಕುಪಿತರಾದವರನ್ನೂ, ಅವಮಾನಿತರಾದವರನ್ನೂ, ಕೆಟ್ಟ ಸೇವಕರನ್ನೂ, ಕುಲಹೀನರನ್ನೂ ಮಹಾರಾಜನು ತನ್ನ ಊರಿನಲ್ಲಿ ವಾಸಮಾಡಲು ಅವಕಾಶಕೊಡಕೂಡದು.

೮೮. ಯಂತ್ರ ಸಹಾಯದಿಂದ ಪ್ರಯೋಗ ಮಾಡುವ ಆಯುಧ (ಮಿಷರ್ಗ) ಗಳಿಂದ ಕೂಡಿದ ದೊಡ್ಡದೊಂದು ಆಯುಧಶಾಲೆಯನ್ನೂ, ಸಕಲ ಧಾನ್ಯಗಳನ್ನೂ, ಸಕಲ ಔಷಧ ದ್ರವ್ಯಗಳನ್ನೂ ಶೇಖರಿಸಿದ ದೊಡ್ಡ ದೊಡ್ಡ ವಸ್ತು-ಸಂಗ್ರಹಾಲಯ

**ವಣಿಗ್ಜನೈಃ ಶೋಭನಮಾವಸೇತ**
**ದುರ್ಗಂ ಸುಗುಪ್ತಂ ನೃಪತಿಸ್ಸದೈವ ॥ ೮೮ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂಪ್ರತಿ ಪುಷ್ಕರಾಖ್ಯಾನೇದುರ್ಗಸಂಪತ್ತಿರ್ನಾಮ ಷಡ್ವಿಂಶತಿತಮೋಽಧ್ಯಾಯಃ**

---

ಗಳನ್ನೂ, ವರ್ತಕರ ಅಂಗಡಿಗಳಿಂದ ಶೋಭಿಸುವ ಅಂಗಡೀ ಸಾಲುಗಳನ್ನೂ ದುರ್ಗದೊಳಗೆ ನಿರ್ಮಾಣಮಾಡಿಸಿ, ಆ ದುರ್ಗದಲ್ಲಿ ಅರಮನೆಯನ್ನು ಕಟ್ಟಿಸಿಕೊಂಡು ಮಹಾರಾಜನು ಅಲ್ಲಿ ವಾಸಮಾಡಿಕೊಂಡಿರಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ
ದ್ವಿತೀಯ ಖಂಡದಲ್ಲಿ ದುರ್ಗಸಂಪತ್ತಿಯೆಂಬ ಹೆಸರಿನ
ಇಪ್ಪತ್ತಾರನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

---

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಸಪ್ತವಿಂಶತಿತಮೋऽಧ್ಯಾಯಃ

---

**ರಾಮ ಉವಾಚ**

**ರಕ್ಷೋಘ್ನಾನಿ ವಿಷಘ್ನಾನಿ ಯಾನಿ ಕಾರ್ಯಾಣಿ ಭೂಭುಜಾ ।**
**ಅಗದಾನಿ ಸಮಾಚಕ್ಷ್ವ ತಾನಿ ಧರ್ಮಭೃತಾಂ ವರ ॥ ೧ ॥**

**ಪುಷ್ಕರ ಉವಾಚ**

**ಬಿಲ್ವಾಢಕೀಯವಕ್ಷಾರ ಪಾಟಲೀಬಾಹ್ಲಿಕೋಷಣಾಃ ।**
**ಶ್ರೀಪರ್ಣೀ ಸಲ್ಲಕೀಯುಕ್ತಾ ನಿಷ್ಕ್ವಾಥಃ ಪ್ರೋಕ್ಷಣಂ ಪರಂ ॥ ೨ ॥**

---

## ಇಪ್ಪತ್ತೇಳನೆಯ ಅಧ್ಯಾಯವು

೧. ಪರಶುರಾಮನು ಪುನಃ ಪುಷ್ಕರನನ್ನು ಕುರಿತು ಪ್ರಶ್ನೆಮಾಡುತ್ತಾನೆ.— ಅಯ್ಯಾ ಪುಷ್ಕರನೆ, ರಾಕ್ಷಸಬಾಧಾ ಪರಿಹಾರಕವಾದ, ವಿಷಬಾಧಾ ಪರಿಹಾರಕವಾದ ಯಾವ ಯಾವ ಪದಾರ್ಥಗಳನ್ನು (ಔಷಧ ದ್ರವ್ಯ) ದುರ್ಗದಲ್ಲಿ ಕೂಡಿಹಾಕಿಕೊಂಡಿರ ಬೇಕೆಂಬ ವಿಷಯವನ್ನು ದಯಮಾಡಿ ತಿಳಿಸಯ್ಯಾ !

೨. ಅದಕ್ಕೆ ಪುಷ್ಕರನು ಉತ್ತರ ಹೇಳುತ್ತಾನೆ.— ಬಿಲ್ವಪತ್ರೆ, ತೊಗರಿ, ಯವಕ್ಷಾರ, ಪಾದರೀ, ಇಂಗು, ಜೀರಿಗೆ ವಗೈರೆ—ಹಿಪ್ಪಲಿ, ನರುವಲು, ಆನೇಬೇಲದ ಬೇರುಗಳನ್ನು ತಂದು ಇಡಿದು ನೀರಿನಲ್ಲಿ ಹಾಕಿ ಕಷಾಯಮಾಡಿ ವಿಷವೇರಿದ ಜಾಗದಲ್ಲಿ ಹಾಕಿ ತೊಳೆಯುತ್ತಾ ಬಂದರೆ ವಿಷಪರಿಹಾರವಾಗಿ ಆರೋಗ್ಯ ಹೊಂದುವನು.

**ಸವಿಷಂ ಪ್ರೋಕ್ಷಿತಂ ತೇನ ಸದ್ಯೋ ಭವತಿ ನಿರ್ವಿಷಃ ।**
**ಯುವಸ್ಸೈಂಧವಪಾನೀಯ ವಸುಶಯ್ಯಾಸನೋದನಂ ॥ ೩ ॥**

**ಕವಚಾಭರಣಚ್ಛತ್ರ ಬಾಲವ್ಯಜನಮೇವ ಚ ।**
**ಶೈಲೂಪಾಟಲ್ಯತಿವಿಷಾ ಶಿಗ್ರುಗೋಪೀ ಪುನರ್ನವಾಃ ॥ ೪ ॥**

**ಸಮಂಗಾವೃಕ್ಷಮೂಲತ್ವಕ್ ಕಪಿತ್ಥಂ ವೃಕ್ಷಶೋಣಿತಂ ।**
**ಸಹಾದಂತಶಠಂ ತದ್ವತ್ಪ್ರೋಕ್ಷಣಂ ವಿಷನಾಶನಂ ॥ ೫ ॥**

**ಲಾಕ್ಷಾ ಪ್ರಿಯಂಗುಮಂಜಿಷ್ಠಾ ಸಮಂಗಾಃ ಸಹರೇಣುಕಾ ।**
**ಸಯುಷ್ಟ್ಯಾಹ್ವಮಧೂಪೇತಾ ಬಭ್ರುಪಿತ್ತೇನ ಕಲ್ಕಿತಾಃ ॥ ೬ ॥**

---

೩-೫. ಯುವಕ್ಷಾರ, ಸೈಂಧವಲವಣ ಹಾಕಿದ ನೀರು ಬೆರೆಸಿ ಪಾತ್ರೆಯಲ್ಲಿಟ್ಟು ಕೊಂಡು ವಿಷಪೀಡಿತನನ್ನು ಬಟ್ಟೆ ಹಾಕಿ ಮಲಗಿಸಿ ಅನ್ನ, ಕವಚ, ಆಭರಣ, ಛತ್ರಿ, ಚಾಮರ, ಬೀಸಣಿಗೆಗಳಿಂದ ಬೀಸುತ್ತಾ, ಬಾಗೆ (ಅಥವಾ ಚಳ್ಳೀಮರ), ಪಾದರಿ, ಅತಿಬಜೆ, ನುಗ್ಗೆ, ನೆಲಮಾಗಳೀ (ಸೊಗದೇ) ಬೇರು, ಮತ್ತೀಮರದ ಬೇರು ಇವುಗಳ ರಸವನ್ನೂ, ನಿಂಬೆಹಣ್ಣಿನ ರಸವನ್ನೂ ಸೇರಿಸಿ ಕಷಾಯಮಾಡಿ, ಅದನ್ನು ಹಾಕಿ ವಿಷ ವಿದ್ದ (ಗಾಯದ), ಸ್ಥಳವನ್ನು ತೊಳೆಯುತ್ತಾ ಬಂದರೆ ವಿಷವು ಪರಿಹಾರವಾಗಿ ಆರೋಗ್ಯಹೊಂದುವನು.

೬. ಅರಗು, ನೆಳಲು (ಪ್ರೇಂಖಣಮುಚಿಟ್ಟು), ಮಂಜಿಷ್ಠೆ ಇದರ ಭೇದ ದ್ರವ್ಯವಾದ ಸಮಂಗಾ (ಹಳದಿಬಣ್ಣದ ಹಂಬು), ರೇಣುಕೆಬೀಜ, ಅತಿಮಧುರ ಇವು ಗಳನ್ನು ಜೇನುತುಪ್ಪದಲ್ಲಿ ಹಾಕಿ ಕಲಸಿ, ಮುಂಗಸಿ ಹೊಟ್ಟೆಯಲ್ಲಿರುವ ಪಿತ್ತಕೋಶ ವನ್ನು ತೆಗೆದು ಅದರಿಂದ ಮೇಲ್ಕಂಡ ವಸ್ತುಗಳನ್ನು ಅರೆದು ಕಲ್ಕ್ಯಮಾಡಿ, ಹಸುವಿನ ಕೊಂಬಿನ ಒಳಗಿನ ಟೊಳ್ಳುಗಳಲ್ಲಿ ತುಂಬಿ ಬಾಯಿಕಟ್ಟಿ ಭೂಮಿಯನ್ನು ತೋಡಿ ಅದರಲ್ಲಿ ಏಳು ರಾತ್ರಿಯವರೆಗೆ ಹೂತಿಡಬೇಕು. ಆ ಬಳಿಕ ಅದನ್ನು ಈಚೆಗೆ ತೆಗೆದು ಸಣ್ಣ ಸಣ್ಣ ಮಣಿಗಳಂತೆ ಮಾತ್ರೆಗಳನ್ನು ಮಾಡಿ ಆ ಮಣಿಗಳನ್ನು ಚಿನ್ನದ ತಾಯತಿ ಯಲ್ಲಿ ಹಾಕಿ ಕೈಗೆ ಕಟ್ಟಿದರೆ ಇದು ವಿಷಪರಿಹಾರ ಮಾಡುವುದು. ಇದನ್ನು ವಿಷ ವೇರಿದ ಮನುಷ್ಯನು ವಿಷವೇರಿದ ಜಾಗಕ್ಕೆ ತಗಲಿಸಿದರೂ ಸಹ ವಿಷವು ಪರಿಹಾರ ವಾಗುವುದು. (ನಿರ್ವಿಷನಾಗುವನು).

ನಿಖನೇದ್ಗೋವಿಷಾಣಸ್ಥಾ ಸಪ್ತರಾತ್ರಂ ಮಹೀತಲೇ ।
ತತಃ ಕೃತ್ವಾ ಮಣಿಂ ಹೇಮ್ನಾ ಬದ್ಧಂ ಹಸ್ತೇನ ಧಾರಯೇತ್ ॥ ೭ ॥

ಸಂಸ್ಪೃಷ್ಟಸ್ಸವಿಷಸ್ತೇನ ಸದ್ಯೋ ಭವತಿ ನಿರ್ವಿಷಃ ।
ಮನೋಹ್ವಾಲಶಮೀಪುಷ್ಪ ತ್ವಜ್ಞಿಶಾಶ್ವೇತ ಸರ್ಷಪಾಃ ॥ ೮ ॥

ಕಪಿತ್ಥಕುಷ್ಠಮಂಜಿಷ್ಠಾಃ ಪಿತ್ತೇನ ಶ್ಲಕ್ಷ್ಣಕಲ್ಕಿತಾಃ ।
ಧನೋಗವಃ ಕಪಿಲ್ಲಾಯಾಃ ಸೌಮ್ಯಾಖ್ಯೋಯಂ ಪುರೋಗದಃ ॥ ೯ ॥

ವಿಷಜಿತ್ಪರಮಃ ಪ್ರೋಕ್ತೋ ಮಣಿರತ್ರ ಚ ಪೂರ್ವವತ್ ।
ಮೂಷಕಾಜಿರಕಾ ಚಾಪಿ ಹಸ್ತೇ ಬದ್ಧಾ ವಿಷಾಪಹಾ ॥ ೧೦ ॥

ಹರೇಣುಮಾಸೀ ಮಂಜಿಷ್ಠಾ ರಜನೀಮಧುಕಂ ಮಧು ।
ಅಕ್ಷಕ್ತ್ವತ್ಸುರಸಂ ಚೈವಶ್ವಪಿತ್ಥಂ ಪೂರ್ವವರ್ಮಣಿ ॥ ೧೧ ॥

---

೭-೧೦. ಮಣಿಶಿಲೆ, ಅರಿದಳ, ಬನ್ನೀಹೂವು, ದಾಲ್ಚಿನ್ನಿ, ಅರಿಶಿನ, ಬಿಳೀ ಸಾಸುವೆ, ಬೇಲ, ಚಂಗಲಕೋಷ್ಠ, ಮಂಜಿಷ್ಠೆಗಳನ್ನು ಪಿತ್ಥರಸದಿಂದ ಕೂಡಿಸಿ ಸಣ್ಣಗೆ (ನುಣ್ಣಗೆ) ಅರೆದು ಎಣ್ಣೆ, ಮೆಂಟಲಿಮರದ ಬುಡದ ಚೂರ್ಣ, ಧನೋಗವೃಕ್ಷದ ಚೂರ್ಣಗಳನ್ನು ಬೆರಸಿ ಇವೆರಡನ್ನೂ ಕಲಸಿದರೆ ಸೌಮ್ಯೌಷಧವೆನಿಸುವುದು. ಇದು ಸಹ ವಿಷಪರಿಹಾರಮಾಡಲು ಅತ್ಯುತ್ತಮವಾದ ಔಷಧವೆಂದು ಪ್ರಸಿದ್ಧವಾಗಿರುವುದ ರಿಂದ ಇದನ್ನೂ ಸಹ ಹಿಂದೆ ಹೇಳಿದ ಮಣಿ (ಮಾತ್ರೆ) ಯಂತೆ ಸಣ್ಣಗುಳಿಗೆ ಮಾಡಿ ಚಿನ್ನದ ತಾತಿಯಲ್ಲಿಟ್ಟು ಧರಿಸಿದರೆ ವಿಷಹರವಾಗುವುದು. ಇಲೀ ಸುಂಡವನ್ನು ಕೊಂದು ಜೀರಿಗೆಯಲ್ಲಿ ಬೆರಸಿ ಅರೆದು ಕಲ್ಕಮಾಡಿ ವಿಷವೇರಿದ ಹತ್ತಿರದಲ್ಲಿ ಆ ಜಾಗಕ್ಕೆ ಹಚ್ಚಿದರೆ ಅಥವಾ ಕೈಗೆ ಕಟ್ಟಿದರೆ ವಿಷವಿಳಿಯುವುದು.

೧೧-೧೨. ರೇಣುಕೇಬೀಜ, ಜಟಾಮಾಂಸೀ, ಮಾಂಜಿಷ್ಠೆ, ಅರಿಶಿನ, ಅತಿ ಮಧುರ, ಜೇನುತುಪ್ಪ, ತಾರೇಗಿಡದ ತೊಗಟೆ, ತುಳಸಿಸೊಪ್ಪು, ನಾಯಿಯ ಪಿತ್ತ ಕೋಶ ಇವುಗಳನ್ನು ಬೆರಸಿ ವಿಷಬಾಧಾಸ್ಥಳದಲ್ಲಿ ಹಚ್ಚಿ ಅದರಿಂದುಂಟಾದ

ವಾದಿತ್ರಾಣಿ ಪತಾಕಾಶ್ಚ ವಿಷ್ಟೈರೇತೈಃ ಪ್ರಲೇಪಿತಾಃ ।
ಶ್ರುತ್ವಾ ದೃಷ್ಟ್ವಾ ಸಮಾಘ್ರಾಯ ಸದ್ಯೋ ಭವತಿ ನಿರ್ವಿಷಃ ॥ ೧೨ ॥

ಷಡೂಷಂ ಪಂಚಲವಣಂ ಮಂಜಿಷ್ಠಾ ರಜನೀದ್ವಯಂ ।
ಸೂಕ್ಷ್ಮೈಲಾ ತ್ರಿವೃತಾಪತ್ರಂ ವಿರುಂಗಾನೀಂದ್ರವಾರುಣೀ ॥ ೧೩ ॥

ಮಧುಕಂ ಚೇತಿ ಸಕ್ಷೌದ್ರಂ ಗೋವಿಷಾಣೈರ್ನಿಧಾಪಯೇತ್ ।
ತಸ್ಮಾದುಷ್ಣಾಂಬುನಾ ಮಾತ್ರಾಂ ಪ್ರಾಗುಕ್ತಾಂ ಯೋಜಯೇತ್ತಥಾ ॥ ೧೪ ॥

ವಿಷಂ ಭುಕ್ತಂ ಜರಾಂ ಯಾತಿ ನಿರ್ವಿಷೋಪಿ ನ ದೋಷಕೃತ್ ।
ಸಂತುಸರ್ಜರಸೋಶೀರ ಸರ್ಷಪಾಪತ್ರವಾಲುಕೈಃ ॥ ೧೫ ॥

---

ಬಾಧೆಯನ್ನು ಪರಿಹರಿಸಲೋಸುಗ ಇವುಗಳ ಕಲ್ಕ್ಯವನ್ನು ವಾದ್ಯಗಳಿಗೂ, ಧ್ವಜಗಳಿಗೂ ಲೇಪನಮಾಡಿ ಅದನ್ನು ಮೂಸಿ ನೋಡುತ್ತಾ, ಬಂದರೆ ವಿಷವಿಳಿದು ಹೋಗುವುದು.

೧೩-೧೫. ಆರುವಿಧಕಾರ (ಶುಂಠಿ, ಮೆಣಸು, ಮೋಡಿ, ಗಜಹಿಪ್ಪಲಿ, ಚವ್ಯ, (ಮೆಣಸಿನಗಿಡದ ಬೇರು) ಈ ಆರಕ್ಕೂ ಷಡೂಷವೆಂದು ಹೆಸರು. ಮೂಲದಲ್ಲಿ ತತ್ರೂಷಣಂ ಎಂದಿದೆ. ಅದನ್ನು ಷಡೂಷ ಎಂದು ತಿದ್ದಬೇಕು. ಹಿಂದೆ ಬರೆದ-ಮೇರೆ ಪಂಚಲವಣಗಳು ಮಂಜಿಷ್ಠೆ, ಅರಿಶಿನ, ಮರದರಿಶಿನ, ಸಣ್ಣ ಏಲಕ್ಕಿ, ತಿಗಡೆ ಚಕ್ಕೆ, ಲವಂಗಪತ್ರೆ, ಲವಂಗ, ಹಾವುಮೆಕ್ಕೆ, ಅತಿಮಧುರಗಳ ಚೂರ್ಣವನ್ನು ಜೇನುತುಪ್ಪದೊಡನೆ ಬೆರಸಿ ಅರೆದು ಹಸುವಿನ ಕೊಂಬಿನಲ್ಲಿ ತುಂಬಿ ಏಳುದಿನ ನೆಲದಲ್ಲಿ ಹೂತಿಟ್ಟು, ಆಮೇಲೆ ಈಚೆಗೆ ತೆಗೆದು ಮಾತ್ರೆಗಳನ್ನು ಮಾಡಿ ಆ ಮಾತ್ರೆಗಳನ್ನು ಬಿಸಿನೀರಿನಲ್ಲಿ ಸೇವನೆಮಾಡಿದರೆ ವಿಷವನ್ನು ತಿಂದವನೂ ಸಹ (ಮದ್ದು ಹೊಟ್ಟೆಯಲ್ಲಿದ್ದವನು ಆ ವಿಷವನ್ನು ಅರಗಿಸಿಕೊಳ್ಳಬಲ್ಲನು.) ಹೊಟ್ಟೆಗೆ ಯಾರಾದರೂ ಮದ್ದು ಹಾಕಿದ್ದರೆ ಅದೂ ನಾಶವಾಗುವುದು. ಆರೋಗ್ಯವಾಗಿದ್ದವನೂ ಕೂಡ ಇದನ್ನು ಸೇವಿಸಿದರೆ ಏನೂ ಬಾಧಕವಾಗುವುದಿಲ್ಲವೆಂದು ತಿಳಿಯಬೇಕು. ಹೊಟ್ಟೆಯಲ್ಲಿ ಏನಾದರೂ ಖಾಯಿಲೆ ಇದ್ದರೆ ಅದು ಪರಿಹಾರವಾಗುವುದು.

**ಸರ್ವೇಲ್ಲಾರುಷ್ಕರಪುರ್ಶೈಃ ಕುಸುಮ್ಯೈರರ್ಜುನಸ್ಯ ಚ ।
ಧೂಪೋ ವಾಸೋ ಗೃಹೇ ಹಂತಿ ವಿಷಂ ಸ್ಥಾವರಜಂಗಮಂ　　॥ ೧೬ ॥**

**ನ ತತ್ರ ಕೀಟಾನ ವಿಷಾ ದರ್ದುರಾ ನ ಸರೀಸೃಪಾಃ ।
ನ ಕೃತ್ಯಾಃ ಕರ್ಮ ನಾನ್ಯಃಚ್ಯ ಧೂಪೋಯಂ ಯತ್ರ ದಹ್ಯತೇ　　॥ ೧೭ ॥**

**ಕಲ್ಕಿತ್ಯೈಶ್ಚಂದನಕ್ಷೀರ ಪಲಾಶದ್ರುಮವಲ್ಕಲೈಃ ।
ಪೂರ್ವೈಲವಾಲುಸುರಸಾ ನಾಕುಲೀ ತಂಡುಲೀಲಕೈಃ　　॥ ೧೮ ॥**

**ಕ್ವಾಥಃ ಸರ್ವೋದಕಾರ್ಯೇಷು ಕಾಕಮಾಚೀಜಲೈರ್ವೃತಃ ।
ರೋಚನಾಪತ್ರನೈಪಾಲೀ ಕುಂಕುಮ್ಯೈಸ್ತಿಲಕಂ ವಹನ್　　॥ ೧೯ ॥**

---

೧೬. ರಾಳ, ಸರ್ಜರಸ, ಲಾಮಂಚ, ಸಾಸುವೆ, ಲವಂಗಪತ್ರೆ, ಮುಡಿವಾಳ, ವಾಯುವಿಳಂಗ, ಗೇರುಬೀಜ, ಗುಗ್ಗುಳ, ಕೆಂಪಿನಮತ್ತಿ (ರಕ್ತಾರ್ಜುನವೃಕ್ಷ) ಹೂವು, ಇವುಗಳ ಹುಡಿಯ ಧೂಪವನ್ನು ಮನೆಯಲ್ಲಿ ಹಾಕುತ್ತಾ ಬಂದರೆ ಸ್ಥಾವರಜಂಗಮಗಳಿಂದುಂಟಾದ ವಿಷದ್ರವ್ಯವು ನಾಶವಾಗುವುದು. (ಸ್ಥಾವರ ವಿಷ-ಕೆಲವು ಮೂಲಿಕೆಗಳನ್ನು ಮುಟ್ಟಿದರೆ ಊದಿಕೊಳ್ಳುವುದುಂಟು. ಅಂಥವುಗಳಿಗೆ ಸ್ಥಾವಿರ ವಿಷಗಳೆಂದೂ ಸರ್ಪ ವೃಶ್ಚಿಕಾದಿಗಳ ದಷ್ಟದಿಂದಾದ ವಿಷಕ್ಕೆ ಜಂಗಮವಿಷವೆಂದೂ ಹೆಸರು.)

೧೭. ಈಗ ಹೇಳಿದ ಔಷಧಗಳು ಎಲ್ಲೆಲ್ಲಿರುತ್ತವೆಯೋ ಅಲ್ಲಿ ಹುಳು ಹುಬಟೆಗಳಾಗಲೀ, ಚೇಳುಗಳು, ಹಾವುಗಳು, ಕಪ್ಪೆಗಳೇ ಮುಂತಾದ ವಿಷಜಂತುಗಳೂ ಇರುವುದಿಲ್ಲ. ಈ ಧೂಪದ ಹೊಗೆಯನ್ನು ಎಲ್ಲಿ ಹಾಕಿದರೂ ಅಲ್ಲಿ ಮಾಟಕುಶಲಗಳ ಆಟವೊಂದೂ ಸಾಗದೆ ಅವು ಹೇಳ ಹೆಸರಿಲ್ಲದೆ ಓಡಿಹೋಗುತ್ತವೆ.

೧೮. ಶ್ರೀಗಂಧ, ಪಲಾಶಕ್ಷೀರ ವೃಕ್ಷಗಳು (ಆಲ, ಅತ್ತಿ, ಅರಳಿ, ಗೋಣಿ, ಬಸರಿ) ಚಕ್ಕೆಗಳು ಮೊದಲು ಹೇಳಿದ ಸುರಸುರಕೆ ಹಂಬು, ತುಲಸೀದಳ, ಸರ್ಪಾಕ್ಷೀ (ನಾಕುಲೀ) ಕಿರುಕುಸಾಲೆಬೇರು.

೧೯. ಮೇಲೆ ಹೇಳಿದ ಪದಾರ್ಥಗಳನ್ನು ಸಮಸಮವಾಗಿ ತಂದು ಒಣಗಿಸಿ ಹುಡಿಮಾಡಿ ಒಂದು ಮಡಕೆಗೆ ನೀರು ಹಾಕಿ ಅದರಲ್ಲಿ ಸುರಿದು ಕುದಿಸಿ ಇಳಿಸಿಕೊಂಡು ಬೆಲಗಣಿಕೆ ಸಪ್ಪಿನ (ಕೆಂಪಿನ ಗಣಿಕೆ) ರಸವನ್ನು ಮಿಶ್ರಮಾಡಿ ಇದನ್ನು ಗೋರೋಚನ, ತಮಾಲಪತ್ರ, ಮಣಿಶಿಲೆ, ಕುಂಕುಮಕೇಸರಿಗಳನ್ನು ಕಲಸಿ ಕಲ್ಪತ್ತಿ

**ವಿಷಂ ನ ಬಾಧ್ಯತೇ ಸ್ಯಾಚ್ಚ ನರನಾರೀ ನೃಪಪ್ರಿಯಃ ।**
**ಚೂರ್ಣೈರ್ಹರಿದ್ರಾಮಂಜಿಷ್ಠಾ ಕಿಣಿಹೀಕಣನಿಂಬಕೈಃ ॥ ೨೦ ॥**

**ಚಿಘ್ರನ್ನಿರ್ವಿಷತಾಮೇತಿ ಗಾತ್ರಂ ಸರ್ವವಿಷಾರ್ದಿತಂ ।**
**ಶಿರೀಷಸ್ಯ ಫಲಂ ಪತ್ರಂ ಪುಷ್ಪಂ ತ್ವಙ್ಮೂಲಮೇವ ಚ ॥ ೨೧ ॥**

**ಗೋಮೂತ್ರಪಿಷ್ಟೋ ಹ್ಯಗದಃ ಸರ್ವಕರ್ಮಕರಃ ಸ್ಮೃತಃ ।**
**ಏತಾವೀರಮಹೌಷಧ್ಯಃ ಶೃಣು ಚಾತಃ ಪರಂ ದ್ವಿಜ ॥ ೨೨ ॥**

**ವಂಧ್ಯಾ ಕರ್ಕೋಟಕೀ ರಾಮ ವಿಷ್ಣುಕ್ರಾನ್ತಾ ತಥೋತ್ಕಟಾ ।**
**ಶತಮೂಲಾ ಶತಾನಂದಾ ಬಲಾಸ್ಫೋಟಾ ಪಟೋಲಿಕಾ ॥ ೨೩ ॥**

---

ನಲ್ಲಿ ಅರೆದು ಶ್ರೀಚೂರ್ಣದಂತೆ ಮಾಡಿ ತಿಲಕವನ್ನಿಟ್ಟುಕೊಂಡವನಿಗೆ ವಿಷದ ಬಾಧೆ ಇರುವುದಿಲ್ಲ. ಅಷ್ಟೇ ಅಲ್ಲ. ಈ ತಿಲಕವನ್ನು ಹಣೆಗೆ ಇಟ್ಟುಕೊಂಡು ಹೋದರೆ ನರನಾರಿಯರೂ, ರಾಜರುಗಳೂ ಪ್ರೀತಿಸುತ್ತಾರೆಂದು ತಿಳಿಯಬೇಕು.

೨೦. ಅರಿಶಿನ, ಮಂಜಿಷ್ಠೆ, ಹಿಪ್ಪಲಿ, ಬೇವಿನಚಕ್ಕೆ, ಇವುಗಳನ್ನು ಬೆರಸಿ ಪುಡಿಮಾಡಿ ಚೂರ್ಣಮಾಡಿಕೊಂಡು ಆ ಚೂರ್ಣವನ್ನು ಮೂಸುತ್ತಾ ಬಂದರೆ ಮೈಯೆಲ್ಲಾ ಪೂರ್ತಿಯಾಗಿ ವಿಷವೇರಿದ್ದಾಗ್ಯೂ, ಈ ಆಘ್ರಾಣದಿಂದ ಆ ವಿಷವೆಲ್ಲವೂ ಸರ್ರನೆ ಇಳಿದುಹೋಗುತ್ತದೆ,

೨೧. ಶಿರೀಷ ( ಬಾಗೇಹಣ್ಣು ) ಫಲ, ಪತ್ರೆ (ಎಲೆ), ಹೂವು, ಚಕ್ಕೆ. ಗೋಂದು (ಇದಕ್ಕೆ ಶಿರೀಷಪಂಚಾಂಗವೆಂದು ಹೆಸರು) ಗಳನ್ನು ತಂದು ಒಣಗಿಸಿ ಪುಡಿ ಮಾಡಿ ಹಸುವಿನ ಗಂಜಲದಲ್ಲಿ ಕಲಸಿ ಅರೆದು ಲೇಪನಮಾಡಿದರೂ, ತಿಲಕಮಾಡಿ ಕೊಂಡು ಹಚ್ಚಿದರೂ, ಹೊಗೆ ಸೇವನೆ ಮಾಡಿದಾಗ್ಯೂ ರೋಗಪ್ರಶಮನವಾಗುವುದು. (ಇದು ಚರಕಸಂಹಿತೆಯ ವಿಷಚಿಕಿತ್ಸೆಯ ಪ್ರಕರಣದಲ್ಲಿ ಪಂಚಶಿರೀಷಾಗದವೆಂದು ಉಕ್ತವಾಗಿದೆ.)

೨೨. ಎಲೈ ಪರಶುರಾಮನೇ, ಇನ್ನು ಮುಂದೆ ನಾನು ನಾನಾವಿಧ ರೋಗ ಪರಿಹಾರಕಗಳಾದ ಮಹೌಷಧಿಗಳ ಹೆಸರನ್ನು ನಿನಗೆ ತಿಳಿಸುತ್ತೇನೆ. ಕೇಳು.

೨೩-೩೮. ವಂಧ್ಯಾಕರ್ಕೋಟಕೀ ಎಂಬ ಶ್ಲೋಕದಿಂದ ಆರಂಭ:—ಗೋಟು ಹಾಗಲ, ವಿಷ್ಣುಕ್ರಾಂತೀ, ಉತ್ಕಟಾ, ಶತಮಾಲಾ, ಶತಾನಂದ, ಕಳ್ಳಂಗಡ್ಲೆ, ಗಿರಿಕರ್ಣಿಕೆ

**ಸೋಮಾ ಪಿಂಡಾ ನಿಶಾ ಚೈವ ತಥಾ ದಗ್ಧರುಹಾ ಜಯಾ ।**
**ಸ್ಥಲೀ ಕಮಲಿನೀ ಯಾ ಚ ಪಿಂಗಲೀ ಶೃಂಗಮೂಲಿಕಾ　　॥ ೨೪ ॥**

**ಚಂಡಾಲೀ ಹಸ್ತಿಚಂಡಾಲೀ ಗೋಚಂಡಾಲೀ ಕಬಂಧಿಕಾ ।**
**ರಕ್ತಾ ಚೈವ ಮಹಾರಕ್ತಾ ತಥಾ ಬರ್ಹಿಶಿಖಾ ಚ ಯಾ　　॥ ೨೫ ॥**

**ಕೋಶಾತಕೀ ನಕ್ತಮಾಲಂ ಪ್ರಿಯಾಲಂ ಚ ಸ್ವಲಕ್ಷಣಂ ।**
**ಚಾರಣಾ ಚ ಸುಗಂಧಾ ಚ ತಥಾ ವೈ ಗಂಧನಾಕುಲೀ　　॥ ೨೬ ॥**

**ಈಶ್ವರೀ ಚ ಸಲಿಂಗೀ ಚ ಸೋಮಲೀ ವಂಶನಾಲಿಕಾ ।**
**ಜತುಕಾರೀ ತಥಾ ಶ್ವೇತಾ ಶ್ವೇತಾ ಚ ಮಧುಯಷ್ಟಿಕಾ　　॥ ೨೭ ॥**

**ವಜ್ರಟಃ ಪಾರಿಭದ್ರಶ್ಚ ತಥಾ ವೈ ಸಿಂಧುಪಾರಿಕಾ ।**
**ಜೀವಾನಂದೀ ವಸುಮತೀ ನ ತಂ ನಾಗಕಟಂ ಕಟಂ　　॥ ೨೮ ॥**

**ತಾಲನಾ ಜಾತಪಾತಾಲಂ ತಥಾ ಚ ವಟಪತ್ರಿಕಾ ।**
**ಕರಕ್ಷೀರಾ ಮಹಾನೀಲೀ ಕಲ್ಹಾರಂ ಹಂಸಪಾದಿಕಾ　　॥ ೨೯ ॥**

---

ಬೇರು, ಕಹಿಪಡವಲ, ಭಾವಂತೀ ಬೀಜ (ಚಂದ್ರಕಾಂತಿಯೆಂದೂ ಹೇಳುವರು.) ಅರಿಶಿನ, ದಗ್ಧರುಹಾ, ತಗ್ಗೀಬೀಜ, ನೆಲದಾವರೆ, ಪಿಂಗಲೀ, ಕರ್ಕಾಟಕಶೃಂಗಿ, ಚಂಡಾಲೀ? ಹಸ್ತಿಚಂಡಾಲೀ? ಗೋಚಂಡಾಲೀ, ಕಬಂಧಿಕಾ? ಮಂಜಿಷ್ಠ, ಜ್ಯೋತಿಷ್ಮತೀ, ಮಯೂರೀ ಶಿಖಿ, ಕಹಿಹೀರೆ, ಹೊಂಗೇಬೇರು, ಚಾರುಸೊಪ್ಪು, ಸ್ವಲಕ್ಷಣಾ, ಚಾರಣಾ, ನೆಲಮಾಗಳೀ ಬೇರು, ಲಕ್ಕೀಸಪ್ಪು, ಜೀವಾ, ಹಾಲೆ, ನಂದೀ, ನಂದ್ಯಾವರ್ತ, ಆವರಿಕೆ, ನತ, ಗ್ರಂಥಿಕ, ತಗರ, ಮರದರಿಶಿನ, ಮಾಚೀಹುಲ್ಲು, ತಾಲನಾ, ಪಾಶೆ, ಕೊನ್ನಾರಿಗೆಡ್ಡೆ, ಆಲದೆಲೆ, ಕರಕ್ಷೀರಾ, ವಜ್ರನೀಲೀಗಿಡ, ಕಹ್ಲಾರದ ಹೂವು, ಹಂಸಪಾದೀಗಿಡ, ಒಂದೆಲಗ, ಹಂದೀಗೆಡ್ಡೆ (ಕರೀದು, ಬಿಳೀದು ಎರಡು ವಿಧ ಉಂಟು. ಮುಳ್ಳುದಗ್ಗಲೆ (ಕೆಂಪು, ಬಿಳಪು ಎರಡು ವಿಧ. ಕಿರುಕುಸಾಲೆ ಬೇರು, ಮುಳ್ಳುಕೀರೆ), ಸರ್ಪಾಕ್ಷೀ, ಉಪ್ಪು, ಒಂದೆಲಗನ ಸಪ್ಪು, ವಿಶ್ವರೂಪಾ? ಸಹದೇವಿಯ ಗಿಡ, ಚಂಗಲಕೋಷ್ಠ, ಶುದ್ಧಿಕರೀ? ಶಲ್ಯಾಪಹಾ? ತಮಾಲಪತ್ರೆ, ಕಟುಕರೋಹಿಣಿ, ರಕ್ತಲ, (ಸಂಬರೇಡಿ) ಶುಂಠಿ, ನೆಲ್ಲೀಚಟ್ಟು, ಬಂದಣಿಕೆ (ಗಿಡದೊಳಗೆ ಗಿಡ ಹುಟ್ಟು ವುದು.) ಅರಗು, ಚಿತ್ರಮಾಲಾ, ಪಡವಲದ ಕುಡಿ, ಕಾಕೋಲೀ, ಕ್ಷೀರಕಾಕೋಲೀ,

ಮಂಡೂಕಪರ್ಣೀ ವಾರಾಹೀ ದ್ವೇ ತಥಾ ತಂಡುಲೀಯಕೇ ।
ಸರ್ಪಾಕ್ಷೀ ಲವಣಾ ಬ್ರಾಹ್ಮೀ ವಿಶ್ವರೂಪಾ ಸುಖಂಕರೀ ॥ ೩೦ ॥

ರುಜಾಪಹಾ ಶುದ್ಧಿಕರೀ ತಥಾ ಶಲ್ಯಾಪಹಾ ಚ ಯಾ ।
ಪತ್ರಿಕಾ ರೋಹಿಣೀ ಚೈವ ರಕ್ತಲಾ ಚ ಮಹೌಷಧೀ ॥ ೩೧ ॥

ತಥ್ಯಾಮಲಕವಂದಾರು ಯಾವಚಿತ್ರಾ ಪಟೋಲಿಕಾ ।
ಕಾಕೋಲೀ ಕ್ಷೀರಕಾಕೋಲೀ ಪೀಲುಪರ್ಣೀ ಮನೋವತೀ ॥ ೩೨ ॥

ಕೇಶಿನೀ ವೃಶ್ಚಿಕಾ ಕಾಲೀ ಮಹಾನಾಗಾ ಶತಾವರೀ ।
ತಥಾ ಗರುಡವೇಗಾ ಚ ಸ್ಥಲೇ ಕುಮುದಿನೀ ಚ ಯಾ ॥ ೩೩ ॥

ಸ್ಥಲೇ ಚೋತ್ಪಲಿನೀ ಯಾ ಚ ಮಹಾಭೂಮಿಲತಾ ಚ ಯಾ ।
ಉನ್ಮಾದಿನೀ ಸೋಮರಾಜಿ ಸರ್ವರತ್ನಾನಿ ಭಾರ್ಗವ ॥ ೩೪ ॥

ವಿಶೇಷಾನ್ಮರಕತಂ ತತ್ರ ಕೀಟಪಕ್ಷಂ ವಿಶೇಷತಃ ।
ಜೀವಜಾತಾಶ್ಚ ಮಣಯಃ ಸರ್ವೇ ಧಾರ್ಯಾ ವಿಶೇಷತಃ ॥ ೩೫ ॥

ರಕ್ಷೋಘ್ನಾಶ್ಚ ಯಶಸ್ಯಾಶ್ಚ ಕೃತ್ಯಾ ವೇತಾಲನಾಶಿನಃ ।
ವಿಶೇಷಾನ್ತರನಾಗಾಶ್ಚ ಗೋಖರೋಷ್ಟ್ರಸಮುದ್ಭವಾಃ ॥ ೩೬ ॥

---

ನೀಲಗೋಣಿ, ಒಂದೆಲೆ ಹೊನ್ನೆ, ಮನೋವರೆ? ಕಳ್ಳನ ಚೌರಿ (ಕೇಶನೀ), ವೃಶ್ಚಿಕಾ ಚೇಳುಕೊಂಡೀ ಗಿಡ, ಕಾಳೀ, ನಾಗಸಂಪಿಗೆ ಗಿಡ, ಆಷಾಡೀ ಬೇರು, ಪಾತಾಳ ಗರುಡನ ಗೆಡ್ಡೆ (ಗರುಡವೇಗಾ) ನೆಲದಲ್ಲಿ ಹುಟ್ಟುವ ನೈದಿಲೆಗಿಡ ಮತ್ತು ಕನ್ನೈದಿಲೆಗಿಡ ಸಹಾ, ಮಹಾಭೂಮಿ? ಲತೆ? ಉಮ್ಮತ್ತದಗಿಡ, ಧಾವಂತೀಬೀಜ, ಸಕಲ ವಿಧವಾದ ರತ್ನಗಳು ಅದರಲ್ಲೂ ವಿಶೇಷವಾಗಿ ಮರಕತ ವಜ್ರವನ್ನಂತೂ ಸಂಗ್ರಹಿಸಲೇ ಬೇಕು ಚೇಳಿನ ಔಷಧವನ್ನೂ, ಜೀವರತ್ನಗಳನ್ನೂ ಸಹ ತಂದಿಡಬೇಕು. ಈ ಪದಾರ್ಥಗಳಿಗೆ ರಾಕ್ಷಸರನ್ನು ಓಡಿಸುವ ಮತ್ತು ಯಶಸ್ಕರವಾದ ಶಕ್ತಿಯೂ, ಭೂತಭೇತಾಳಗಳನ್ನೋಡಿಸುವ ಮತ್ತು ವಿಶೇಷವಾಗಿ ಹಾವು ಚೇಳುಗಳ ವಿಷವನ್ನು ನಾಶಮಾಡುವ ಶಕ್ತಿಯೂ, ಆನೆ, ಎತ್ತು, ಒಂಟೆ, ಕತ್ತೆಗಳ ಧೂಳಿನಿಂದಾಗುವ ಕಾಲುಧೂಳಿನ ದೋಷವನ್ನು ಪರಿಹರಿಸುವ ಶಕ್ತಿಯೂ, ನಾಗರಹಾವು, ತಿತ್ತಿರಿಪಕ್ಷಿ, ನರಿ, ಕಪ್ಪೆ, ಸಿಂಹ, ಹುಲಿ,

ಸರ್ಪತಿತ್ತಿರಗೋಮಾಯು ಬಭ್ರುಮಂಡೂಕಜಾಶ್ಚ ಯೇ ।
ಸಿಂಹವ್ಯಾಘ್ರರ್ಕ್ಷಮಾರ್ಜಾರ ದ್ವೀಪವಾನರಸಂಭವಾಃ ॥ ೩೭ ॥

ಕಪಿಂಜಲಾಜಗೋಧಾವಿ ಮಹಿಷ್ಯೈಣಭವಾಶ್ಚಯೇ ॥ ೩೮ ॥
ಇತ್ಯೇವಮೇತ್ಯೈ ಸ್ಸಕಲೈರುಪೇತಂ
ದ್ರವ್ಯೈಃ ಪುರಂ ರಕ್ಷಿತಸಂಚಯಂ ಚ ।
ರಾಜಾ ವಸೇತ್ತತ್ರ ಗೃಹಂ ಚ ಶುಭ್ರಂ
ಗುಣಾನ್ವಿತಂ ಲಕ್ಷಣ ಸಂಪ್ರಯುಕ್ತಂ ॥ ೩೯ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ಅಗದಂಕರಾಧ್ಯಾಯೋನಾಮ
ಸಪ್ತವಿಂಶತಿತಮೋಽಧ್ಯಾಯಃ

---

ಕರಡಿ, ಬೆಕ್ಕು ಇವುಗಳ ಕಡಿತದಿಂದ ಪ್ರಾಪ್ತವಾಗುವ ದೋಷಗಳೂ, ಕಪಿಂಜಲ, ಅಜ, ಉಡ, ಕೋಣ, ಜಿಂಕೆ ಮುಂತಾದ ಪ್ರಾಣಿಗಳ ದಂಶನದಿಂದುಂಟಾಗುವ ವಿಷಬಾಧೆಗಳೂ ಸಹ ನಾಶವಾಗುತ್ತವೆ.

೩೯. ಇದುವರಿಗೆ ನಾನು ಏನೇನನ್ನು ವಿವರಿಸಿದೆನೋ ಆ ಪದಾರ್ಥಗಳೆಲ್ಲವನ್ನೂ ಸಂಗ್ರಹಿಸಿ ನಗರ ದುರ್ಗ (ಕಂದಕ)ಗಳಲ್ಲಿ ಸಂರಕ್ಷಿಸಿಡಬೇಕು. (ಬೆಳಸಿರಬೇಕೆಂದೂ ಅರ್ಥವಾಗುವುದು). ಇಂತಹ ಪದಾರ್ಥಗಳಿಂದೊಡಗೂಡಿದ ನಗರದಲ್ಲಿ ಲಕ್ಷಣವಾಗಿಯೂ ಬಹುಗುಣ (ದ್ರವ್ಯ)ಭರಿತವಾಗಿಯೂ ಶುಭ್ರವಾಗಿಯೂ ಇರುವ ಅರಮನೆಯಲ್ಲಿ ರಾಜನು ವಾಸಮಾಡಿಕೊಂಡಿರಬೇಕೆಂದು ಪುಷ್ಕರನು ಪರಶುರಾಮನಿಗೆ ಉಪದೇಶಿಸಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ
ದ್ವಿತೀಯಖಂಡದಲ್ಲಿ ವೈದ್ಯಾಧ್ಯಾಯವೆಂಬ ಹೆಸರಿನ ಇಪ್ಪತ್ತೇಳನೆಯ
ಅಧ್ಯಾಯ ಮುಗಿಯಿತು.

॥ ಶ್ರೀ ॥

---

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಅಷ್ಟಾವಿಂಶತಿತಮೋಽಧ್ಯಾಯಃ

---

### ರಾಮ ಉವಾಚ

ರಾಜರಕ್ಷಾರಹಸ್ಯಾನಿ ಯಾನಿ ದುರ್ಗೇ ನಿಧಾಪಯೇತ್ ।
ಕಾರಯೇದ್ವಾ ಮಹೀಭರ್ತಾ ಕಥಯಸ್ವಾಶು ತಾನಿ ಮೇ ॥ ೧ ॥

### ಪುಷ್ಕರ ಉವಾಚ

ಶಿರೀಷೋದುಂಬರಶಮೀ ಬೀಜಪೂರಂ ಘೃತಪ್ಲುತಂ ।
ಕ್ಷುದ್ಯೋಗಃ ಕಥಿತೋ ರಾಮ ಮಾಸಾರ್ಧಸ್ಯ ಪುರಾತನೈಃ ॥ ೨ ॥

---

### ಇಪ್ಪತ್ತೆಂಟನೆಯ ಅಧ್ಯಾಯವು.

೧. ಪರಶುರಾಮನು ಪ್ರಶ್ನೆಮಾಡುತ್ತಾನೆ—ಎಲೈ ಪುಷ್ಕರನೇ! ರಾಜನನ್ನು ಸಂರಕ್ಷಣೆ ಮಾಡುವುದಕ್ಕಾಗಿ ಯಾವ ಯಾವ ಔಷಧದ್ರವ್ಯಗಳನ್ನು ರಹಸ್ಯವಾಗಿಡಬೇಕೆಂಬುದನ್ನೂ ಇದಕ್ಕಾಗಿ ರಾಜನು ಇನ್ನೇನೇನು ಕೆಲಸಮಾಡಬೇಕೆಂಬ ಸಂಗತಿಯನ್ನೂ ದಯಮಾಡಿ ತಿಳಿಸಬೇಕೆಂದು ಪುಷ್ಕರನನ್ನು ಕೇಳುತ್ತಾನೆ.

೨. ಬಾಗೇಮರದ ಹಣ್ಣು, ಅತ್ತಿ ಹಣ್ಣು, ಬನ್ನಿ ಹಣ್ಣು, ಮಾದಲ ಹಣ್ಣು, ಇವುಗಳನ್ನು ಚೆನ್ನಾಗಿ ಒಣಗಿಸಿ ಅವುಗಳನ್ನು ಚೂರ್ಣಮಾಡಿ ಅದನ್ನು ತುಪ್ಪದಲ್ಲಿ ನೆನೆಯಿಸಿ ಕಲಸಿ ತಿನ್ನುತ್ತಾ ಬಂದರೆ ಹದಿನೈದು ದಿನದೊಳಗೆ ಅಜೀರ್ಣರೋಗವು ಗುಣವಾಗಿ ಹೊಟ್ಟೆ ಹಸಿವಾಗುತ್ತದೆ.

ಕಶೇರೂತ್ಪಲಮೂಲಾನಿ ಇಕ್ಷುಮೂಲಂ ತಥಾ ವಿಷಂ ।
ದೂರ್ವಾಕ್ಷೀರಘೃತೈರ್ಮಂಡಃ ಸಿದ್ಧೋಽಯಂ ಮಾಸಿಕಃ ಪರಂ ॥ ೩ ॥

ಶೂಲಪ್ರೋಕ್ತಂ ಶರಂ ಪ್ರಾಪ್ಯ ತಸ್ಯಾಸ್ಥ್ನಾ ಮರಣೀ ಭವೇತ್ ।
ಕಲ್ಮಾಷವೇಣುನಾತತ್ರ ಜನಯೇತ್ತು ವಿಭಾವಸುಂ ॥ ೪ ॥

ಗೃಹೇ ತ್ರಿರಪಸವ್ಯಂ ತತ್ಕ್ರಿಯತೇಽಯತ್ರ ಭಾರ್ಗವ ।
ನಾನ್ಯೋಽಗ್ನಿರ್ಜ್ವಲತೇ ತತ್ರ ನಾತ್ರಕಾರ್ಯಾ ವಿಚಾರಣಾ ॥ ೫ ॥

ಕಾರ್ಪಾಸಾಸ್ಥಿ ಭುಜಂಗಸ್ಯ ತಥಾ ನಿರ್ಮೋಚನಂ ಪರಂ ।
ಸರ್ಪನಿರ್ವಾಸನೇ ಧೂಪಃ ಪ್ರಶಸ್ತಃ ಸತತಂ ಗೃಹೇ ॥ ೬ ॥

---

೩. ಕೊತ್ತಿಗೆಡ್ಡೆ, ನೈದಿಲೆಗಿಡದ ಬೇರು, ಕಬ್ಬಿನ ಬೇರು, ವತ್ಸನಾಭಿ, ಒಣಗರಿಕೆಗಳನ್ನು ಪುಡಿಮಾಡಿ ಚೂರ್ಣಮಾಡಿ ಇಟ್ಟುಕೊಂಡಿದ್ದು ಹಾಲುತುಪ್ಪಗಳನ್ನು ಬೆರಸಿ ಕಾಯಿಸಿ ಗೋಂದಿನಂತೆ ಘಟ್ಟಿಮಾಡಿ ಇಟ್ಟುಕೊಂಡಿದ್ದು ಅದರಲ್ಲಿ ಈ ಚೂರ್ಣವನ್ನು ಬೆರಸಿ ಒಂದು ತಿಂಗಳು ಇಟ್ಟು ಸೇವಿಸುತ್ತ ಬಂದರೆ ಹಸಿವುಂಟಾಗುತ್ತದೆ.

೪. ಶೂಲಕ್ಕೇ (ಗಲ್ಲಿಗೇ)ರಿಸಿದ ಮನುಷ್ಯನ ಮೂಳೆಯನ್ನು ಸಂಪಾದಿಸಿ, ಅದನ್ನು ಅರಣಿಯಂತೆ ಮಾಡಿ ಸಾಮೇಗಿಡದ ದೃಢವಾದ ಕಡ್ಡಿಯಿಂದ ಅದನ್ನು ಕೊರೆದರೆ (ಮಂಥನ ಮಾಡಿದರೆ) ಬೆಂಕಿಯು ಹುಟ್ಟುತ್ತದೆ.

೫. ಆ ಬೆಂಕಿಯನ್ನು ಜ್ವಲನಮಾಡಿ ಯಾವ ಮನೆಯಲ್ಲಿ ಅಪ್ರದಕ್ಷಿಣೆ (ಅಪಸವ್ಯ)ಯಾಗಿ ಮೂರುಬಾರಿ ಸುತ್ತಿಸುವರೋ, (ಉರಿಸುವರೋ) ಅಂತಹ ಮನೆಗೆ ಇನ್ನಾವ ವಿಧವಾದ ಬೆಂಕಿಯ ಭಯವೂ ಇರುವುದಿಲ್ಲ. (ಅಂದರೆ ಈ ಕ್ರಿಯೆಯನ್ನು ಮಾಡಿದ್ದ ಮನೆಗೆ ಬೆಂಕಿ ಬಿದ್ದಾಗ್ಯೂ ಸುಟ್ಟುಹೋಗುವುದಿಲ್ಲ.) ಈ ವಿಷಯ ದಲ್ಲೇನೇನೂ ಸಂಶಯವಿಲ್ಲ. (ಇಂತಹ ಕ್ರಿಯೆಗಳು ರಾಜಾಧಿರಾಜರಿಂದ ಸಾಧ್ಯವೇ ಹೊರತು ಇತರರಿಂದ ಸಾಧ್ಯವಿಲ್ಲ.)

೬. ಹತ್ತಿಯ ಬೀಜ, ಹಾವಿನ ಪರೆಗಳನ್ನು ಪುಡಿಮಾಡಿ ಇಟ್ಟುಕೊಂಡಿದ್ದು ಅದರ ಧೂಪವನ್ನು ಮನೆಯಲ್ಲಿ ಹಾಕುತ್ತಿದ್ದರೆ ಸರ್ಪಗಳು ಅಲ್ಲಿ ನಿಲ್ಲದೆ ಓಡುತ್ತವೆ. (ಅಂದರೆ ಆ ಮನೆಯಲ್ಲಿ ಹಾವಿನ ಭಯವಿರುವುದಿಲ್ಲ.)

**ಸಾಂದ್ರಸತ್ವಾ ಚ ವಯಸಾ ವಿದ್ಯುದ್ದಗ್ಧಾ ಚ ಮೃತ್ತಿಕಾ ।**
**ತಯಾಽನುಲಿಪ್ತಂ ಯದ್ವೇಶ್ಮ ನಾಗ್ನಿನಾ ದಹ್ಯತೇ ದ್ವಿಜ ॥ ೭ ॥**

**ದಿವಾ ಚ ದುರ್ಗೇ ರಕ್ಷೋಽಗ್ನಿರ್ವಾತಿವಾತೇ ವಿಶೇಷತಃ ।**
**ವಿಷಾಚ್ಚ ರಕ್ಷ್ಯೋ ನೃಪತಿಸ್ತತ್ರ ಯುಕ್ತಂ ನಿಬೋಧ ಮೇ ॥ ೮ ॥**

**ಕ್ರೀಡಾನಿಮಿತ್ತಂ ನೃಪತೇರ್ಧಾರ್ಯಾಃ ಸ್ಯುರ್ಮೃಗಪಕ್ಷಿಣಃ ।**
**ಅನ್ನಂ ಚ ಪ್ರಾಕ್ಪರೀಕ್ಷೇತ ವಹ್ನಾವಥ ನರೇಷು ಚ ॥ ೯ ॥**

**ವಸ್ತ್ರಂ ಪತ್ರಮಲಂಕಾರಂ ಭೋಜನಾಚ್ಛಾದನೇ ತಥಾ ।**
**ನಾಪರೀಕ್ಷಿತಪೂರ್ವಂ ತು ಸ್ಪೃಶೇದಪಿ ಮಹೀಪತಿಃ ॥ ೧೦ ॥**

---

೭. ದಟ್ಟ (ಸಾಂದ್ರ)ವಾಗಿಯೂ, ಬಹು ಘಟ್ಟಿಯಾಗಿಯೂ ಮಿಂಚು ಹೊಡೆದು ಸುಟ್ಟುಹೋಗಿಯೂ ಇರುವ ಜೇಡಿಮಣ್ಣನ್ನು ಪುಡಿಮಾಡಿ ಕಲಸಿ (ಸುಣ್ಣಕ್ಕೆ ಬೆರಸಿ ಗಾರೆಮಾಡಿ) ಯಾವ ಮನೆಯ ಗೋಡೆಗೆ ಆ ಗಾರೆಯಿಂದ ಗಿಲಾವು (ಲೇಪನ) ಮಾಡುವರೋ ಆ ಮನೆಯು ಬೆಂಕಿಯಿಂದ ಸುಟ್ಟುಹೋಗುವುದಿಲ್ಲ.

೮. ಹಗಲು ಹೊತ್ತಿನಲ್ಲೂ ಸಹ ದುರ್ಗದಲ್ಲಿ ರಾಕ್ಷಸಬಾಧೆ, ಅಗ್ನಿಬಾಧೆ, ಮತ್ತು ವಿಶೇಷವಾಗಿ ವಿಷಬಾಧೆಯು ರಾಜನಿಗೆ ತಟ್ಟದೆ ಇರುವಂತಹ ಯುಕ್ತಿ (ಉಪಾಯ) ಗಳನ್ನೀಗ ನಿನಗೆ ಹೇಳುತ್ತೇನೆ, ಕೇಳಯ್ಯ! ಪರಶುರಾಮ!

೯. ರಾಜನಾದವನು ತನ್ನ ರಾಜಧಾನಿಯಲ್ಲಿ ಕ್ರೀಡಾನಿಮಿತ್ತವಾಗಿ ಒಂದು ಮೃಗಾಲಯ (ಜೂ)ವನ್ನು ನಿರ್ಮಾಣಮಾಡಬೇಕು. ಅಲ್ಲಿ ನಾನಾವಿಧ ಮೃಗ ಪಕ್ಷಿಗಳನ್ನು ಸಾಕಿಕೊಂಡಿರಬೇಕು. (ಇದು ನೋಡಿದವರಿಗೆ ಕ್ರೀಡಾನಿಮಿತ್ತವಾಗಿ ಕಂಡುಬಂದಾಗ್ಯೂ ಇದು ರಾಜನ ಪ್ರಾಣಸಂರಕ್ಷಣೆಗೋಸ್ಕರವೆಂಬ ವಿಷಯವು ಮುಂದೆ ಬರೆಯಲ್ಪಡುವುದು.)

೧೦. ಮಹಾರಾಜರು ಊಟಮಾಡುವ ಅನ್ನವನ್ನು ಅವರು ಭೋಜನಮಾಡುವುದಕ್ಕಿಂತ ಮುಂಚೆಯೇ ಬೆಂಕಿಯೆಲ್ಲಾಗಲೀ, ಮನುಷ್ಯರಲ್ಲಾಗಲೀ ಮೊದಲು ಪರೀಕ್ಷಿಸಿಯೇ ಊಟಮಾಡಬೇಕು. ಇದೇ ಮೇರೆ ಉಟ್ಟು ಹೊದಿಯುವ ಬಟ್ಟೆಗಳನ್ನೂ, ಆಹಾರಕ್ಕುಪಯೋಗಿಸುವ ಎಲೆ (ಪತ್ರ) ಗಳನ್ನೂ ಧರಿಸುವ ಅಲಂಕಾರಗಳನ್ನೂ ಸಹ ಪರೀಕ್ಷೆಮಾಡಿ ನಿರ್ದೋಷ ( ನಿರ್ವಿಷ ) ವೆಂದು ಖಚಿತವಾಗಿ ಗೊತ್ತಾಗುವುದಕ್ಕಿಂತ ಮುಂಚೆ ಉಪಯೋಗಿಸಲೇಬಾರದು.

**ಶ್ಯಾವಾಸ್ಯವಕ್ತ್ರಃ ಸಂತಪ್ತಃ ಸೋದ್ವೇಗಂ ಚ ಪರೀಕ್ಷತೇ ।**
**ವಿಪದೇನ ವಿಷಂ ದತ್ತಂ ಯತ್ರ ತತ್ರ ನಿರೀಕ್ಷತೇ ॥ ೧೧ ॥**

**ಪ್ರಸ್ತ್ರೋತ್ತರೀಯೋ ವಿಮನಾಃ ಸ್ತಂಭಕುಡ್ಯಾದಿಭಿಸ್ತಥಾ ।**
**ಪ್ರಚ್ಛಾದಯತಿ ಚಾತ್ಮಾನಂ ಖಿದ್ಯತೇ ಲಜ್ಜತೇ ತಥಾ ॥ ೧೨ ॥**

**ಭುವಂ ವಿಲಿಖತೇ ಗ್ರೀವಾಂ ತಥಾ ಚಾಲಯತೇ ದ್ವಿಜ ।**
**ಕಂಡೂಯತಿ ಚ ಮೂರ್ಧಾನಂ ಪರಿಲೇಢ್ಯಧರಂ ತಥಾ ॥ ೧೩ ॥**

---

೧೧. ಆಹಾರ ಪದಾರ್ಥಗಳಿಗೂ, ವಸ್ತ್ರಾದ್ಯಾಭರಣಗಳಿಗೂ ವಿಷಪ್ರಯೋಗ ಮಾಡಿದವನನ್ನು ಸುಲಭವಾಗಿ ಕಂಡುಹಿಡಿಯುವ ಬಗೆಯನ್ನೀಗ ವಿವರಿಸುತ್ತೇನೆ ; ಕೇಳು :—ವಿಷಪ್ರಯೋಗ ಮಾಡಿದವನು ಎಲ್ಲಿಯೂ ಹೋಗುವುದಿಲ್ಲ. ತನ್ನ ಪ್ರಯೋಗವು ಸಿದ್ಧಿಸಿತೋ ಇಲ್ಲವೋ ಎಂಬುದನ್ನು ಪರೀಕ್ಷಿಸಲೋಸುಗ ಹತ್ತಿರದಲ್ಲಿಯೇ ಇರುತ್ತಾನೆ. ಅವನ ಮುಖವು ಹೊಗೆಯಂತೆ ಕಪ್ಪುಸುತ್ತಿಕೊಂಡಿರುತ್ತವೆ. ಅವನ ಮೈ ಆದ್ಯಂತವೂ ಜ್ವರ ಬಂದವನಂತೆ ಸುಡುತ್ತಿರುತ್ತದೆ. ತನ್ನ ಪ್ರಯೋಗವು ಸಿದ್ಧಿಸುವುದನ್ನೇ ಉದ್ವೇಗದಿಂದ ಪರೀಕ್ಷಿಸುತ್ತಿರುತ್ತಾನೆ. ತಾನು ಯಾರಿಗೋಸ್ಕರ ಆಹಾರದಲ್ಲಿ ವಿಷವನ್ನು ಬೆರಸಿ ಪ್ರಯೋಗಮಾಡಿರುವನೋ ಆ ಆಹಾರವನ್ನೂ ಅದನ್ನು ತಿನ್ನುವವರನ್ನೂ ನೋಡುತ್ತಲೇ ಇರುತ್ತಾನೆ.

೧೨. ಅವನು ಹೊದ್ದಿರುವ ಬಟ್ಟೆಯು ಜಾರಿಹೋಗುತ್ತಿದ್ದರೂ ಅದರ ಕಡೆ ಅವನ ಮನಸ್ಸು ಹೋಗುವುದಿಲ್ಲ. ಅವನು ಆಗಿಂದಾಗ್ಗೆ (ಕಳ್ಳನ ಮನಸ್ಸು ಹುಳ್ಳ ಹುಳ್ಳಗೆ ಎಂಬಂತೆ) ಕಂಭ ಮತ್ತು ಗೋಡೆಯ ಹಿಂದೆ ಔತುಕೊಳ್ಳುತ್ತಿರುತ್ತಾನೆ. ತಾನು ಮಾಡಿದ ಕೆಲಸಕ್ಕಾಗಿ ಬಹಳವಾಗಿ ಖೇದಗೊಳ್ಳುತ್ತಿರುತ್ತಾನೆ. ಮತ್ತು ನಾಚಿಗೊಳ್ಳುತ್ತಿರುತ್ತಾನೆ.

೧೩. ಕಾಲುಗುರಿನಿಂದ ನೆಲವನ್ನು ಕೆರೆಯುತ್ತಿರುತ್ತಾನೆ. ಕತ್ತನ್ನಲ್ಲಾಡಿಸುತ್ತಿರುತ್ತಾನೆ. ತಲೆಯನ್ನು ಕೆರೆದುಕೊಳ್ಳುತ್ತಿರುತ್ತಾನೆ. ತನ್ನ ತುಟಿಯನ್ನು ತಾನೇ ನೆಕ್ಕುತ್ತಿರುತ್ತಾನೆ.

**ಕ್ರಿಯಾಸು ತ್ವರತೇ ರಾಮ ವಿಪರೀತಾಸ್ವಪಿ ಧ್ರುವಂ ।**
**ಏವಮಾದೀನಿ ಚಿಹ್ನಾನಿ ವಿಷದಸ್ಯ ಪರೀಕ್ಷಯೇತ್ ॥ ೧೪ ॥**

**ತತೋ ವಿಚಾರಯೇದಗ್ನೌ ತದನ್ನಂ ತ್ವರಯಾಽನ್ವಿತಃ ।**
**ಇಂದ್ರಾಯುಧಸವರ್ಣಸ್ತು ವೃಕ್ಷಸ್ಫೋಟಿಸಮನ್ವಿತಃ ॥ ೧೫ ॥**

**ಏಕಾವರ್ತೋಽಥ ದುರ್ಗಂಧೀ ಭೃಶಂ ಚಟಚಟಾಯತೇ ।**
**ತದ್ಧೂಮಸೇವನಾಜ್ಜಂತೋಃ ಶಿರೋರೋಗಶ್ಚ ಜಾಯತೇ ॥ ೧೬ ॥**

**ಸವಿಷೇಽನ್ನೇ ನಿಲೀಯಂತೇ ನ ಚ ಭಾರ್ಗವ ಮಕ್ಷಿಕಾಃ ॥**
**ನಿಲೀನಾಶ್ಚ ವಿಪದ್ಯಂತೇ ದೃಷ್ಟೇ ಚ ಸವಿಷೇ ತಥಾ ॥ ೧೭ ॥**

---

೧೪. ತಾನು ಪ್ರಯೋಗಿಸಿದ ವಿಷಕ್ರಿಯೆಯು ಸಿದ್ಧಿಸಿತೋ ಇಲ್ಲವೋ ಎಂಬುದನ್ನು ಬಹು ಕುತೂಹಲದಿಂದ ನಿರೀಕ್ಷಿಸುತ್ತಿರುತ್ತಾನಲ್ಲದೆ ಅದು ಸಿದ್ಧಿಯಾಗಿ ವಿಪರೀತವಾಗಿ ಪರಿಣಮಿಸಿದಾಗ ಬಹು ಸ್ಥಿರಬುದ್ಧಿಯಿಂದಿರುತ್ತಾನೆ. ವಿಷಪ್ರಯೋಗ ಮಾಡಿದವನ ಈ ಲಕ್ಷಣಗಳನ್ನು ಜಾಣರಾದವರು ಸುಲಭವಾಗಿ ಕಂಡುಹಿಡಿಯಬೇಕು.

೧೫. ಹೀಗೆ ಕಂಡುಹಿಡಿದೊಡನೆ ಅಂತಹ ಮನುಷ್ಯನನ್ನು ಹಿಡಿದು ಒಂದು ಕಡೆ ಕೂಡಬೇಕಲ್ಲದೆ ಅವನು ಪ್ರಯೋಗಿಸಿದ ವಿಷವನ್ನು (ವಿಷ ಮಿಶ್ರಾನ್ನವನ್ನು) ಮೊದಲು ಬೆಂಕಿಯಲ್ಲಿ ಹಾಕಿ ಪರೀಕ್ಷಿಸಬೇಕು. ಆ ಅನ್ನವನ್ನು ಬೆಂಕಿಯಲ್ಲಿ ಹಾಕಿದೊಡನೆಯೇ ಅದು ಕಾಮನಬಿಲ್ಲಿನಂತೆ ನಾನಾ ಬಣ್ಣಗಳಿಂದ ಹೊಗೆ-ಸುತ್ತಿ ಉರಿಯುವುದಲ್ಲದೆ ಮರ ಹತ್ತಿಕೊಂಡು ಉರಿಯುವಾಗ ಆಗುವಂತೆ ಚ ಟ ಚ ಟ ವೆ ಂ ದು ಸದ್ದಾಗುವುದು.

೧೬, ಆ ಉರಿಯಿಂದ ಒಂದು ಸುಳಿ ಹೊರಟೊಡನೆಯೇ ಬಹು ದುರ್ಗಂಧವುಂಟಾಗುವುದಲ್ಲದೆ ಚಟಚಟನೆ ಸದ್ದಾಗುತ್ತಲೇ ಇರುವುದು, ಆ ಉರಿಯಿಂದ ಹೊರಟ ಹೊಗೆಯು ಯಾವ ಪ್ರಾಣಿಯ ಮೂಗಿಗೆ (ವಾಸನೆ) ತಗಲಿದಾಗ್ಯೂ ಆ ಪ್ರಾಣಿಗೆ ಆಕ್ಷಣವೇ ತಲೆನೋವು ಆರಂಭವಾಗುತ್ತದೆ.

೧೭. ವಿಷಮಿಶ್ರವಾದ ಅನ್ನಕ್ಕೆ ನೊಣಗಳು ಮುತ್ತುವುದಿಲ್ಲ. ಒಂದು ವೇಳೆ ಪವನ ತಪ್ಪಿ ಯಾವುದಾದರೊಂದು ನೊಣವು ಆ ಅನ್ನಕ್ಕೆ ಬಿದ್ದರೆ ಅದು ಜೀವಸಹಿತ ಬೇರೆ ಉಳಿಯುವುದಿಲ್ಲ. ಬಿದ್ದು ಸಾಯುವ ಮಾತು ಹಾಗಿರಲಿ. ಆ ಅನ್ನವನ್ನು ನೊಣಗಳು ನೋಡಿಬಿಟ್ಟರೂ ಸಾಕು. ಅವು ತಲೆತಿರುಗಿ ಬಿದ್ದು ಸಾಯುತ್ತವೆ.

**ವಿರಜ್ಯತಿ ಚಕೋರಸ್ಯ ದೃಷ್ಟಿರ್ಭಾರ್ಗವಸತ್ತಮ ।**
**ವಿಕೃತಿಂ ಚ ಸ್ವರೋ ಯಾತಿ ಕೋಕಿಲಸ್ಯ ತಥಾ ದ್ವಿಜ　　॥ ೧೮ ॥**

**ಗತಿಃ ಸ್ಖಲತಿ ಹಂಸಸ್ಯ ಭೃಂಗರಾಜಶ್ಚ ಕೂಜತಿ ।**
**ಕ್ರೌಂಚೋ ಮದಮಥಾಭ್ಯೇತಿ ಕೃಕವಾಕುರ್ವಿರೌತಿ ಚ　　॥ ೧೯ ॥**

**ವಿಕ್ರೋಶತಿ ಚಕೋರಶ್ಚ ಶಾರಿಕಾ ವಾಶತೇ ತಥಾ ।**
**ಚಾಮೀಕರೋಽನ್ಯತೋ ಯಾತಿ ಮೃತ್ಯುಂ ಕಾರಂಡವಸ್ತಥಾ　　॥ ೨೦ ॥**

**ಮೇಹತೇ ವಾನರೋ ರಾಮ ಗ್ಲಾಯತೇ ಜೀವಜೀವಕಃ ।**
**ಹೃಷ್ಟರೋಮಾ ಭವೇದ್ಬಭ್ರುಃ ಪೃಷತಶ್ಚೈವ ರೋದಿತಿ　　॥ ೨೧ ॥**

---

೧೮. ಎಲೈ ಪರಶುರಾಮನೆ, ಕೇಳು. ವಿಷಮಿಶ್ರವಾದ ಅನ್ನದ ಲಕ್ಷಣ ವನ್ನೀಗ ಹೇಳುತ್ತೇನೆ. ಚಕೋರಪಕ್ಷಿಯ ದೃಷ್ಟಿಯು ಆ ಅನ್ನದ ಮೇಲೆ ಬಿದ್ದರೆ ಅದು ವಿಕಾರ (ವಿರಾಗ) ವನ್ನು ಹೊಂದುವುದು. ಕೋಕಿಲೆಗೆ ಆ ಅನ್ನದ ವಾಸನೆ ಬಂದರೆ ಅದು ವಿಕಾರವಾಗಿ ಕೂಗಿಕೊಳ್ಳುವುದು.

೧೯. ಹಂಸಪಕ್ಷಿಯು ಆ ಅನ್ನವನ್ನು ತಿಂದರೆ ಅದರ ಗಮನವು ಕುಂಠಿತವಾಗುವುದು. (ನಡೆಯುವಾಗ ಮುಗ್ಗರಿಸುವುದು) ಭ್ರಮರವು ಅಪಸ್ವರವಾಗಿ ಕೂಗುವುದು. ಕ್ರೌಂಚಪಕ್ಷಿಯು ಮದವೇರಿ ಮತ್ತವಾಗುವುದು. ಕೋಳಿಯು ವಿಕಾರವಾಗಿ ಕೂಗುವುದು.

೨೦. ಚಕೋರಪಕ್ಷಿಯು ಆಕ್ರೋಶದಿಂದ ಕಿರುಚುವುದು. ಆ ವಿಷವನ್ನು ಚಿನ್ನಕ್ಕೆ ಪ್ರಯೋಗಿಸಿದರೆ ಚಿನ್ನದ ಬಣ್ಣವು ಕೆಟ್ಟುಹೋಗುತ್ತದೆ. ಚಿತ್ರವಿಚಿತ್ರ ಬಣ್ಣಗಳಿಂದ ಮನೋಹರವಾಗಿ ಕಂಗೊಳಿಸುವ ನೀರುಹಕ್ಕಿಯು (ಕಾರಂಡವವು) ಆ ಅನ್ನದ ವಾಸನೆ ಬಿದ್ದೊಡನೆ ಸತ್ತು ನೆಲಕ್ಕೊರಗುವುದು.

೨೧. ಕೋತಿಯು ವಿಷಮಿಶ್ರಾನ್ನವನ್ನು ತಿಂದರೆ ವಿಪರೀತ ಭೇದಿಯಾಗುತ್ತದೆ. ಚಕೋರವು ತಿಂದರೆ ಬಳಲುತ್ತದೆ. ಕೀರವು ತಿಂದರೆ ಮೈ ಕೂದಲು ನಿಂತುಕೊಳ್ಳುತ್ತದೆ. ಚಮರೀಮೃಗವು ತಿಂದರೆ ಅಳುತ್ತದೆ.

**ಹರ್ಷಮಾಯಾತಿ ಚ ಶಿಖೀ ಸವಿಷೇ ದರ್ಶನೇ ದ್ವಿಜ ।**
**ಅನ್ನಂ ಚ ಸವಿಷಂ ರಾಮ ಚಿರೇಣ ಚ ವಿಪಚ್ಯತೇ ॥ ೨೨ ॥**

**ತಥಾ ಭವತ್ಯತಿಸ್ರಾವಂ ಪಕ್ವಂ ಪರ್ಯುಷಿತೋಪಮಂ ।**
**ವ್ಯಾಪನ್ನರಸಗಂಧಂ ಚ ಚಂದ್ರಿಕಾಭಿಸ್ತಥಾಯುತಂ ॥ ೨೩ ॥**

**ವ್ಯಂಜನಾನಾಂ ಚ ಶುಷ್ಕತ್ವಂ ದ್ರವಾಣಾಂ ಬುದ್ಬುದೋದ್ಭವಃ ।**
**ಸಸೈಂಧವಾನಾಂ ದ್ರವ್ಯಾಣಾಂ ಜಾಯತೇ ಫೇನಮಾಲಿಕಾ ॥ ೨೪ ॥**

**ರಸಸ್ಯ ರಾಜೀ ನೀಲಾ ಸ್ಯಾತ್ತಾಮ್ರಾ ಚ ಪಯಸಸ್ತಥಾ ।**
**ಕೋಕಿಲಾಭಾ ಚ ಮದ್ಯಸ್ಯ ತೋಯಸ್ಯ ಚ ಭೃಗೂತ್ತಮ ॥ ೨೫ ॥**

---

೨೨. ವಿಷಮಿಶ್ರಾನ್ನವನ್ನು ಕಂಡ ಕೂಡಲೆ ನವಿಲು ಪರಮಾನಂದದಿಂದ ನಲಿದಾಡುವುದು. ಆದರೆ ಆ ಅನ್ನವನ್ನು ಅದು ತಿಂದಾಗ್ಯೂ ಅದು ಬೇಗ ಅರಗುವುದಿಲ್ಲ. ಸಾವಕಾಶವಾಗಿ ಜೀರ್ಣವಾಗುವುದು. (ನವಿಲು ಸರ್ಪಕ್ಕೆ ಶತ್ರುವೆಂಬುದು ನೆನಪಿರಬೇಕು.)

೯೩. ಬಿಸಿಬಿಸಿಯಾದ ಅನ್ನಕ್ಕೆ ವಿಷವನ್ನು ಹಾಕಿಬಿಟ್ಟರೆ ಆ ಅನ್ನವು ಕೂಡಲೆ ನೀರು ನೀರಾಗಿ ಹಳಸಿಹೋಗುತ್ತದೆ. ಒಳ್ಳೇ ಬೆಳ್ಳಗಿದ್ದ ಅನ್ನವು ಬಣ್ಣ ಕೆಡುವುದಲ್ಲದೆ ಅದರ ಸಾರವೂ, ಸುವಾಸನೆಯೂ ಹೋಗಿಬಿಡುತ್ತದೆ.

೨೪. ವ್ಯಂಜನಗಳಿಗೆ (ಉಪ್ಪಿನಕಾಯಿ, ಚಟ್ಟಣಿ ಇತ್ಯಾದಿ) ಹಾಕಿದರೆ ಅವು ಕೂಡಲೆ ಒಣಗಿಹೋಗುತ್ತವೆ. ದ್ರವ ಪದಾರ್ಥಗಳಿಗೆ ಹಾಕಿದರೆ ಗುಳ್ಳೆಗಳು ಏಳುತ್ತವೆ. ಉಪ್ಪು ಹಾಕಿದ ಪದಾರ್ಥಗಳಿಗೆ ಹಾಕಿದರೆ ನೊರೆನೊರೆಯಾಗಿ ಕಾಣುವುದು.

೨೫. ಮಾಂಸಕ್ಕೆ ಹಾಕಿದರೆ ನೀಲೀಬಣ್ಣವಾಗಿ ಹೋಗುತ್ತದೆ. ಹಾಲಿಗೆ ವಿಷ ಹಾಕಿಬಿಟ್ಟರೆ ಕೆಂಪಾಗಿ ಹೋಗುತ್ತದೆ. ನೀರಿಗೆ ಹಾಕಿದರೆ ಕೊಗಿಲೆಯ ಬಣ್ಣದಂತೆ ಕಪ್ಪಾಗುವುದು.

ಧಾನ್ಯಾಮ್ಲಸ್ಯ ತಥಾ ಕೃಷ್ಣಾ ಕಪಿಲಾ ಕೋದ್ರವಸ್ಯ ಚ ।
ಮಧುಶ್ಯಾವಾ ಚ ತಕ್ರಸ್ಯ ನೀಲಾ ಪೀತಾ ತಥೈವ ಚ ॥ ೨೬ ॥

ಘೃತಸ್ಯೋದಕಸಂಕಾಶಾ ಕಪೋತಾಭಾ ಚ ಮಸ್ತುನಃ ।
ಹರಿತಾ ಸಾಕ್ಷಿಕಸ್ಯಾಪಿ ತೈಲಸ್ಯಚ ತಥಾsರುಣಾ ॥ ೨೭ ॥

ಫಲಾನಾಮಪ್ಯಪಕ್ವಾನಾಂ ಪಾಕಃ ಕ್ಷಿಪ್ರಂ ಪ್ರಜಾಯತೇ ।
ಪ್ರಕೋಪಶ್ಚೈವ ಪಕ್ವಾನಾಂ ಮಾಲ್ಯಾನಾಂ ಮ್ಲಾನತಾ ತಥಾ ॥ ೨೮ ॥

ಮೃದುತಾ ಕಠಿನಾನಾಂ ಸ್ಯಾನ್ಮೃದೂನಾಂ ಚ ವಿಪರ್ಯಯಃ ।
ಸೂಕ್ಷ್ಮತಂತೂಪಸದನಂ ತಥಾ ಚೈವಾತಿರೋಮತಾ ॥ ೨೯ ॥

---

೨೬. ಕಲಗಚ್ಚಿಗೆ ಹಾಕಿದರೆ ಕಪ್ಪಾಗಿ ಹೋಗುತ್ತದೆ. ಹಾರಕ ಸಾಮೆ ಮುಂತಾದ ಧಾನ್ಯದಿಂದ ಪಕ್ವವಾದ ಪದಾರ್ಥಗಳಿಗೆ ಹಾಕಿದರೆ ಕಪಿಲೆಯ ಬಣ್ಣದಂತೆ ಆಗುವುದು. ಜೇನುತುಪ್ಪಕ್ಕೆ ಹಾಕಿದರೆ ಹೊಂಬಣ್ಣವಾಗುತ್ತದೆ. ಮಜ್ಜಿಗೆಗೆ ಹಾಕಿದರೆ ನೀಲೀಬಣ್ಣವಾಗಿ ಹೋಗುತ್ತದೆ. ಅಥವಾ ಹಳದೀ ಬಣ್ಣವಾಗುವುದೂ ಉಂಟು.

೨೭. ತುಪ್ಪಕ್ಕೆ ವಿಷಹಾಕಿದರೆ ಬರೀ ನೀರಿನಂತೆ ಆಗಿಹೋಗುತ್ತದೆ. ಮೊಸರಿನ ಗರಣೆಗೆ ಹಾಕಿದರೆ ಕಪೋತದಬಣ್ಣವಾಗುತ್ತದೆ. ಜಿಡ್ಡುಳ್ಳ ಪದಾರ್ಥಗಳಿಗೆ ಹಾಕಿದರೆ ಕೆಂಪಾಗಿಹೋಗುತ್ತದೆ.

೨೮. ಕಸುಕಟ್ಟೆಕಾಯಿ, ದೋರೆಗಾಯಿಗಳಿಗೆ ಹಾಕಿದರೆ ಅವು ಆ ಕೂಡಲೆ ಹಣ್ಣಾಗಿ ಹೋಗುತ್ತವೆ. ಪಕ್ವಪದಾರ್ಥಗಳಿಗೆ ಹಾಕಿದರೆ ಪ್ರಕೋಪವುಂಟಾಗುತ್ತದೆ. ಕಟ್ಟಿದ ಹೂವಿನಹಾರಗಳಿಗೆ ಪ್ರಯೋಗಿಸಿದರೆ ಅದು ಕೂಡಲೆ ಬಾಡಿ (ಒಣಗಿ) ಹೋಗುತ್ತದೆ.

೨೯. ಮೃದುವಾದ ಪದಾರ್ಥಗಳಿಗೆ ಹಾಕಿದರೆ ಅವು ಕಠಿಣವಾಗಿ ಹೋಗುತ್ತವೆ. ಅಥವಾ ಅವುಗಳ ಮಾರ್ದವವು ಹೋಗಿ ವಿಪರ್ಯಾಸವಾಗಿ ಹೋಗುತ್ತದೆ. ಸಣ್ಣ ನೂಲಿನೆಳೆಗಳಿಂದ ನೆಯ್ದ ಬಟ್ಟೆಗಳಿಗೆ ಹಾಕಿದರೆ ಅವು ಕೂದಲಿನಂತೆ ಆಗಿ ಹೋಗುತ್ತವೆ.

ಶ್ಯಾಮಮಂಡಲತಾ ಚೈವ ವಸ್ತ್ರಾಣಾಮವಿಶೇಷತಃ ।
ಲೋಹಾನಾಂ ಚ ಮಣೀನಾಂ ಚ ಮಲಪಂಕೋಪದಿಗ್ಧತಾ ॥ ೩೦ ॥

ಅನುಲೇಪನಗಂಧಾನಾಂ ಸ್ನಾನಾನಾಂ ಚ ಭೃಗೂತ್ತಮ ।
ವಿಗಂಧತಾ ಚ ವಿಜ್ಞೇಯಾ ಪರ್ಣಾನಾಂ ಮ್ಲಾನತಾ ತಥಾ ॥ ೩೧ ॥

ಪೀತಾ ನೀಲಾ ಸಿತಾ ಜ್ಞೇಯಾ ತಥಾ ರಾಮಾಂಜನಸ್ಯ ಚ ।
ದಂತಕಾಷ್ಠತ್ವಚಃ ಶಾಂತಾಸ್ತಂತುಸತ್ತ್ವಂ ತಥೈ ಚ ॥ ೩೨ ॥

ಏವಮಾದೀನಿ ಚಿಹ್ನಾನಿ ವಿಜ್ಞೇಯಾನಿ ಭೃಗೂತ್ತಮ ।
ತಸ್ಮಾದ್ರಾಜಾ ಸದಾ ತಿಷ್ಠೇನ್ಮಣಿಮಂತ್ರೌಷಧೀಗಣೈಃ ॥ ೩೩ ॥

ಆಪ್ತೈಃ ಸಂರಕ್ಷಿತೋ ರಾಮ ಪ್ರಮಾದ ಪರಿವರ್ಜಕೈಃ ॥ ೩೪ ॥

---

೩೦. ಎಲ್ಲಾ ವಿಧವಾದ ಬಟ್ಟೆಗಳಿಗೆ ಹಾಕಿದರೂ ಅದು ಅಲ್ಲಲ್ಲೇ ಕಪ್ಪುಕಪ್ಪಗೆ ತೂತು ಬಿದ್ದುಹೋಗುತ್ತದೆ. ಯಾವ ವಿಧ ಲೋಹಕ್ಕಾಗಲೀ ಯಾವ ವಿಧವಾದ ರತ್ನಗಳಿಗಾಗಲೀ ಪ್ರಯೋಗಿಸಿದರೆ ಅವುಗಳ ಬಣ್ಣವೇ ಬದಲಾಯಿಸಿ ಹೋಗುತ್ತದೆ.

೩೧. ಮೈಗೆ ತೊಡೆದುಕೊಳ್ಳುವ ಗಂಧಗಳಿಗೂ ಸ್ನಾನಚೂರ್ಣಗಳಿಗೂ ಹಾಕಿದರೆ ಅವುಗಳ ಸುವಾಸನೆಯು ಕೂಡಲೆ ನಾಶವಾಗಿ ಹೋಗುತ್ತದೆ. ಹಸುರೆಲೆಗಳಿಗೆ ಹಾಕಿದರೆ ಅವು ಕೂಡಲೆ ಬಾಡಿಹೋಗುತ್ತವೆ.

೩೨. ಕಪ್ಪುಬಣ್ಣದ ಪದಾರ್ಥಗಳಿಗೆ ವಿಷವನ್ನು ಪ್ರಯೋಗ ಮಾಡಿದರೆ ಅವು ಹಳದೀಬಣ್ಣವಾಗಿಯೂ, ನೀಲಿಬಣ್ಣವಾಗಿಯೂ, ಬಿಳೀಬಣ್ಣವಾಗಿಯೂ ಮಾರ್ಪಾಡಾಗುತ್ತವೆ. ಹಲ್ಲುಜ್ಜುವ ಕಡ್ಡಿಗಳಿಗೂ, ಚಕ್ಕೆಗಳಿಗೂ ಹಾಕಿದರೆ ಅವುಗಳ ಕಾಠಿನ್ಯವು ಹೋಗಿ ಮೃದುತ್ವವುಂಟಾಗುತ್ತೆ. (ಅಂದರೆ ಅದರ ಶಕ್ತಿಯೇ ಹೋಗಿಬಿಡುತ್ತದೆ.)

೩೩. ಮೇಲೆ ಹೇಳಿದ ಗುರುತುಗಳನ್ನೆಲ್ಲಾ ಮನಸ್ಸಿನಲ್ಲಿ ಚೆನ್ನಾಗಿ ನೆನಪಿಟ್ಟಿರಬೇಕಯ್ಯಾ! ಪರಶುರಾಮ! ಆದ್ದರಿಂದ ಮಹಾರಾಜನಾದವನು ಯಾವಾಗಲೂ ತನ್ನ ದುರ್ಗದಲ್ಲಿ ಮಣಿಮಂತ್ರೌಷಧಗಳನ್ನು ಕಾಪಾಡಿಕೊಂಡು ಇಟ್ಟೇ ಇರಬೇಕು.

೩೪. ಎಲೈ ಪರಶುರಾಮನೇ! ಮುಖ್ಯವಾದ ಮಾತನ್ನು ಹೇಳುತ್ತೇನೆ. ಕೇಳು. ಪ್ರಜೆಗಳೆಂಬ ವೃಕ್ಷಗಳಿಗೆ ಮಹಾರಾಜನೆಂಬುವನು ಬುಡದಂತೆ ಇರತಕ್ಕವನು.

ಪ್ರಜಾತರೋರ್ಮೂಲಮಿಹಾವನೀಶಃ
ತದ್ರಕ್ಷಣಾದ್ವೃದ್ಧಿಮುಪೈತಿ ರಾಷ್ಟ್ರಂ।
ತಸ್ಮಾತ್ಪ್ರಯತ್ನೇನ ನೃಪಸ್ಯ ರಕ್ಷಾ
ಸರ್ವೇಣ ಕಾರ್ಯಾ ಭೃಗುವಂಶಚಂದ್ರ ॥ ೩೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ
ಮಾರ್ಕಂಡೇಯ ವಜ್ರಸಂವಾದೇ ರಾಜರಕ್ಷಾವರ್ಣನಂನಾಮ
ಅಷ್ಟಾವಿಂಶತಿತಮೋಽಧ್ಯಾಯಃ

---

ಬುಡವು ಭದ್ರವಾಗಿದ್ದರೆ ಮರವು ಚೆನ್ನಾಗಿ ಬೆಳೆಯುವಂತೆ ರಾಜನು ಚೆನ್ನಾಗಿದ್ದರೆ ಅವನ ರಾಜ್ಯವೂ, ಪ್ರಜೆಗಳೂ ಸಹ ಅಭಿವೃದ್ಧಿ ಸ್ಥಿತಿಯನ್ನು ಹೊಂದುತ್ತಾರೆ. ಆದುದರಿಂದಲೇ ನಾನಾವಿಧ ಪ್ರಯತ್ನಗಳನ್ನಾದರೂ ಮಾಡಿ ದೇಶದ ಜನರೆಲ್ಲರೂ ದೊರೆಯಾದವನನ್ನು ಸಂರಕ್ಷಿಸಿಕೊಂಡಿರಬೇಕಾದುದು ಮುಖ್ಯ ಧರ್ಮವೆಂದು ತಿಳಿಯ ಬೇಕಯ್ಯಾ, ಎಂಬುದಾಗಿ ಪುಷ್ಕರನು ಪರಶುರಾಮನಿಗೆ ನಿರೂಪಿಸಿದನೆಂಬಲ್ಲಿಗೆ,

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ದ್ವಿತೀಯಖಂಡದಲ್ಲಿ ರಾಜರಕ್ಷಾವರ್ಣನೆಯೆಂಬ ಹೆಸರಿನ
ಇಪ್ಪತ್ತೆಂಟನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕೋನತ್ರಿಂಶತಿತಮೋಽಧ್ಯಾಯಃ

**ರಾಮ ಉವಾಚ**

**ವಾಸ್ತುವಿದ್ಯಾಂ ಸಮಾಚಕ್ಷ್ವ ಯಾದೋಗಣನೃಪಾತ್ಮಜ ।**
**ಹಿತಾಯ ಮಾನವೇಂದ್ರಾಣಾಂ ತಥಾಽನ್ಯೇಷಾಂ ಚ ಮಾನದ ॥ ೧ ॥**

**ಪುಷ್ಕರ ಉವಾಚ**

**ಭೂಮಿಮಾದೌ ಪರೀಕ್ಷೇತ ಶುಭಲಕ್ಷಣಲಕ್ಷಿತಾಂ ।**
**ಪೂರ್ವೋದಕ್ಪ್ರವಣಾಂ ಧನ್ಯಾಂ ತಥಾ ವೈ ದಕ್ಷಿಣೋನ್ನತಾಂ ॥ ೨ ॥**

---

## ಇಪ್ಪತ್ತೊಂಭತ್ತನೆಯ ಅಧ್ಯಾಯವು.

೧. ಪರಶುರಾಮನು ಪುಷ್ಕರನನ್ನು ಕುರಿತು ಪ್ರಶ್ನೆ ಮಾಡುತ್ತಾನೆ :—ಎಲೈ ಮಹಾನುಭಾವನಾದ ಪುಷ್ಕರನೆ ! ಸಕಲ ಮನುಷ್ಯರಿಗೂ, ಇತರರಿಗೂ ಹಿತಕರವಾಗುವಂತಹ ವಾಸ್ತುವಿದ್ಯೆಯೆಂಬುವುದಾವುದುಂಟೋ ಅದನ್ನೀಗ ನನಗೆ ತಿಳಿಸಿ ಕೃತಾರ್ಥನನ್ನಾಗಿ ಮಾಡಬೇಕಯ್ಯಾ !

೨. ಪುಷ್ಕರನು ಉತ್ತರ ಕೊಡುತ್ತಾನೆ :—ಒಂದು ಮನೆಯನ್ನು ಕಟ್ಟಬೇಕಾಗಲಿ, ಒಂದು ದೇವಸ್ಥಾನವನ್ನು ಕಟ್ಟಬೇಕಾಗಲಿ ಶುಭಲಕ್ಷಣಗಳಿಂದ ಲಕ್ಷಿತವಾದ ಭೂಮಿಯನ್ನು ಮೊದಲು ಚೆನ್ನಾಗಿ ಪರೀಕ್ಷಿಸಬೇಕು. ಆಭೂಮಿಯ ಲಕ್ಷಣವನ್ನೀಗ ತಿಳಿಸುತ್ತೇನೆ. ಕೇಳು. ಈ ರೀತಿ ಆರಿಸಿಕೊಳ್ಳತಕ್ಕ ನಿವೇಶನವು ಪೂರ್ವೋತ್ತರ ಭಾಗಗಳಲ್ಲಿ ಸಮವಾಗಿಯೂ, ಒಂದೇ ವಾಟವಾಗಿಯೂ ಇರಬೇಕು. ಈ ಪೂರ್ವೋತ್ತರ ಭಾಗಗಳು ನಾಲ್ಕು ಬೀದಿಗಳೂ ಸೇರಿದ ಚೌಕವಾಗಿರಬೇಕು. ದಕ್ಷಿಣ ಭಾಗದಲ್ಲಿ ಸ್ವಲ್ಪ ದಿಣ್ಣೆ (ಎತ್ತರ) ಯಾಗಿರಬೇಕು.

ನ ತಥಾ ಶಕಟಚ್ಛಿನ್ನಾಂ ನಾನ್ಯತ್ಯೋಯಪರಿಪ್ಲುತಾಂ ।
ವಲ್ಮೀಕಮೂಷಿಕಾವಾಸಶ್ವಭ್ರಕಂಟಕಿತೈರ್ದ್ರುಮೈಃ ॥ ೩ ॥

ವಿಹೀನಾಂ ಮೃದುಸಂಸ್ಪರ್ಶಾಂ ಕಠಿನಾಂ ಚಾಪ್ಯನೂಷರಾಂ ।
ನ ತಥಾ ಯವಸಂಸ್ಥಾನಾಂ ನೇಭವಜ್ರೋಪಮಾಂ ತಥಾ ॥ ೪ ॥

ನ ಶೂರ್ಪಕೂರ್ಮಸಂಸ್ಥಾನಾಂ ಶಕ್ತಿಹೀನಾಂ ತಥೈವ ಚ ।
ಸಂಪೂರ್ಯಮಾಣಾಂ ಕೃಮಿಭಿಸ್ತಥಾದಿಕಮೃದಂ ಶುಭಾಂ ॥ ೫ ॥

ಗರ್ಭೇ ಚ ಕುಸುಮಂ ಯಸ್ಯಾಂ ನ ಮ್ಲಾನಿಮುಪಗಚ್ಛತಿ ।
ನ ನಿರ್ವಾಣಮವಾಪ್ನೋತಿ ಯಸ್ಯಾಂ ದೀಪಶ್ಚ ಭಾರ್ಗವ ॥ ೬ ॥

ಉದಕಂ ಚ ತಥಾ ಯಸ್ಯಾಂ ಶೀಘ್ರಂ ರಾಮ ನ ಜೀರ್ಯತೇ ।
ಸಾ ಪ್ರಶಸ್ತಾ ಕ್ಷಿತಿಸ್ತಸ್ಯಾಂ ನಿವೇಶಂ ಕಾರಯೇದ್ಬುಧಃ ॥ ೭ ॥

---

೩. ಅಲ್ಲಿ ಮರಗಿಡಗಳು ಬೆಳದಿರಕೂಡದು. ಜೌಗು ಭೂಮಿಯಾಗಿರಬಾರದು. ಇಲೀ ಹುತ್ತ (ಬೀಟಿ), ಹಾವಿನ ಹುತ್ತಗಳಿರುವ ಸ್ಥಳವಾಗಕೂಡದು. ಹಳ್ಳ ಪ್ರದೇಶವಾಗಿರಕೂಡದು. ಮುಳ್ಳು ಪೊದೆಗಳಾಗಲೀ, ಮುಳ್ಳುಗಿಡಗಳಾಗಲಿ ಅಲ್ಲಿ ಬೆಳೆದಿರಕೂಡದು.

೪. ಶಾನೇ ಮೃದುವಾಗಿಯಾಗಲೀ, ಘಟ್ಟಿಯಾಗಿಯಾಗಲೀ ಚೌಳು ಭೂಮಿಯಾಗಿಯಾಗಲೀ ಇರಕೂಡದು. ಅದು ಗದ್ದೆ ಹೊಲಗಳಾಗಿರಬಾರದು. ವಜ್ರದಂತೆ ಕಠಿನವಾಗಿ ಇರಬಾರದು.

೫. ಶೂರ್ಪಕೂರ್ಮ ಸಂಸ್ಥೆಯಾಗಿರಕೂಡದು. ಶಕ್ತಿಹೀನವಾಗಿರಕೂಡದು. ಕ್ರಿಮಿಗಳಿಂದ ವ್ಯಾಪ್ತ (ಗೆಜ್ಜಲು ನೆಲ) ವಾಗಿರಬಾರದು. ಗೆಜ್ಜಲುಮಣ್ಣು ರಾಶಿ ರಾಶಿಯಾಗಿ ಬಿದ್ದಿರಬಾರದು.

೬. ನೆಲ ಟೊಳ್ಳಾಗಿ ಕುಸಿದು ಬೀಳುವಂತಿರಬಾರದು. ಘಟ್ಟಿ ನೆಲವಾಗಿರಬೇಕು. ಆ ಸ್ಥಳದಲ್ಲಿ ದೀಪವನ್ನಿಟ್ಟರೆ ಅದು ತಟ್ಟನೆ ಆರಿಹೋಗುವಂತಿರಕೂಡದು.

೭. ನೀರು ಸುರಿದರೆ ಅದನ್ನು ಸರಕ್ಕನೆ ಹೀರುವ ನೆಲವಾಗಿರಬಾರದು. ಈ ಪ್ರಕಾರವಾದ ಲಕ್ಷಣಗಳಿಂದ ವ್ಯಾಪ್ತವಾದ ಭೂಮಿಯನ್ನಾರಿಸಿಕೊಂಡು ಆ ಪ್ರದೇಶದಲ್ಲಿ ಮನೆಯನ್ನು ಕಟ್ಟುವುದು ಒಳ್ಳೆಯದು.

ಶ್ವೇತಾ ರಕ್ತಾ ತಥಾ ಪೀತಾ ಕೃಷ್ಣಾ ಚೈವ ಯಥಾಕ್ರಮಂ ।
ವಿಪ್ರಾದೀನಾಂ ಪ್ರಶಸ್ತಾ ಸ್ಯಾನ್ಮೃತ್ತಿಕಾ ಚ ತತೋ ದ್ವಿಜ ॥ ೮ ॥
ಘೃತಾಸೃಗನ್ನಮದ್ಯಾನಾಂ ತುಲ್ಯಗಂಧಾ ತಥೈವ ಚ ।
ಮಧುರಾ ಚ ಕಷಾಯಾ ಚ ಅಮ್ಲೋಷಣರಸಾ ತಥಾ ॥ ೯ ॥
ಕುಶೈಃ ಶರೈಸ್ತಥಾ ಕಾಶೈರ್ದೂರ್ವಾಭಿರ್ಯಾ ಚ ಸಂಭೃತಾ ।
ಪರೀಕ್ಷ್ಯ ಯತ್ನತೋ ಭೂಮಿಂ ತಿಥಿನಕ್ಷತ್ರಸಂಪದಾ ॥ ೧೦ ॥
ಸಂಪೂಜ್ಯ ಬ್ರಾಹ್ಮಣಾನ್ಪೂರ್ವಂ ನಿಶ್ಶಲ್ಯಾಂ ತಾಂ ತು ಕಾರಯೇತ್ ।
ಖಾತಪೂರ್ವಂ ತತಃ ಕೃತ್ವಾ ದೇವಭಾಗಾಂಶ್ಚ ಕಲ್ಪಯೇತ್ ॥ ೧೧ ॥

---

೮. ಬಿಳುಪಾಗಿರುವ ಭೂಮಿಯಲ್ಲಿ ಬ್ರಾಹ್ಮಣಾಗ್ರಹಾರಗಳನ್ನು ಕಟ್ಟಬೇಕು. ಕೆಂಪು (ಕೆಬ್ಬೆ) ನೆಲದಲ್ಲಿ ಅರಸುಗಳ ಮನೆಗಳನ್ನು ಕಟ್ಟಬೇಕು. ಹಳದೀ ಛಾಯೆಯುಳ್ಳ ನೆಲದಲ್ಲಿ ವೈಶ್ಯರ ಮನೆಗಳನ್ನು ಕಟ್ಟಬೇಕು. ಕಪ್ಪು ನೆಲದಲ್ಲಿ ಶೂದ್ರರ ಮನೆಗಳನ್ನು ಕಟ್ಟಬೇಕು.

೯. ಬ್ರಾಹ್ಮಣರು ಕಟ್ಟುವ ನಿವೇಶನದಲ್ಲಿ ಬೆಣ್ಣೇ ಕಾಸಿದ ತುಪ್ಪದಂತೆ ಘಮ ಘಮವೆಂದು ವಾಸನೆಯಿರಬೇಕು. ಕ್ಷತ್ರಿಯರು ಕಟ್ಟುವ ನೆಲದಲ್ಲಿ ರಕ್ತದ ವಾಸನೆಯಿರಬೇಕು. ವೈಶ್ಯರು ಕಟ್ಟುವ ನಿವೇಶನಗಳ ಕಡೆಯಿಂದ ಅನ್ನದ ವಾಸನೆ ಬರುತ್ತಿರಬೇಕು. ಶೂದ್ರರು ಕಟ್ಟುವ ಮನೆಗಳ ನೆಲವು ಮದ್ಯವಾಸನೆಯಿಂದ ಕೂಡಿರಬೇಕು. ಈ ನಾಲ್ಕು ವಿಧ ಭೂಮಿಗಳನ್ನು ತೋಡಿದರೆ ಬರುವ ಭಾವಿಯ ನೀರು ಸಿಹಿ, ಚೌಳು (ಉಪ್ಪು), ಹುಳಿ, ಒಗರು ರಸಗಳ ರುಚಿಯನ್ನು ಹೊಂದಿರಬೇಕು.

೧೦. ಬ್ರಾಹ್ಮಣರ ನಿವೇಶನಗಳಲ್ಲಿ ದರ್ಭೆ ಬೆಳೆದಿರಬೇಕು. ಕ್ಷತ್ರಿಯರ ಭೂಮಿಯಲ್ಲಿ ಶರ, ವೈಶ್ಯಶೂದ್ರರ ನಿವೇಶನಗಳಲ್ಲಿ ನೊದೆಹುಲ್ಲು—ಹುಲ್ಲುಗಳು ಬೆಳೆದಿರಬೇಕು. ಇಂತಹ ಭೂಮಿಯನ್ನು ಆಯಾ ವರ್ಣಾಶ್ರಮದ ಜನರು ಚೆನ್ನಾಗಿ ಪರೀಕ್ಷೆ ಮಾಡಿ ಅಲ್ಲಿ ಪ್ರಯತ್ನದಿಂದ ನಿವೇಶನಗಳನ್ನು ವಿಂಗಡಿಸಿಕೊಳ್ಳಬೇಕು.

೧೧. ಶುಭಕರವಾದ ತಿಥಿ ನಕ್ಷತ್ರಗಳಿಂದ ಕೂಡಿದ ಒಂದು ಒಳ್ಳೆಯ ಮುಹೂರ್ತವನ್ನು ನೋಡಿಸಿ, ಆ ದಿವಸ ಅಲ್ಲಿಗೆ ಬ್ರಾಹ್ಮಣರನ್ನು ಕರೆಯಿಸಿ ಅವರನ್ನು ಪೂಜೆಮಾಡಿ (ದಾನಮಾನಗಳಿಂದ ಉಪಚರಿಸಿ) ಆ ನೆಲದಲ್ಲಿರುವ ಗಿಡಗೆಂಟೆ, ಕಸಕಡ್ಡಿ, ಮುಂತಾದ ಕಶ್ಮಲಗಳನ್ನು ಶೋಧಿಸಿದ ಬಳಿಕ, ಆ ಸ್ಥಳದಲ್ಲಿ ಮೊದಲು ದೇವರ ಮನೆಗೆ ಜಾಗವನ್ನು ಮಾಡಿ ಅಲ್ಲಿಗೆ ಅಡಿಪಾಯವನ್ನು ಹಾಕುವುದಕ್ಕಾಗಿ ಗುದ್ದಲಿಯಿಂದ ಆ ಜಾಗವನ್ನು ಅಗೆಯಬೇಕು. (ಪಾಯವನ್ನು ತೋಡಬೇಕೆಂದರ್ಥ.)

**ಚತುಃಷಷ್ಟಿಪದಂ ಕೃತ್ವಾ ವಾಸ್ತುಪೂರ್ವಂ ಯಥಾವಿಧಿ ।**
**ಚತುಃಷಷ್ಟಿವಿಭಾಗೇನ ಕಲ್ಪಯಿತ್ವಾ ಸಮಂತತಃ ॥ ೧೨ ॥**

**ಏಕೈಕಂ ತು ಗೃಹಂ ತತ್ರ ತಥೈವ ಪರಿಕಲ್ಪಯೇತ್ ।**
**ಯಸ್ಮಾತ್ಪುರವಿಭಾಗೇನ ದ್ವಾರನ್ಯಾಸಃ ಪ್ರಕೀರ್ತಿತಃ ॥ ೧೩ ॥**

**ಅತಃ ಪರಂ ಪ್ರವಕ್ಷ್ಯಾಮಿ ದೇವಭಾಗಾನ್ಯಥಾವಿಧಿ ।**
**ಮಧ್ಯೇ ಚತುಷ್ಪದಃ ಸ್ವಾಮೀ ಬ್ರಹ್ಮಾ ಶುಭಚತುರ್ಮುಖಃ ॥ ೧೪ ॥**

**ಪ್ರಾಕ್ತಥಾ ವಿಗ್ರಹಃ ಸ್ವಾಮೀ ಕಥಿತಶ್ಚ ತಥಾsರ್ಯಮಾ ।**
**ದಕ್ಷಿಣೇನ ವಿವಸ್ವಾಂಶ್ಚ ಮಿತ್ರಃ ಪಶ್ಚಿಮತಃ ಸ್ಥಿತಃ ॥ ೧೫ ॥**

**ಉದಕ್ಪೃಥ್ವೀಧರಶ್ಚೈವ ವಿಕೋಣೇಷ್ವಥ ಮೇ ಶೃಣು ।**
**ವಿಕೋಣೇ ಶಿವದೈವತ್ಯೇ ಕಾಮುಪಕ್ಷಾವುಭೌ ಮತೌ ॥ ೧೬ ॥**

---

೧೨. ಯಥಾವಿಧಿಯಾಗಿ ವಾಸ್ತುಪುರುಷನನ್ನು ಸ್ಥಾಪಿಸಲಿಕ್ಕಾಗಿ ಅರವತ್ತು ನಾಲ್ಕು ಅಡಿ ಜಾಗವನ್ನು ವಿಂಗಡಿಸಿಕೊಳ್ಳಬೇಕು. ಹೀಗೆಯೇ ಸುತ್ತಲೂ ಎಲ್ಲಾ ಕಡೆಯಲ್ಲೂ ಕಟ್ಟುವ ವಿಭಾಗಗೃಹಗಳು ಒಂದೊಂದೂ ಅರವತ್ತನಾಲ್ಕು ಅಡಿ ಪ್ರಮಾಣ ವಿರಬೇಕು.

೧೩. ಪ್ರತಿಯೊಂದು ಮನೆಯನ್ನೂ ಹೀಗೆಯೇ ಕಟ್ಟಬೇಕು. ಊರು ಎಷ್ಟು ದೊಡ್ಡದಾಗಿದೆಯೋ ಅದಕ್ಕೆ ತಕ್ಕಂತಹ ಪುರದ್ವಾರ (ಗೋಪುರ)ವನ್ನು ಕಟ್ಟಿಸಬೇಕು.

೧೪. ಇನ್ನು ಮುಂದೆ ಊರಿನೊಳಗೆ ಕಟ್ಟಬೇಕಾದ ದೇವಾಲಯ ವಿಭಾಗಗಳ ಕ್ರಮವನ್ನು ಹೇಳುತ್ತೇನೆ. ದೇವಸ್ಥಾನದ ಮಧ್ಯದಲ್ಲಿ ಚತುರ್ಮುಖ ಬ್ರಹ್ಮನ ವಿಗ್ರಹವು ನಾಲ್ಕಡಿ ಇರಬೇಕು.

೧೫. ಪೂರ್ವಭಾಗದಲ್ಲಿ ಅದೇ ರೀತಿ ಅರ್ಯಮಸ್ವಾಮಿಯ ಪ್ರತಿಮೆಯೂ ಪ್ರತಿಷ್ಠಿತವಾಗಿರಬೇಕು. ದಕ್ಷಿಣದಲ್ಲಿ ವಿವಸ್ವಂತನೂ, ಪಶ್ಚಿಮದಲ್ಲಿ ಮಿತ್ರನೂ ಇರಬೇಕು.

೧೬. ಉತ್ತರದಿಕ್ಕಿನಲ್ಲಿ ಪೃಥ್ವೀಧರ ವಿಗ್ರಹವಿರಬೇಕು. ಇನ್ನು ವಿಕೋಣ (ವಿದಿಕ್ಕು)ಗಳಲ್ಲಿ ಇರಬೇಕಾದ ವಿಗ್ರಹಗಳಾವುವೆಂದರೆ;—ವಿಕೋಣದಲ್ಲಿ ಕಾಮುದಕ್ಷ ರೆಂಬ ಹೆಸರಿನ ಇಬ್ಬರು ದೇವತೆಗಳ ವಿಗ್ರಹವಿರಬೇಕು.

ಸಾವಿತ್ರೀ ಸವಿತಾರೌ ತು ತಥಾಽಗ್ನೇಯೇ ಪ್ರಕೀರ್ತಿತೌ ।
ತಥಾ ನೈಋುತಿಕೋಣೇ ತು ಜಯೇಂದ್ರೌ ರಾಮ ಕೀರ್ತಿತೌ ॥ ೧೭ ॥

ಭದ್ರವ್ಯಾಧೀ ತು ವಾಯವ್ಯೇ ಕಥಿತೌ ಭೃಗುನಂದನ ।
ದೇವತಾನಾಂ ತಥೈತಾಸಾಂ ಭೂಯೋ ಬಾಹ್ಯೇ ತು ಮಂಡಲೇ ॥ ೧೮ ॥

ಪೂರ್ವಾದಿಷು ಯಥಾ ದಿಕ್ಷು ದೇವತಾಸ್ತಾನ್ನಿಬೋಧ ಮೇ ।
ಮಹೇಂದ್ರಶ್ಚ ರವಿಸ್ಸತ್ಯೋ ಭೃಶಃಪ್ರಾಗ್ರಾಮ ಕೀರ್ತಿತಾಃ ॥ ೧೯ ॥

ಗೃಹಕ್ಷತೋ ಯಮೋ ಭೃಂಗೋ ಗಂಧರ್ವಶ್ಚೈವ ಯಾಮ್ಯತಃ ।
ಭಲ್ಲಾಟಶ್ಚ ತಥಾ ಸೋಮ ಅದಿತಿರ್ಧನದಸ್ತಥಾ ॥ ೨೦ ॥

ಉತ್ತರೇಣ ಸ್ಮೃತಾ ದೇವಾ ವಿಕೋಣೇಷ್ವಥ ಮೇ ಶೃಣು ।
ದಿತಿರೀಶೌ ಮೇಘಜಯೌ ಶಿವಕೋಣೇ ಪ್ರಕೀರ್ತಿತೌ ॥ ೨೧ ॥

---

೧೭. ಆಗ್ನೇಯದಿಕ್ಕಿನಲ್ಲಿ ಸಾವಿತ್ರೀ ಸವಿತೃದೇವತೆಗಳಿಬ್ಬರೂ ಇರಬೇಕು. ನೈಋುತ್ಯದಿಗ್ಭಾಗದಲ್ಲಿ ಜಯನೂ ಇಂದ್ರರೂ ಇರಬೇಕು.

೧೮. ವಾಯುವ್ಯದಿಕ್ಕಿನಲ್ಲಿ ಭದ್ರನೂ-ಕಾಳಿ (ವ್ಯಾಧಿ)ಯೂ ಇರಬೇಕು. ಈರೀತಿ ಇದುವರೆಗೆ ಹೇಳಿದ ದೇವತೆಯರೆಲ್ಲರ ಹೊರವಳಯ (ಮಂಡಲ)ದಲ್ಲಿ ಪೂರ್ವಾದಿ ದಿಕ್ಕುಗಳಲ್ಲಿರಬೇಕಾದ ದೇವತೆಗಳ ಹೆಸರನ್ನು ಹೇಳುತ್ತೇನೆ.

೧೯. ಪೂರ್ವದಿಕ್ಕಿನಲ್ಲಿ ಮಹೇಂದ್ರ, ರವಿ, ಸತ್ಯ, ಭೃಗು (ಭೃಶ) ದೇವತೆಗಳ ವಿಗ್ರಹವಿರಬೇಕು, ಗೃಹಪಾಲಕ, ಯಮ, ಭೃಂಗ, ಗಂಧರ್ವರ ವಿಗ್ರಹಗಳು ದಕ್ಷಿಣ ದಿಕ್ಕಿನಲ್ಲಿರಬೇಕು.

೨೦-೨೧. ಭಲ್ಲಾಟ, ಸೋಮ, ಅದಿತಿ, ಧನದರ ವಿಗ್ರಹಗಳು ಪಶ್ಚಿಮ ದಿಕ್ಕಿನಲ್ಲಿರಬೇಕು. ಉತ್ತರದಿಕ್ಕು ಮತ್ತು ವಿಕೋಣದಿಕ್ಕಾದ ಈಶಾನ್ಯದಿಕ್ಕಿನಲ್ಲಿ ದಿತಿ, ಈಶ್ವರ, ಮೇಘ, ಜಯ ಇವರ ವಿಗ್ರಹಗಳಿರಬೇಕು.

ವ್ಯೋಮಾಗ್ನೀ ಪೂಷವಿತಥೌ ಶಿಖಿಕೋಣೇ ಚ ಭಾರ್ಗವ।
ಮೃಗಪಿತ್ರೀಶದೌವಾರಿ ಸುಗ್ರೀವಾಶ್ಚೈವ ನೈಋತೇ ॥ ೨೨ ॥

ರೋಗಾನಾಯುಶ್ಚ ನಾಗಶ್ಚ ಮುಖ್ಯಾಶ್ಚಾನಿಲದಿಕ್ಸ್ಥಿತಾಃ ।
ತತೋಽಪಿ ಬಾಹ್ಯತಶ್ಚಾಷ್ಟೌ ಶೃಣುಷ್ವ ಗದತೋ ಮಮ ॥ ೨೩ ॥

ಅಷ್ಟಾವಷ್ಟೌ ವಿನಿರ್ದಿಷ್ಟಾ ದೇವಾದಿಕ್ಷು ವಿದಿಕ್ಷು ಚ ।
ಆದ್ಯಂತೌ ತುತಯೋರ್ದೇವೌ ಪ್ರೋಕ್ತಾವಥಗ್ರಹೇಶ್ವರೌ ॥ ೨೪ ॥

ಪರ್ಜನ್ಯಃ ಪ್ರಥಮೋ ದೇವೋ ದ್ವಿತೀಯಶ್ಚ ಕರಗ್ರಹಃ ।
ಮಹೇಂದ್ರರವಿಸತ್ಯಾಶ್ಚ ಭೃಶೋಽಥ ಗಮನಸ್ತತಃ ॥ ೨೫ ॥

---

೨೨. ಆಗ್ನೇಯಕೋಣದಲ್ಲಿ ಆಕಾಶ, ಅಗ್ನಿ, ಪೂಷ, ವಿತಥರ ವಿಗ್ರಹಗಳಿರಬೇಕು. ನೈಋತ್ಯದಿಕ್ಕಿನಲ್ಲಿ ಮೃಗ, ಪಿತೃ, ಈಶ, ದ್ವಾರಪಾಲಕ, ಸುಗ್ರೀವರುಗಳ ವಿಗ್ರಹಗಳಿರಬೇಕು.

೨೩. ವಾಯುವ್ಯದಿಕ್ಕಿನಲ್ಲಿ ರೋಗ, ಆಯು, ನಾಗ, ಅಶ್ವಿನೀ ದೇವತೆಗಳ ವಿಗ್ರಹಗಳಿರಬೇಕು. ಈರೀತಿ ಸ್ಥಾಪಿತವಾದ ಬಳಿಕ ಈ ದೇವತೆಗಳಿಗಿಂತ ಆಚೆ ಮತ್ತೊಂದು ಹೊರವಲಯ (ಮಂಡಲ)ದಲ್ಲಿರಬೇಕಾದ ವಿಗ್ರಹಗಳ ಹೆಸರನ್ನೀಗ ಹೇಳುತ್ತೇನೆ, ಕೇಳು.

೨೪. ಈ ಹೊರವಳಯದ ಎಂಟು ದಿಕ್ಕುಗಳಲ್ಲಿಯೂ ವಿದಿಕ್ಕುಗಳಲ್ಲಿಯೂ ಸಹ ಎಂಟೆಂಟು ವಿಗ್ರಹಗಳಿರಬೇಕು. ಪ್ರತಿಯೊಂದು ಆದ್ಯಂತ ದೇವತೆಗಳೂ ಗ್ರಹದೇವತೆಗಳೂ ಮುಂದೆ ಹೇಳಲ್ಪಡುತ್ತವೆ.

೨೫. ಮೊದಲಿನಿಂದ ಆ ದೇವತೆಗಳ ಹೆಸರನ್ನು ಹೇಳುತ್ತ ಬರುತ್ತೇನೆ, ಕೇಳು. ಪರ್ಜನ್ಯ, ಕರಗ್ರಹ, ಮಹೇಂದ್ರ, ಸೂರ್ಯ, ಸತ್ಯ, ಭೃಶ, ಗಮನ ;

ಪವನಶ್ಚ ಮಹಾಭಾಗಾಃ ಪೂರ್ವೇಣೈತೇ ಪ್ರಕೀರ್ತಿತಾಃ ।
ಪುಷ್ಯೋಽಥ ತ್ರಿತುದಶ್ಚೈವ ತಥೈವ ಚ ಗೃಹರ್ಕ್ಷತಃ ॥ ೨೬ ॥

ಯಮೋ ಭೃಶಶ್ಚ ಗಂಧರ್ವೋ ಮೃಗೋಽಥ ಪಿತರಸ್ತಥಾ ।
ದಕ್ಷಿಣೇನ ವಿನಿರ್ದಿಷ್ಟಾ ದೇವಾ ಭೃಗುಕುಲೋದ್ವಹ ॥ ೨೭ ॥

ದೌವಾರಿಕಶ್ಚ ಸುಗ್ರೀವಃ ಪುಷ್ಪದಂತಸ್ತಥಾ ಸುರಃ ।
ವರುಣಸ್ತು ತಥಾ ಯಕ್ಷೋ ರೋಗಃ ಶೋಷಸ್ತಥೈವ ಚ ॥ ೨೮ ॥

ಪಶ್ಚಿಮೇನ ವಿನಿರ್ದಿಷ್ಟಾ ದೇವಾ ದಾನವನಾಶನಾಃ ।
ನಾಗರಾಜಸ್ತಥಾ ಮುಖ್ಯೋ ಭಲ್ಲಾಟಶ್ಚ ತಥಾ ಶಶೀ ॥ ೨೯ ॥

ಅದಿತಿಶ್ಚ ಕುಬೇರಶ್ಚ ನಾಗಶ್ಚಾಥ ಹುತಾಶನಃ ।
ಏತೇ ದೇವಾ ವಿನಿರ್ದಿಷ್ಟಾಸ್ತಥಾ ಚೋತ್ತರತೋ ದ್ವಿಜ ॥ ೩೦ ॥

---

೨೬. ಮತ್ತು ಪವನ, ಈ ದೇವತೆಗಳೆಲ್ಲರೂ ಪೂರ್ವದಿಕ್ಕಿನಲ್ಲಿರಬೇಕು. ಬಳಿಕ ಪ್ರದಕ್ಷಿಣಾಕಾರವಾಗಿ ದಕ್ಷಿಣಭಾಗದಲ್ಲಿ ತ್ರಿಮೂರ್ತಿಗಳೂ, ಗ್ರಹನಕ್ಷತ್ರಗಳೂ.

೨೭. ಯಮ, ಭೃಶ, ಗಂಧರ್ವ, ಮೃಗ, ಪಿತೃಗಳೂ ಸಹ ಇರಬೇಕು. ಇನ್ನು ಮುಂದೆ ಪಶ್ಚಿಮದಿಕ್ಕಿನಲ್ಲಿರಬೇಕಾದ ದೇವತೆಗಳನ್ನು ಹೇಳುತ್ತೇನೆ.

೨೮. ದ್ವಾರಪಾಲಕ, ಸುಗ್ರೀವ, ಪುಷ್ಪದಂತ, ವರುಣ, ಯಕ್ಷ ಮುಂತಾದ ದೇವತೆಗಳನ್ನು ಪಶ್ಚಿಮದಿಕ್ಕಿನಲ್ಲಿ ಪ್ರತಿಷ್ಠಿಸಿದ ಅನಂತರ,

೨೯-೩೦. ದಾನವನಾಶನರಾದ ದೇವತೆಗಳೂ ನಾಗರಾಜನೂ, ಭಲ್ಲಾಟನೂ, ಇಂದ್ರನೂ, ಅದಿತಿ, ಕುಬೇರ, ನಾಗ, ಯಜ್ಞೇಶ್ವರ ಮುಂತಾದ ದೇವತೆಗಳು ಉತ್ತರ ದಿಕ್ಕಿನಲ್ಲಿರಬೇಕೆಂದು ಹೇಳಲ್ಪಟ್ಟಿದೆ.

ಏತೇಷಾಮೇವ ದೇವಾನಾಂ ಭಾಗೇ ದ್ವಾರಾಣಿ ಕಾರಯೇತ್ ।
ಶುಭಾನಿ ತೇಷು ವಕ್ಷ್ಯಾಮಿ ಶೇಷಾಣಿ ಪರಿವರ್ಜಯೇತ್ ॥ ೩೧ ॥

ಮಹೇಂದ್ರಸೋಮದ್ವೈವತ್ಯೌ ಪೂರ್ವತಃ ಶುಭದೌ ಸ್ಮೃತೌ ।
ಗೃಹರ್ಕ್ಷತಶ್ಚ ಪುಷ್ಪಶ್ಚ ತಥಾ ದಕ್ಷಿಣತಃ ಶುಭೌ ॥ ೩೨ ॥

ಸುಗ್ರೀವಃ ಪುಷ್ಪದಂತಶ್ಚ ಶುಭೌ ಪಶ್ಚಿಮತೋ ದ್ವಿಜ ।
ಭಲ್ಲಾಟಃ ಸೋಮದೇವಶ್ಚ ದ್ವಾರೇ ಶ್ರೇಷ್ಠೌ ತಥಾ ಹ್ಯುದಕ್ ॥ ೩೩ ॥

ದ್ವಾತ್ರಿಂಶಚ್ಚ ಬಹಿರ್ದೇವಾಸ್ತಥಾಂತ್ರದ್ವಾದಶ ಸ್ಮೃತಾಃ ।
ಮಧ್ಯೇ ಬ್ರಹ್ಮಾ ತಥಾ ಪ್ರೋಕ್ತ ಏವಂ ತೇ ಪಿಂಡದೇವತಾಃ ॥ ೩೪ ॥

ಚತ್ವಾರಿಂಶದ್ವಿನಿರ್ದಿಷ್ಟಾಸ್ತಥಾ ಪಂಚ ಚ ಭಾರ್ಗವ ।
ವಿನ್ಯಸ್ಯಾಜಿರಮೇವಾದೌ ಚತುಷ್ಷಷ್ಟಿಪದಂದ್ವಿಜ ॥ ೩೫ ॥

---

೩೧. ಈಗ ಮೇಲೆ ಹೇಳಿದ ಎಲ್ಲಾ ದಿಕ್ಕಿನಲ್ಲಿರುವ ದೇವತೆಗಳಿಗೂ ಬೇರೆ ಬೇರೆಯಾಗಿಯೇ ಬಾಗಿಲುಗಳನ್ನು ಮಾಡಿಸಬೇಕು. ಈರೀತಿ ಬಾಗಿಲು ಮಾಡಿಸುವಾಗ ಆ ಬಾಗಿಲು ಯಾವ ಯಾವ ದಿಕ್ಕಿನಲ್ಲಿರಬೇಕೆಂಬ ವಿಷಯವನ್ನೀಗ ಹೇಳುತ್ತೇನೆ.

೩೨. ಮಹೇಂದ್ರ ಮತ್ತು ಸೋಮ ದೇವತೆಗಳಿಗೆ ಪೂರ್ವದಿಕ್ಕಿನ ಬಾಗಿಲು ಶ್ರೇಷ್ಠ. ಗೃಹನಕ್ಷತ್ರ ಮತ್ತು ಪುಷ್ಪವಿಗ್ರಹಗಳಿಗೆ ದಕ್ಷಿಣದಿಕ್ಕಿನ ಬಾಗಿಲು ಶ್ರೇಷ್ಠ.

೩೩. ಸುಗ್ರೀವ-ಪುಷ್ಪದಂತರುಗಳಿಗೆ ಪಶ್ಚಿಮದಿಕ್ಕಿನ ಬಾಗಿಲು ಶ್ರೇಷ್ಠ. ಭಲ್ಲಟ ಮತ್ತು ಚಂದ್ರ ದೇವತೆಗಳಿಗೆ ಉತ್ತರದಿಕ್ಕಿನ ಬಾಗಿಲು ಬಹಳ ಶ್ರೇಷ್ಠವೆಂದು ತಿಳಿಯಬೇಕು.

೩೪. ಈರೀತಿ ಹೊರವಳಯದಲ್ಲಿರಬೇಕಾದ ದೇವತೆಗಳು ಮೂವತ್ತೆರಡು ಮಂದಿ. ಒಳವಳಯದಲ್ಲಿರಬೇಕಾದ ದೇವತೆಗಳು ಹನ್ನೆರಡು.

೩೫. ಇದರಲ್ಲಿ ದೇವತಾವಿಭಾಗದಿಂದ ಗೃಹಕರ್ಮಗಳು ಹೇಳಲ್ಪಡುತ್ತವೆ. ಮಧ್ಯದಲ್ಲಿ ಬ್ರಹ್ಮ, ಸುತ್ತಲೂ ಮೇಲೆ ವಿವರಿಸಿದ ನಲವತ್ತನಾಲ್ಕು ಇತರ ದೇವತೆಗಳು ಗುಂಡಾಗಿರಬೇಕು.

**ತತ್ರ ದೇವವಿಭಾಗೇನ ಗೃಹಕರ್ಮ ವಿಧೀಯತೇ ।**
**ಚಂದ್ರಸುಗ್ರೀವಪರ್ಜನ್ಯ ಸತ್ಯೇಂದ್ರಾರ್ಯಮವಾರುಣೇ ॥ ೩೬ ॥**

**ಭಗವತ್ಸಂಗ್ರಹಂ ಕುರ್ಯಾದ್ಯಥಾಸಂಸ್ಥಾನತೋ ದ್ವಿಜ ।**
**ಸೂರ್ಯಾನ್ತರಿಕ್ಷಸತ್ಯಾಗ್ನಿಭಾಗೇಷು ಚ ಮಹಾನಸಂ ॥ ೩೭ ॥**

**ವಾಯ್ವಂತರಿಕ್ಷಸುಗ್ರೀವ ಭಲ್ಲಾಟಪಿತೃದೈವತೇ ।**
**ಗಂಧರ್ವಪುಷ್ಪದಂತಾಖ್ಯೇ ಭಾಗೇ ಕೂಪಂ ತು ಕಾರಯೇತ್ ॥ ೩೮ ॥**

**ಏಕವೃಕ್ಷಾಧಿಕಂ ತತ್ರ ತಥಾ ಕುರ್ಯಾದ್ದ್ವಿಜೋತ್ತಮ ।**
**ಅಥವಾ ದಿಗ್ವಿಭಾಗೇನ ಗೃಹಕರ್ಮ ವಿಧೀಯತೇ ॥ ೩೯ ॥**

---

೩೬-೩೭. ಈ ದೇವತೆಗಳೆಲ್ಲರ ಲೆಖ್ಖವನ್ನೂ ಸೇರಿಸಿದರೆ ನಲವತ್ತೈದಾಗುತ್ತದೆ. ಇವಕ್ಕೆಲ್ಲಾ ಜಾಗವನ್ನು ಸರಿಯಾಗಿ ವಿಂಗಡಿಸಿಕೊಂಡು, ಅರವತ್ತನಾಲ್ಕಡಿ ಜಾಗವನ್ನು ಇದಕ್ಕಾಗಿ ಬಿಟ್ಟುಕೊಂಡು ಯಥಾ ಸಂಸ್ಥಾನ (ತುದಿ) ರೀತಿಯಿಂದ ಗೃಹ ವಿಭಾಗಗಳನ್ನು ರಚಿಸಬೇಕು. ಸೂರ್ಯ, ಅಂತರಿಕ್ಷ, ಸತ್ಯಾಗ್ನಿಗಳ ವಿಭಾಗ ಸ್ಥಾನದಲ್ಲಿ ಆಗ್ನೇಯ ದಿಕ್ಕಿನಲ್ಲಿ ಅಡಿಗೆಯ ಮನೆಯನ್ನು ಕಟ್ಟಬೇಕು.

೩೮. ವಾಯು, ಆಕಾಶ, ಸುಗ್ರೀವ, ಭಲ್ಲಟ, ಪಿತೃದೈವತಾವಿಭಾಗಗಳ ಸ್ಥಾನದಲ್ಲಿ ಮತ್ತು ಗಂಧರ್ವ ಪುಷ್ಪದಂತಾಖ್ಯರ ಭಾಗದಲ್ಲೂ ಸಹ ಭಾವಿಯನ್ನು ತೋಡಬೇಕು.

೩೯. ಆ ಜಾಗದಲ್ಲಿ (ಅದರ ಸುತ್ತ) ಒಂದು ಮರಕ್ಕಿಂತ ಹೆಚ್ಚಾಗಿ ಮರಗಳನ್ನು ನೆಡಬೇಕು. ಈಗ ಮೇಲೆ ಹೇಳಿದ ಮೇರೆ ದೇವತಾವಿಭಾಗಗಳನ್ನು ಮಾಡದೆ ಬರೀ ಮನೆಯನ್ನು ಕಟ್ಟುವ ಸಂದರ್ಭದಲ್ಲಿ ಅನುಸರಿಸಬೇಕಾದ ಕ್ರಮವನ್ನೀಗ ಹೇಳುತ್ತೇನೆ. (ಇದುವರಿಗೆ ಮೇಲೆ ಹೇಳಿದ ರೀತಿಯಲ್ಲಿ ಯಥಾಶಾಸ್ತ್ರೀಯವಾಗಿ ಬೇರೆ ಬೇರೆ ದೇವತೆಗಳನ್ನು ಬೇರೆ ಬೇರೆ ಅಂತರ್ಬಹಿರ್ಮಂಡಲಗಳನ್ನು ವಿಸ್ತಾರವಾಗಿ ರಚಿಸಿಕೊಂಡು, ಅದರಂತೆ ದೇವಾಲಯಗಳನ್ನು ವಿಭಾಗಿಸಿ ಅದರ ಮಧ್ಯದಲ್ಲಿ ವಿಸ್ತಾರವಾಗಿ ಮನೆ ಕಟ್ಟುವುದರಿಂದ ಬಹಳ ಕ್ಲೇಶಕರವಾಗಬಹುದೆಂದು ಭಾವಿಸಿ ಸಾಮಾನ್ಯ ರೀತಿಯಾಗಿ ಮನೆಯನ್ನು ಕಟ್ಟುವ ಕ್ರಮವನ್ನೀಗ ಹೇಳುತ್ತಾರೆ.)

**ಐಶಾನ್ಯಾಂ ದೇವತಾವೇಶ್ಮ ತಥಾऽಗ್ನೇಯ್ಯಾಂ ಮಹಾನಸಂ ।**
**ಅಗ್ನ್ಯಾಗಾರಂ ಚ ತತ್ರೈವ ಭ್ರಮಂ ನೈಋತಕೇ ತಥಾ ॥ ೪೦ ॥**

**ಕೋಷ್ಠಾಗಾರಾಯುಧಾಗಾರೌ ವಾಯವ್ಯಾಂ ಚ ತಥಾ ಸ್ಮೃತೌ ।**
**ಕೂಪಾದಿಸ್ಥೋದಕಂ ಶಸ್ತಂ ದಿಕ್ಷು ಚೈವೋತ್ತರಾಸು ಚ ॥ ೪೧ ॥**

**ಅನ್ಯಾಸು ಗರ್ಹಿತಂ ರಾಮ ಪ್ರಯತ್ನೇನ ವಿವರ್ಜಯೇತ್ ।**
**ಪುರಾಣಂ ನವಮಿಶ್ರಂ ತು ದಾರುವೇಶ್ಮನಿ ವರ್ಜಯೇತ್ ॥ ೪೨ ॥**

**ಸಕುಡ್ಯಂ ಪರಕುಡ್ಯಂ ಚ ನೈವ ಕಾರ್ಯಂ ವಿಜಾನತಾ ।**
**ವಿನಾರ್ಕಚಂದ್ರಗ್ರಹಣಂ ದ್ವಾರಸಂಪರಿವರ್ತನಂ ॥ ೪೩ ॥**

---

೪೦. ಈಶಾನ್ಯ ದಿಕ್ಕಿನಲ್ಲಿ ದೇವರಮನೆ, ಆಗ್ನೇಯ ದಿಕ್ಕಿನಲ್ಲಿ ಅಡಿಗೇಮನೆ ಮತ್ತು ಅದರ ಪಕ್ಕದಲ್ಲೇ ಅಗ್ನಿಹೋತ್ರದ ಮನೆ, ಹಾಗೆಯೇ ಪ್ರದಕ್ಷಿಣೆಯಾಗಿ ಯಮ ನಿಋುತಿ ದಿಗ್ಭಾಗಗಳಲ್ಲಿ ಕಣಜ ಮತ್ತು ಆಯುಧಶಾಲೆಗಳು.

೪೧. ವಾಯುವ್ಯ ದಿಕ್ಕಿನಲ್ಲಿ ಅಥವಾ ಉತ್ತರ ದಿಕ್ಕಿನಲ್ಲಿ ಭಾವಿಯನ್ನು ತೋಡಿ ಅದರ ನೀರನ್ನು ಬಳಸಿದರೆ ಬಹಳ ಒಳ್ಳೆಯದು. ಪಶ್ಚಿಮ ದಿಕ್ಕಿನಲ್ಲಿ ಅಥವಾ ವಾಯುವ್ಯ ದಿಕ್ಕುಗಳಲ್ಲಿ ಹಿತ್ತಲು, ಭಾವಿ, ಬಚ್ಚಲ ಮನೆಗಳು ಇರುವುದು ಈಗಲೂ ರೂಢಿಯಲ್ಲಿ ಬಂದಿದೆ. ಇದೇ ಕ್ರಮವು ಶಾಸ್ತ್ರೀಯವೆಂದರಿಯಬೇಕು.

೪೨. ಮೇಲೆ ಹೇಳಿದ ಕ್ರಮವನ್ನು ಬಿಟ್ಟರೆ ಇನ್ನಾವ ರೀತಿಯಲ್ಲಿ ಮನೆ ಕಟ್ಟುವುದೂ ಅಷ್ಟು ಪ್ರಶಸ್ತವಲ್ಲವೆಂದು ತಿಳಯಬೇಕಯ್ಯಾ! ಪರಶುರಾಮ! ಕಣಜಕ್ಕೆ ಉಪಯೋಗಿಸುವ ಹಲಗೆಗಳು ಹೊಸದರೊಡನೆ ಹಳೇ ಹಲಗೆಗಳು ಬೆರೆದುಕೊಂಡಿರ ಬಾರದು.

೪೩. ತನ್ನ ಮನೆಗೋಡೆ ಇನ್ನೊಬ್ಬರ ಮನೆ ಗೋಡೆಗಳನ್ನು ಬೆರಸ (ಜಂಟಿ ಮಾಡ) ಬಾರದು. ಒಂದಾವರ್ತಿ ಮನೆಗೆ ಬಾಗಿಲನ್ನಿಟ್ಟ ಮೇಲೆ ಪದೇ ಪದೇ ಆ ಬಾಗಿಲನ್ನು ಬದಲಾಯಿಸಬಾರದು. ಹಾಗೇನಾದರೂ ಬದಲಾಯಿಬೇಕಾಗಿದ್ದರೆ ಸೂರ್ಯ ಗ್ರಹಣ ಚಂದ್ರ ಗ್ರಹಣಗಳು ಬರುವ ಕಾಲವನ್ನು ನಿರೀಕ್ಷಿಸಿಕೊಂಡಿದ್ದು ಆ ಗ್ರಹಣ ಕಳೆದ ಮೇಲೆ ಬೇರೆ ಬಾಗಿಲನ್ನು ಬದಲಾಯಿಸಬಹುದು.

ವೃದ್ಧಿಕ್ಷಯೌ ನ ಕರ್ತವ್ಯೌ ಭೂಯಃ ಕರ್ಮಣಿ ವೇಶ್ಮನಃ ।
ಪ್ರಾಗುತ್ತರೇಽಥವಾಕಾರ್ಯೌ ಬ್ರಾಹ್ಮಣಾನುಮತೇ ತಥಾ ॥ ೪೪ ॥

ಬ್ರಹ್ಮಸ್ಥಾನಂ ಶುಚಿರ್ನಿತ್ಯಂ ಕಾರ್ಯಂ ಭವತಿ ಭಾರ್ಗವ ।
ನ ಪೀಡನೀಯಂ ಚತಥಾ ನಾಗದಂತಾದಿಭಿರ್ಭವೇತ್ ॥ ೪೫ ॥

ಮರ್ಮಾಣಿ ರಾಮ ಜಾನೀಯಾದ್ದೇವತಾ ಪದಸಂಧಿಷು ।
ನ ಪೀಡಯೇತ್ತಥಾ ತಾನಿ ನಾಗದಂತಾದಿಭಿರ್ದ್ವಿಜ ।
ಯೇ ದ್ರುಮಾ ಘಟಸಂಸಿಕ್ತಾಸ್ತಥಾ ಯೇ ಚ ಸಕೋಟರಾಃ ॥ ೪೬ ॥

ಹಸ್ತಿವಿದ್ಯುದ್ಧತಾ ಯೇ ಚ ದೇವತಾವೇಶ್ಮಜಾಶ್ಚ ಯೇ ।
ವಹ್ನಿಸ್ಪೃಷ್ಟಾಃ ಶ್ಮಶಾನೇ ಚ ಯೇ ಚ ಜಾತಾಶ್ಚತುಷ್ಪಥೆ ॥ ೪೭ ॥

---

೪೪. ಮನೆಯನ್ನು ಪದೇಪದೇ ಹೆಚ್ಚಿಸಿಕೊಂಡು ಕಟ್ಟುವುದಾಗಲೀ, ಪದೇ ಪದೇ ಕಿತ್ತುಕಿತ್ತು ಕಮ್ಮಿಮಾಡಿಕೊಂಡು ಕಟ್ಟುವುದಾಗಲೀ ಪ್ರಶಸ್ತವಾದುದಲ್ಲ. ಹಾಗೇನಾದರೂ ಮನೆಯ ಜಾಗವನ್ನು ಹೆಚ್ಚಿಸಿಕೊಂಡು ಕಟ್ಟಬೇಕಾದರೆ ಬ್ರಾಹ್ಮಣರ ಅನುಮತಿಯನ್ನು ಪಡೆದು ಪೂರ್ವದಿಕ್ಕಿಗಾಗಲೀ, ಉತ್ತರದಿಕ್ಕಿಗಾಗಲೀ ಜಾಗವನ್ನು ಹೆಚ್ಚಿಸಿಕೊಂಡು ಕಟ್ಟಬೇಕು. ಬೇರೆ ಮನೆಯನ್ನು ಕೊಂಡುಕೊಳ್ಳುವಾಗಲೂ ಪೂರ್ವೋತ್ತರ ವೃದ್ಧಿಯುಳ್ಳ ಗೃಹಗಳನ್ನೇ ಕೊಂಡುಕೊಳ್ಳುವುದೊಳ್ಳೆಯದು.

೪೫-೪೬. ಬ್ರಾಹ್ಮಣರ ಮನೆಗಳೂ ದೇವರ ಮನೆಗಳೂ ಒಂದೇ ಎಂದು ತಿಳಿದುಕೊಳ್ಳಬೇಕು. ಇವೆರಡು ಸ್ಥಳವೂ ಪ್ರತಿನಿತ್ಯವೂ ಶುಚಿಭೂತವಾಗಿರಬೇಕು. ದೇವ ಬ್ರಾಹ್ಮಣರ ಮನೆಗಳಿಗೆ ಯಾರೂ ಯಾವಾಗಲೂ ಉಪಹತಿಯನ್ನುಂಟುಮಾಡ ಬಾರದು. ಆನೆಗಳನ್ನು ಕರೆದುಕೊಂಡು ಬಂದು ಅವುಗಳ ಕೊಂಬಿನಿಂದ ದೇವ ಬ್ರಾಹ್ಮಣರ ಮನೆಗಳ ಗೋಡೆಗಳನ್ನು ಮೀಟಿಸಿ ಕೆಡವಿಸಿಬಿಡಬಾರದು.

೪೭-೪೮. ಇನ್ನು ಮುಂದೆ ಮನೆಗಳನ್ನು ಕಟ್ಟಿಸುವಾಗ ಉಪಯೋಗಿಸ ಬೇಕಾದ ಮರಗಳ ಲಕ್ಷಣವನ್ನು ತಿಳಿಸುತ್ತೇನೆ. ಯಾವ ಮರಗಳು ಘಟ ಸಂಸಿಕ್ತ ವಾಗಿರುವುವೋ, ಯಾವ ಮರ (ದಿಮ್ಮಿ) ಗಳಿಗೆ ಪೊಟರೆಗಳಿರುವುವೋ. ಯಾವ ಮರವನ್ನು ಆನೆಗಳು ಮುರಿದು ಕೆಡವಿಬಿಟ್ಟಿರುವುವೋ, ಮಿಂಚಿನ ಏಟಿಗೆ ಸಿಕ್ಕಿ ಯಾವ ಮರಗಳು ಬೆಂದುಹೋಗಿರುವುವೋ, ದೇವಸ್ಥಾನದೊಳಗೆ ಯಾವ ಮರಗಳಿರುವುವೋ,

ರೋಪವೃಕ್ಷಾಶ್ಚ ಯೇ ಕೇಚಿನ್ನ ತೇ ಶಸ್ತಾಃ ಕಥಂಚನ ।
ವೃಕ್ಷಸ್ಯ ಮಹತೀಂ ಪೂಜಾಂ ಕೃತ್ವಾ ತದ್ವಾಸಕಸ್ಯ ಚ ॥ ೪೮ ॥

ಮಧ್ವಾಜ್ಯದಿಗ್ಧೇನ ತಥಾ ಛಿಂದ್ಯಾತ್ಪರಶುನಾ ದ್ವಿಜಃ ।
ಪೂರ್ವೋತ್ತರೇಣ ಪತನಂ ಪ್ರಶಸ್ತಂ ಪರಿಕೀರ್ತಿತಂ ॥ ೪೯ ॥

ಶೇಷಾಸು ಪತನಂ ದಿಕ್ಷು ಗರ್ಹಿತಂ ದ್ವಿಜಸತ್ತಮ ।
ವಟಾಶ್ವತ್ಥೌ ಚ ನಿರ್ಗುಂಡೀ ಕೋವಿದಾರ ವಿಭೀತಕೌ ॥ ೫೦ ॥

ಪುಷ್ಯಕಂ ಶಾಲ್ಮಲಿಂಚೈವ ಪಲಾಶಂ ಚ ವಿಸರ್ಜಯೇತ್ ।
ವಿಸ್ತಾರದ್ವಿಗುಣೋಚ್ಛ್ರಾಯಂ ದ್ವಾರಂ ಕಾರ್ಯಂ ತಥಾ ಗೃಹೇ ॥ ೫೧ ॥

---

ಯಾವ ಮರಗಳು ಬೆಂಕಿಯಿಂದ ಸುಟ್ಟುಹೋಗಿರುವುವೋ, ಯಾವ ಮರಗಳು ಶ್ಮಶಾನದಲ್ಲಿರುವುವೋ, ಮತ್ತದಾವ ಮರಗಳು ನಾಲ್ಕು ಬೀದಿ ಕೂಡಿದ ಜಾಗದಲ್ಲಿರುವುವೋ, ಹುಟ್ಟಿಹಾಕಿ ಬೆಳಸಿದ ಮರಗಳಾವುವೋ ಇಂತಹ ಲಕ್ಷಣಗಳುಳ್ಳ ಮರಗಳೆಲ್ಲವೂ ಮನೆ ಕಟ್ಟಲು ಉಪಯೋಗಿಸ್ಪಡತಕ್ಕುವಲ್ಲ.

೪೯. ಮೇಲೆ ವಿವರಿಸಿದ ಲಕ್ಷಣವಿರುವ ಮರಗಳನ್ನು ಬಿಟ್ಟು ಬೇರೆ ಸಲ್ಲಕ್ಷಣಗಳುಳ್ಳ ಸಾಗುವಾನಿ, ಹೊನ್ನೆ, ಮತ್ತಿ ಮುಂತಾದ ಮರಗಳನ್ನು ಅರಣ್ಯದಿಂದ ಕಡಿದು ತರಬೇಕು. ಈ ರೀತಿ ಮರಗಳನ್ನು ಕಡಿಯುವಾಗ ಅಥವಾ ಕುಯ್ಯುವಾಗ ಮೊದಲು ಆ ಮರಗಳಿಗೆ ಮತ್ತು ಅದು ಬೆಳೆದಿರುವ ಜಾಗಕ್ಕೆ ಮಹತ್ತಾಗಿ ಪೂಜೆಯನ್ನು ಮಾಡಬೇಕು. ಆಮೇಲೆ ಆ ಮರವನ್ನು ಕುಯ್ಯುವ ಸ್ಥಳಕ್ಕೆ ಜೇನುತುಪ್ಪ ಅಥವಾ ತುಪ್ಪವನ್ನು ಸವರಿ ಆ ಜಾಗಕ್ಕೆ ಕೊಡಲಿ ಹಾಕಿ ಕಡಿಯಬೇಕು,

೫೦. ಆ ಮರವನ್ನು ಕಡಿದೊಡನೆ ಆ ಮರವು ಪೂರ್ವ ದಿಕ್ಕಿಗಾಗಲೀ ಉತ್ತರ ದಿಕ್ಕಿಗಾಲೀ ಬೀಳಬೇಕು. ಬಾಕಿ ದಿಕ್ಕುಗಳಿಗೆ ಬಿದ್ದ ಮರವು ಪ್ರಶಸ್ತವಾದುದಲ್ಲ. ಇನ್ನು ಎಂತಹ ಮರಗಳು ಶ್ರೇಷ್ಠವೆಂಬುದನ್ನು ವಿವರಿಸುತ್ತೇನೆ.

೫೧. ವಟ, ಅಶ್ವತ್ಥ, ನಿರ್ಗುಂಡೀ, ಕೋವಿದಾರ, ವಿಭೀತಕ, ಪುಷ್ಯಕ, ಶಾಲ್ಮಲೀ, ಪಲಾಶ ಮುಂತಾದ ದೇವವೃಕ್ಷಗಳನ್ನು ಬಿಟ್ಟು, ಉಳಿದ ಯಾವ ಮರಗಳನ್ನಾದರೂ ಉಪಯೋಗಿಸಬಹುದು. ಮನೆಯ ಮುಂಭಾಗದ ಬಾಗಿಲನ್ನು ಉದ್ದವಾಗಿಯೂ ಎತ್ತರವಾಗಿಯೂ ಮಾಡಿಸಿ ವಿಸ್ತಾರವಾಗಿರಿಸಬೇಕು.

ನಿಧಿಪ್ರಥಮಕೋ ನಾಗಸಹಂಸಸಾರ ಸ ಚಿತ್ರಿತಂ ।
ದ್ವಾರಕೋ ನೇತ್ರಮಧ್ವಾಭ್ರ ಚತುಷ್ಪಥಸುರಾಲಯೈಃ ॥ ೫೨ ॥

ಕೂಪೈಕವೃಕ್ಷರಥ್ಯಾಭಿರ್ವಿದ್ಧಂ ದ್ವಾರಂ ವಿವರ್ಜಯೇತ್ ।
ದ್ವಿಗುಣಾತ್ತುಗೃಹೋಚ್ಛ್ರಾಯಾದ್ಭೂಮಿಂ ತ್ಯಕ್ತ್ವಾ ನ ದೋಷಭಾಕ್ ॥೫೩॥

ಆಧ್ಮಾತಂ ಸಕಟಂ ರಾಮ ತಥಾಪ್ಸು ಪ್ಲವಿ ಯದ್ಭವೇತ್ ।
ದ್ವಾರಂ ನ ತತ್ಪ್ರಶಂಸಂತಿ ತಸ್ಮಾತ್ತು ಪರಿವರ್ಜಯೇತ್ ॥ ೫೪ ॥

ಪುರದ್ವಾರಾದಿಕಂ ಶ್ರೀದಂ ಭಾಗೇಷು ಚ ತಥಾ ಭ್ರಮುಂ ।
ಧನದಸ್ಯ ತಥಾ ಭಾಗೈರ್ಧನವೇಶ್ಮ ವಿಧೀಯತೇ ॥ ೫೫ ॥

ಇಂದ್ರಸತ್ಯೇಂದ್ರಸುಗ್ರೀವ ದ್ವಾರಮನ್ಯತ್ರ ಕಾರಯೇತ್ ।
ಸ್ತಂಭಂ ತು ನವಧಾ ಕೃತ್ವಾ ಪೀಠೇಭಾಗಂ ತು ಕಾರಯೇತ್ ॥ ೫೬ ॥

---

೫೨. ಆ ಮರದ ಚೌಕಟ್ಟಿನಲ್ಲಿ ಚಿತ್ರಕೆಲಸ ಮಾಡಿರಬೇಕು, ನವನಿಧಿಗಳು, ಆನೆಗಳು, ಹಂಸಪಕ್ಷಿಗಳು, ಸಾರಸಪಕ್ಷಿಗಳನ್ನು ಕೆತ್ತಿಸಬೇಕು. ಈರೀತಿ ಬಾಗಿಲು ಚೌಕಟ್ಟುಗಳನ್ನು ಹೊಸದಾಗಿ ಮಾಡಿಸಬೇಕು. ಅಥವಾ ಯಾರಿಂದಾಗಲೀ ಒಳ್ಳೇ ಸ್ಥಳದಿಂದ ತರಿಸಬೇಕು. ಚತುಷ್ಪಥದಲ್ಲಿದ್ದ ಬಾಗಿಲನ್ನಾಗಲೀ, ದೇವಸ್ಥಾನಕ್ಕಿಟ್ಟಿದ್ದ ಬಾಗಿಲನ್ನಾಗಲಿ, ಭಾವಿಗೆ ಇಡಿಸಿದ್ದ ಬಾಗಿಲನ್ನಾಗಲೀ ಮನೆಗೆ ಇಡಿಸಕೂಡದು.

೫೩-೫೪. ಗೃಹೋಚ್ಛ್ರಾಯಕ್ಕಿಂತ ದ್ವಿಗುಣವಾದ ಭೂಮಿಯನ್ನು ಬಿಟ್ಟು ಬಾಗಿಲನ್ನಿಡಿಸಿದರೆ ದೋಷವಿಲ್ಲ. ಕದಕ್ಕೆ ಉಪಯೋಗಿಸಿದ ಮರವು ಸದ್ದಾಗಕೂಡದು. ನೀರಿನಲ್ಲಿ ತೇಲುವಂತಹ ಮರವಾಗಬಾರದು. ಇಂತಹ ಬಾಗಿಲುಗಳನ್ನು ಯಾರೂ ಉಪಯೋಗಿಸಕೂಡದು.

೫೫. ಊರ ಬಾಗಿಲಗಿಂತ ಇನ್ನಾವ ವಿಧವಾದ ಯಾರ ಮನೆಯ ಬಾಗಿಲೂ ದೊಡ್ಡದಾಗಿರಕೂಡದು. ಅದನ್ನು ಬಿಟ್ಟರೆ ಖಜಾನೆಯ ಬಾಗಿಲು ಅಗಲವಾಗಿಯೂ ವಿಸ್ತಾರವಾಗಿಯೂ ಇರಬೇಕು.

೫೬. ಇದನ್ನು ಬಿಟ್ಟರೆ ಇಂದ್ರಸತ್ಯ-ಇಂದ್ರ ಸುಗ್ರೀವ ದೇವತಾಗೃಹಗಳ ಬಾಗಿಲುಗಳು ಅದಕ್ಕಿಂತ ಸಣ್ಣದಾಗಿರಬೇಕು. ಇತ್ಯಾದಿ ದೇವತಾಮಂದಿರಗಳಲ್ಲಿ ಒಂಬತ್ತು ಕಂಬ (ನವರಂಗ)ಗಳುಳ್ಳ ಹಜಾರವಿರಬೇಕು.

ಭಾಗೇ ಕುಂಭಸ್ತಥಾ ಕಾರ್ಯೋ ಭಾಗೇ ಪದ್ಮಂ ನಿವೇಶಯೇತ್ ।
ಸ್ತಂಭಂ ಮಾರ್ಗತ್ರಯೇ ಕಾರ್ಯಂ ಅಷ್ಟಾಸ್ರಮಥ ವರ್ತುಲಂ ॥ ೫೭ ॥

ತಸ್ಯೋಪರಿ ತಥಾ ಭಾಗೇ ಭವತ್ಯಾಮಲಸಾರಕಂ ।
ಭಾಗದೋಷೇ ತುಲಾ ಕಾರ್ಯಾ ಭಾಗೇಕಾರ್ಯಾ ತಥಾ ತುಲಾ ॥ ೫೮ ॥

ಏಕಶಾಲಚತುಶ್ಶಾಲೌ ಕರ್ತವ್ಯೌ ಸ್ವೇಚ್ಛಯಾ ಸದಾ ।
ಪೂರ್ವೋತ್ತರಾಭಿಶ್ಶಾಲಾಭಿರ್ಹೀನಂ ಕಾರ್ಯಂ ದ್ವಿಶಾಲಕಂ ॥ ೫೯ ॥

ಅನ್ಯಥಾ ಗರ್ಹಿತಂ ರಾಮ ಸುತಾರ್ಥಕ್ಷಯದಂ ಮತಂ ।
ಅಷ್ಟಹಸ್ತೋಚ್ಛ್ರಯಾದೂರ್ಧ್ವಂ ಭೂಮಿಕಾಂ ತು ನ ಕಾರಯೇತ್ ॥೬೦॥

---

೫೭. ಒಂಬತ್ತು ಕುಂಬಗಳ ಕೆಳಗೂ ಪೀಠ(ಹಂಸ)ವಿರಬೇಕು. ಅವು ಗುಂಡಾಗಿರಬೇಕು. ಅದರಲ್ಲಿ ಪದ್ಮಗಳನ್ನು ಕೆತ್ತಿಸಬೇಕು. ಈ ಕಂಭಗಳನ್ನು ಅಷ್ಟಾಸ್ರವಾಗಿಯಾಗಲೀ ವರ್ತುಲಾಕಾರವಾಗಿಯಾಗಲೀ ನೆಡಿಸಬೇಕು.

೫೮. ಹಂಸಪಾದದ ಮೇಲೆ ಕಂಭಗಳನ್ನು ನಿಲ್ಲಿಸುವಾಗ ನೆಲ್ಲೀಕಾಯಿ ರಸವನ್ನು ಹಿಂಡಿ ಅದರ ಮೇಲೆ ನಿಲ್ಲಿಸಬೇಕು. ಈ ಒಂಬತ್ತು ಕಂಬಗಳೂ ಒಂದೇ ಅಳತೆಯಾಗಿರಬೇಕು. (ಸ್ವಲ್ಪವೂ ಹೆಚ್ಚುಕಡಿಮೆ ಇರಕೂಡದು). ಒಂದು ವೇಳೆ ಸರಿಯಾಗಿಲ್ಲವೆಂದು ತೋರಿದರೆ ಗಜಕಡ್ಡಿ ತೆಗೆದುಕೊಂಡು ಸರಿಯಾಗಿ ಒಂದೇ ಅಳತೆ ಇರುವಂತೆ ಅಳೆಯಬೇಕು. ಅದು ಏಕಶಾಲವಾಗಿಯಾಗಲೀ ಚತುಶ್ಶಾಲವಾಗಿಯಾಗಲೀ ಇರಬಹುದು.

೫೯. ಚತುಶ್ಶಾಲವನ್ನು ಸಂಜವನವೆಂದು ಅಮರದಲ್ಲಿ ಹೇಳಿದಾರೆ. ಅದರರ್ಥವೇನೆಂದರೆ;—ನಾಲ್ಕು ಕಡೆಗೂ ಕೈಸಾಲೆ ಕಟ್ಟಿ ಮಧ್ಯದಲ್ಲಿ ಅಂಗಳವನ್ನು ಬಿಟ್ಟಿರುವ (ತೊಟ್ಟಿ) ಮನೆಯೆಂದು ಹೇಳಬಹುದು. ಈ ಏಕಶಾಲಾ ರೂಪವಾಗಿಯಾಗಲೀ ಚತುಶ್ಶಾಲಾರೂಪವಾಗಿಯಾಗಲೀ ಅಥವಾ ತಮ್ಮ ಇಚ್ಛಾನುಸಾರವಾಗಿಯಾಗಲೀ ಕಟಿಕೊಳ್ಳಬಹುದು.

೬೦. ಪೂರ್ವೋತ್ತರವಾದ ಶಾಲೆಗಳಿಗಿಂತ ದ್ವಿಶಾಲೆ (ಅಂಗಳವು)ಯು ಹೀನವಾಗಿರಬಾರದು. ಹಾಗೆ ಮಾಡುವುದು ಪ್ರಶಸ್ತವಲ್ಲ. ಇದು ಮಕ್ಕಳುಳ್ಳವರಿಗೂ ಹಣಗಾರರಾದವರಿಗೂ ಅಪ್ರಶಸ್ತವೆನಿಸಿಕೊಳ್ಳುವುದು. ಎಂಟು ಮೊಳಕ್ಕಿಂತ ಹೆಚ್ಚಾಗಿ ಚಿತ್ರವನ್ನು ಬರೆಸಕೂಡದು.

ವಾಸ್ತೋಶ್ಛ್ರಾಯಂ ನ ಕರ್ತವ್ಯಂ ತಥಾ ಹಸ್ತಶತಾಧಿಕಂ ।
ಆರಂಭಂ ಸಶಿಲಾನ್ಯಾಸಂ ದ್ವಾರಸ್ತಂಭೋಚ್ಛ್ರಯಾವುಭೌ ॥ ೬೧ ॥

ತಥಾಽರೋಹಣನಿಷ್ಪತ್ತೀ ತಥಾ ವಾಸ್ತುಪ್ರವೇಶನಂ ।
ಸರ್ವಾಣ್ಯೇತಾನಿ ಕಾರ್ಯಾಣಿ ದಿವಸೇ ರಾಮ ಪೂಜಿತೇ ॥ ೬೨ ॥

ಶೇಷೇಷ್ವೇತೇಷು ಕರ್ತವ್ಯಂ ದೇವಬ್ರಾಹ್ಮಣಪೂಜನಂ ।
ಕಾಲಜ್ಞಪೂಜನಂ ಚೈವ ಸ್ಥಪತೀನಾಂ ಚ ಭಾರ್ಗವ ॥ ೬೩ ॥

ಪ್ರಾವೃಟ್ಕಾಲೇ ನ ಕರ್ತವ್ಯಂ ವಾಸ್ತುಕರ್ಮ ವಿಜಾನತಾ ।
ಕೃಷ್ಣಪಕ್ಷತ್ರಿ ಭಾಗಾಂತೇ ಶುಕ್ಲಾದ್ಯೇ ಚ ಭೃಗೂತ್ತಮ ॥ ೬೪ ॥

---

೬೧. ವಾಸ್ತುಪುರುಷ (ಗೃಹದೇವತೆ)ನ ಚಿತ್ರವು ಒಂದು ನೂರು ಮೊಳಕ್ಕಿಂತ ಹೆಚ್ಚಾಗಿರಕೂಡದು. ಮುಂದುಗಡೆ ಬಾಗಿಲಿನಲ್ಲಿ (ಜಗಲಿ) ಎರಡು ದೊಡ್ಡದಾದ ಎತ್ತರವಾದ ಕಲ್ಲುಕಂಬಗಳನ್ನು ನಿಲ್ಲಿಸಬೇಕು.

೬೨. ಮನೆಯ ಎತ್ತರವು ಬೀದಿಯ ಅಳತೆಗಿಂತ ಹೆಚ್ಚಾಗಿರಬೇಕು. ಮನೆಗೆ ಪ್ರವೇಶಿಸುವಾಗ ಸುಲಭವಾಗಿ ಹತ್ತುವಂತೆ ಮೆಟ್ಟಿಲುಗಳನ್ನಿಡಬೇಕು. ಇತ್ಯಾದಿ ಕೆಲಸ ಗಳೆಲ್ಲವನ್ನೂ ಕ್ರಮವಾಗಿ ವಾಸ್ತುಪುರುಷನಿಗೆ ಪೂಜೆಮಾಡಿ ಆರಂಭಿಸಬೇಕು. (ಇದಕ್ಕಾಗಿಯೇ ನೆಲುವನ್ನು ಇಡುವಾಗ, ಹದಿ ತೆಗೆಯುವಾಗ ಕಂಬಗಳನ್ನೆತ್ತುವಾಗ ಲೆಲ್ಲಾ ಪೂಜೆಮಾಡಿ ಎತ್ತುವ ಸಂಪ್ರದಾಯವು ಇಂದಿಗೂ ನಡೆದುಬಂದಿದೆ.)

೬೩. ಇನ್ನು ಉಳಿದ ಕೆಲಸಗಳೇನೆಂದರೆ ;—ದೇವಬ್ರಾಹ್ಮಣರಿಗೆ ಪೂಜೆ ಮಾಡುವುದು, ಜೋಯಿಸರಿಗೆ ಪೂಜೆಮಾಡುವುದು, ಸ್ಥಪತಿ (ಬಡಗಿ)ಗಳನ್ನು ಪೂಜಿಸು ವುದು ; ಇವುಗಳೆಲ್ಲಾ ಮನೆಕಟ್ಟುವಾಗ ಮಾಡುವ ಅವಶ್ಯ ಕರ್ತವ್ಯಗಳು.

೬೪. ಮನೆ ಕಟ್ಟುವುದಕ್ಕಿಂತ ಮುಂಚೆ ಒಳ್ಳೇ ಮುಹೂರ್ತವನ್ನು ನೋಡ ಬೇಕು. ವಾಸ್ತುಕಾರ್ಯವನ್ನು ತಿಳಿದವರು ವರ್ಷಋತುವಿನಲ್ಲಿ ಮನೆಗೆಲಸಕ್ಕೆ ಕೈಹಾಕ ಬಾರದು. ಕೃಷ್ಣಪಕ್ಷದ ಮೂರು ಭಾಗದ ಕೊನೇ ಭಾಗದಲ್ಲಿಯೂ, ಶುಕ್ಲಪಕ್ಷಾರಂಭ ವಾದಾಗಲೂ ಮನೆಗೆಲಸವನ್ನಾರಂಭಿಸಕೂಡದು.

ತಿಥಿಂ ಚತುರ್ಥೀಂ ನವಮೀಂ ವರ್ಜಯೇಚ್ಚ ಚತುರ್ದಶೀಂ ।
ಅಂಗಾರಕದಿನಂ ರಾಮ ಕರಣಂ ವಿಷ್ಟಸಂಜ್ಞಿತಂ ॥ ೬೫ ॥

ದಿವ್ಯಾಂತರಿಕ್ಷಕ್ಷಿತಿಜೈರುತ್ಪಾತೈರ್ಭಂ ಚ ಪೀಡಿತಂ ।
ಗ್ರಹೋಪಸ್ಪೃಷ್ಟಂ ಚ ತಥಾ ವ್ಯತೀಪಾತಹತಂ ಚ ಯತ್ ॥ ೬೬ ॥

ಚಂದ್ರತಾರಾನುಕೂಲೇ ಭೇ ವಾಸ್ತುಕಾರ್ಯಂ ವಿಜಾನತಾ ।
ಧ್ರುವಾಣಿ ತಾನಿ ಶಸ್ತಾನಿ ಶಾಕ್ರಂ ವೈ ನೈಋತಂ ತಥಾ ॥ ೬೭ ॥

ಸೌಮ್ಯಂ ಚ ವೈಷ್ಣವಂ ಪುಷ್ಯಂ ಪೌಷ್ಣಂ ಸಾವಿತ್ರಮೇವ ಚ ।
ಸ್ಥಿರಲಗ್ನೇ ಸ್ಥಿರಾಂಶೇ ಚ ಕರ್ತುಶ್ಚೋಪಚಯಾತ್ಮಕೇ ॥ ೬೮ ॥

---

೬೫. ಚೌತಿ, ನವಮಿ, ಚತುರ್ದಶೀ ದಿನಗಳು ಮನೇಕಟ್ಟಲು ಒಳ್ಳೇ ಲಗ್ನಗಳಲ್ಲ. ಮಂಗಳವಾರ ಆರಂಭಮಾಡಕೂಡದು. ವಿಷ್ಟಕರಣವೂ ಸಹ ಮನೆ ಕಟ್ಟಲು ಯೋಗ್ಯವಾದುದಲ್ಲ.

೬೬. ದೇವಲೋಕದಲ್ಲಿ ಉತ್ಪಾತವೊದಗಿದಾಗಲೂ, ಭೂಮ್ಯಾಕಾಶಗಳಲ್ಲಿ ಉತ್ಪಾತವುಂಟಾಗಿರುವ ಸಮಯದಲ್ಲೂ ಮನೆಯನ್ನು ಕಟ್ಟಲಾರಂಭಿಸಬಾರದು. ಗ್ರಹಶುದ್ಧಿಯಿಲ್ಲದ ದಿವಸಗಳಲ್ಲಿಯೂ, ವ್ಯತೀಪಾತದ ದಿವಸಗಳಲ್ಲಿಯೂ ಮನೆಕಟ್ಟಲು ಆರಂಭಿಸಬಾರದು.

೬೭. ವಾಸ್ತುಶಾಸ್ತ್ರವನ್ನು ಚೆನ್ನಾಗಿ ತಿಳಿದ ಬುದ್ಧಿವಂತನು. ಮನೆಯ ಯಜಮಾನನಿಗೆ ಚಂದ್ರಾತಾರಾಬಲಗಳು ಚೆನ್ನಾಗಿರುವ ಮುಹೂರ್ತವನ್ನೇ ಲಗ್ನವನ್ನು ಇಡಿಸಿ ಗೃಹನಿರ್ಮಾಣಕಾರ್ಯಕ್ಕೆ ಆರಂಭಿಸಬೇಕು. ಗೃಹನಿರ್ಮಾಣಕ್ಕೆ ಇಂದ್ರ ಮತ್ತು ನಿಋುತಿ ದೇವತಾಕವಾದ ನಕ್ಷತ್ರಗಳೂ ಧ್ರುವನಕ್ಷತ್ರಗಳೂ ಬಹಳ ಒಳ್ಳೆಯವು.

೬೮. ಸೌಮ್ಯ, ವೈಷ್ಣವ, ಪುಣ್ಯ, ಪೌಷ್ಣ, ಸಾವಿತ್ರ ನಕ್ಷತ್ರಗಳೂ ಸಹ ಶ್ರೇಷ್ಠವು. ಕರ್ತೃವಿನ ಉಪಚಯಾತ್ಮಕವಾದ ಸ್ಥಿರಲಗ್ನ ಸ್ಥಿರಾಂಶದಲ್ಲಿ ಗೃಹನಿರ್ಮಾಣಕ್ಕೆ ಆರಂಭಿಸುವುದು ಬಹಳ ಒಳ್ಳೆಯದು.

ಯಸ್ಯ ಸೌಮ್ಯಗ್ರಹಾಃ ಕೇಂದ್ರೇ ತ್ರಿಕೋಣೇ ಚಾಪಿ ಭಾರ್ಗವ ।
ಪಾಪಾಶ್ಚೋಪಚಯಸ್ಥಾನೇ ತಸ್ಮಿನ್ಕಾರ್ಯಂ ಪ್ರವೇಶನಂ ॥ ೬೯ ॥

ಕೇಂದ್ರಸ್ಥಂ ವರ್ಜಯೇತ್ಪಾಪಂ ಸರ್ವಯತ್ನೇನ ಕರ್ಮಸು ।
ಕೇಂದ್ರಂ ಸೌಮ್ಯಯುತಂ ದೇವಂ ನತು ಶೂನ್ಯಂ ಕದಾಚನ ॥ ೭೦ ॥

ಅತಃ ಪರಂ ಪ್ರವಕ್ಷ್ಯಾಮಿ ಶಿಲಾನ್ಯಾಸವಿಧಿಂ ತವ ।
ಚತುಃಷಷ್ಟಿ ಪದಂ ಕೃತ್ವಾ ಸಮೇ ಸ್ಥಾನೇ ತು ಮಂಡಲಂ ॥ ೭೧ ॥

ಕೃತ್ವಾ ತು ದೇವತಾನ್ಯಾಸಂ ತತ್ರ ಮಂಡಲಕೇ ದ್ವಿಜ ।
ಶ್ರಿಯಃ ಸಂಪೂಜನಂ ಕೃತ್ವಾ ವಾಸುದೇವಸ್ಯ ಚಾಪ್ಯಥ ॥ ೭೨ ॥

ಪೂಜನಂ ಮಂಡಲೇ ಕಾರ್ಯಂ ವಾಸ್ತುದೇವಗಣಸ್ಯ ಚ ।
ಗಂಧಾರ್ಘ್ಯಪುಷ್ಪನೈವೇದ್ಯ ಧೂಪದೀಪೈರ್ಭೃಗೂತ್ತಮ ॥ ೭೩ ॥

---

೬೯. ಯಾವ ಯಜಮಾನನ ಕೇಂದ್ರ ತ್ರಿಕೋಣಗಳಲ್ಲಿ ಸೌಮ್ಯಗ್ರಹಗಳಿರುವುವೋ, ಉಪಚಯಸ್ಥಾನದಲ್ಲಿ ಪಾಪಗ್ರಹಗಳಿರುವುವೋ ಅಂತಹ ಲಗ್ನದಲ್ಲಿ ಗೃಹ ಪ್ರವೇಶಕ್ಕೆ ಅನುಕೂಲವಾಗಿರಲಾರದು.

೭೦. ಯಾವ ಕಾರ್ಯಗಳನ್ನಾಗಲೀ ಕೇಂದ್ರಸ್ಥಾನದಲ್ಲಿ ಪಾಪಗ್ರಹಗಳಿದ್ದ ಸಮಯದಲ್ಲಿ ಮಾಡಲೇಕೂಡದು. ಅದೇ ಕೇಂದ್ರಸ್ಥಾನದಲ್ಲಿ ಸೌಮ್ಯಗ್ರಹವಿದ್ದಾಗ ಕಾರ್ಯಾರಂಭಮಾಡದೆ ಬಿಡಲೂಕೂಡದು.

೭೧. ಅಯ್ಯಾ ಪರಶುರಾಮ ! ಇನ್ನು ಮುಂದೆ ನಿನಗೆ ಶಿಲಾನ್ಯಾಸವಿಧಿಯನ್ನು ಹೇಳುತ್ತೇನೆ. ಕೇಳು, ಅರವತ್ತನಾಲ್ಕು ಅಡಿ ಪ್ರಮಾಣವುಳ್ಳ ಸಮನಾದ ಸ್ಥಳದಲ್ಲಿ ಮೊದಲು ಮಂಡಲವನ್ನು ನಿರ್ಮಾಣಮಾಡಬೇಕು.

೭೨. ಆ ಮಂಡಲ ಮಧ್ಯದಲ್ಲಿ ಶಿಲಾದೇವತೆಗಳನ್ನು ನ್ಯಾಸಮಾಡ (ಇಡ) ಬೇಕು. ಆ ಮಂಡಲದಲ್ಲಿ ಮೊದಲು ಲಕ್ಷ್ಮೀಪೂಜೆಯನ್ನೂ ಆ ಬಳಿಕ ವಾಸುದೇವನ ಪೂಜೆಯನ್ನೂ ಮಾಡಬೇಕು.

೭೩. ವಾಸುದೇವ-ಪೂಜಾ ಸಮನಂತರದೊಳ್ ವಾಸ್ತುದೇವತಾಗಣಗಳಿಗೆ ಗಂಧಾರ್ಘ್ಯ ಪುಷ್ಪ ನೈವೇದ್ಯ ಧೂಪ ದೀಪಾದಿಗಳಿಂದ ಅರ್ಚನೆಮಾಡಬೇಕು.

ತೇಷಾಂ ಸಂಪೂಜನಂ ಕೃತ್ವಾ ಸಮಾದಾಯ ಹುತಾಶನಂ ।
ಓಂಕಾರಪೂರ್ವಮಾಜ್ಯಂತು ಜುಹುಯಾಚ್ಛ್ರೀಧರಸ್ಯ ತು ॥ ೭೪ ॥

ಶ್ರಿಯಃ ಕೃತ್ವಾ ತತೋ ಹೋಮಂ ಬ್ರಹ್ಮಣಃ ಕಾರಯೇತ್ತತಃ ।
ಬ್ರಹ್ಮಾಣಂ ತಂ ಪುರಸ್ಕೃತ್ಯ ವಾಸ್ತುದೇವಗಣಸ್ಯ ಚ ॥ ೭೫ ॥

ಹೋತವ್ಯಮಾಜ್ಯಂ ಧರ್ಮಜ್ಞ ಯಸ್ಯ ದೇವಸ್ಯ ಹೂಯತೇ ।
ತತ್ಕಾಲಮಾಶು ಭಜತೇ ಲಕ್ಷಣೇಽಗ್ನೌ ದ್ವಿಜೋತ್ತಮ ॥ ೭೬ ॥

ತಸ್ಯ ದೇವಸ್ಯ ಯತ್ಸ್ಥಾನಂ ತತ್ರ ಶಲ್ಯಂ ವಿನಿರ್ದಿಶೇತ್ ।
ಶಲ್ಯಸ್ಯೋದ್ಧರಣಂ ಕಾರ್ಯಂ ರಾಮಯತ್ನೇನ ಜಾನತಾ ॥ ೭೭ ॥

---

೭೪. ಪೂಜಾಕ್ರಮಗಳೆಲ್ಲವೂ ಬೆಳೆದಮೇಲೆ ಅಗ್ನಿಯನ್ನು ಯಥಾವಿಧಿಯಾಗಿ ಪ್ರತಿಷ್ಠೆಮಾಡಬೇಕು. ಈರೀತಿ ಪ್ರತಿಷ್ಠೆಮಾಡಿ ಪೂಜೆಯಾದ ಬಳಿಕ ಶ್ರೀಧರನಿಗೆ ಓಂಕಾರಪೂರ್ವಕವಾಗಿ ಒಂದು ಆಜ್ಯಾಹುತಿಯನ್ನು ಕೊಡಬೇಕು.

೭೫. ಆ ಬಳಿಕ ಮಹಾಲಕ್ಷ್ಮಿಗೆ ಒಂದು ಆಜ್ಯಾಹುತಿಯನ್ನು ಕೊಟ್ಟು ಬ್ರಹ್ಮನಿಗೆ ವರಣಕೊಡಬೇಕು. ಬ್ರಹ್ಮನನ್ನು ಸಕಲೋಪಚಾರದಿಂದಲೂ ಪೂಜಿಸಿ ಅಗ್ನಿಯ ದಕ್ಷಿಣಭಾಗದಲ್ಲಿ ಆಸನಕೊಟ್ಟು ಕುಳ್ಳಿರಿಸಿ ವಾಸ್ತುದೇವಗಣಗಳಿಗೆಲ್ಲಾ ಅನ್ವಾಧಾನಕ್ರಮದಂತೆ ಆಜ್ಯಭಾಗದಿಂದ ಆಹುತಿಗಳನ್ನು ಕೊಡಬೇಕು.

೭೬. ಪರಶುರಾಮ ! ಕೇಳು. ನಾವು ಅಗ್ನಿಯಲ್ಲಿ ಯಾವ ದೇವತೆಯನ್ನು ಧ್ಯಾನಮಾಡಿ ಆಹುತಿಯನ್ನು ಕೊಡುತ್ತೇವೋ ಆ ಕಾಲದಲ್ಲಿ ಆ ದೇವತೆಯು ಅಗ್ನಿಯಲ್ಲಿ ತನ್ನ ಸ್ವರೂಪವನ್ನು ತೋರಿಸಿಕೊಂಡು ಆಜ್ಯಾಹುತಿಯನ್ನು ಸ್ವೀಕರಿಸುತ್ತದೆ. ನಾವು ಆಗ ಅಗ್ನಿಯನ್ನೇ ಐಕಾಗ್ರ್ಯದಿಂದ ನೋಡುತ್ತಿದ್ದರೆ ಈ ದೃಶ್ಯಲಕ್ಷಣವು ನಮ್ಮ ಮನಸ್ಸಿಗೆ ಚೆನ್ನಾಗಿ ಭಾಸವಾಗುತ್ತದೆ.

೭೭. ಯಾವ ಯಾವ ದೇವತೆಗಳಿಗೆ ಯಾವ ಯಾವ ಸ್ಥಳಗಳನ್ನು ನಿರ್ದೇಶ ಮಾಡಿ ಪೂಜಿಸುತ್ತೇವೋ ಅಲ್ಲೆಲ್ಲಾ ಒಂದು ಗೂಟವನ್ನು ಬಡಿಯಬೇಕು. ಪೂಜಾನಂತರದಲ್ಲಿ ಆಯಾಯ ಗೂಟಗಳನ್ನು ಕಿತ್ತುಬಿಡಬೇಕು.

ಮಧ್ಯೇ ಶೈಲಮಯಂ ಕುಂಭಂ ಶಂಕುಂ ಚ ಸ್ಥಾಪಯೇದ್ಬುಧಃ ।
ಐಶಾನೇ ಚ ತತಃ ಕೋಣೇ ಶಿಲಾಂ ಪೂರ್ವಂ ಪ್ರತಿಷ್ಠಯೇತ್ ॥ ೭೮ ॥

ಪ್ರದಕ್ಷಿಣಂ ತತೋ ರಾಮ ಶಿಲಾನ್ಯಾಸಂ ವಿಧೀಯತೇ ।
ಕುಂಭಸ್ಯ ಚ ಶಿಲಾನಾಂ ಚ ತತಃ ಸ್ನಾನಂ ವಿಧೀಯತೇ ॥ ೭೯ ॥

ವಟಾಶ್ವತ್ಥಕಷಾಯೇಣ ಸರ್ವೌಷಧಿಜಲೈಸ್ತತಃ ॥
ತತೋಽನುಲೇಪನಂ ಕಾರ್ಯಂ ಚಂದನೇನ ಸುಗಂಧಿನಾ ॥ ೮೦ ॥

ಆಚ್ಛಾದನಂ ತತಃ ಕಾರ್ಯಂ ವಾಸೋಭಿಃ ಕುಸುಮೈಃ ಶುಭೈಃ ।
ಧೂಪಂ ಪ್ರದೀಪಂ ನೈವೇದ್ಯಂ ತೇಷಾಂ ರಾಮ ನಿವೇದಯೇತ್ ॥ ೮೧ ॥

---

೭೮. ಎಲ್ಲಾ ದೇವತಾಶಲ್ಯಗಳ ಮಧ್ಯದಲ್ಲಿ ಒಂದು ಶೈಲಮಯ ಕುಂಭವನ್ನೂ. ಒಂದು ಶಂಕು (ಗೂಟ) ವನ್ನೂ ಸ್ಥಾಪನೆ ಮಾಡಬೇಕು. ಅನಂತರ ಈಶಾನ್ಯಕೋಣದಲ್ಲಿ ಒಂದು ಶಿಲಾಮೂರ್ತಿಯನ್ನು ಪ್ರತಿಷ್ಠಿಸಬೇಕು.

೭೯. ಆ ಬಳಿಕ ಸುತ್ತಲೂ ಪ್ರದಕ್ಷಿಣಾಕಾರವಾಗಿ ಶಿಲಾಮೂರ್ತಿಗಳನ್ನು ನ್ಯಾಸಮಾಡಬೇಕು. ಇಷ್ಟು ಕೆಲಸಮಾಡಿದ ಬಳಿಕ ಮಧ್ಯದಲ್ಲಿರುವ ಕುಂಭಕ್ಕೂ ಶಿಲೆಗಳಿಗೂ ಸ್ನಾನಮಾಡಿಸಬೇಕು.

೮೦. ಅಭಿಷೇಕ ಮಾಡಿಸಬೇಕಾದ ಜಲವು ಆಲಅರಳಿಮರಗಳ ಕಷಾಯದಿಂದಲೂ ಸರ್ವೌಷಧಿರಸಗಳಿಂದಲೂ ಮಿಶ್ರವಾಗಿರಬೇಕು. ಅಭಿಷೇಕಾನಂತರದಲ್ಲಿ ಸುಗಂಧಯುಕ್ತವಾದ ಚಂದನದಿಂದ ಅನುಲೇಪನಮಾಡಬೇಕು.

೮೧. ಆಮೇಲೆ ಸಕಲ ಶಿಲಾಮೂರ್ತಿಗಳಿಗೂ ಒಂದೊಂದು ಜೋಡಿ ವಸ್ತ್ರಗಳನ್ನು ಹೊದಿಸಬೇಕು. ಆ ಬಳಿಕ ಅಷ್ಟೋತ್ತರಗಳಿಂದಲೂ ಸಹಸ್ರನಾಮಗಳಿಂದಲೂ ನಾನಾವಿಧಪರಿಮಳಪತ್ರಪೂಜೆಯಂಗೈಯಬೇಕು. ಪೂಜಾನಂತರದಲ್ಲಿ ಆ ಸಕಲ ಶಿಲಾವಿಗ್ರಹಗಳಿಗೂ ಧೂಪದೀಪನೈವೇದ್ಯಾದಿಗಳನ್ನರ್ಪಿಸಬೇಕು.

**ದಕ್ಷಿಣಾಭಿರ್ದ್ವಿಜೇಂದ್ರಾಣಾಂ ತತಃ ಪೂಜಾ ವಿಧೀಯತೇ ।**
**ಕಾಲವಿತ್ಸ್ಥಪತೀ ಪೂಜ್ಯೌ ತತೋ ರಾಮ ವಿಜಾನತಾ　　॥ ೮೨ ॥**

**ತತೋ ಮನ್ತ್ರಂ ಜಪೇತ್ಕರ್ತಾ ಕಾಲಜ್ಞಃ ಸ್ಥಪತಿಃ ಸ್ವಯಂ ।**
**ಗೃಹಂ ಪುಷ್ಟಿಕರಂ ರಾಮ ಮುನಿವಕ್ತ್ರಾದ್ವಿನಿಸ್ಸೃತಂ　　॥ ೮೩ ॥**

**ನಂದೇ ನಂದಯ ವಾಸಿಷ್ಠೇ ವಸುಭಿಃ ಪ್ರಜಯಾ ಸಹ ।**
**ಜಯೇ ಜಯಾವಹೇ ದೇವಿ ಪ್ರಜಾನಾಂ ಜಯಮಾವಹ　　॥ ೮೪ ॥**

**ಪೂರ್ಣೇಂಗಿರಸದಾಯಾದೇ ಪೂರ್ಣಕಾಮಂ ಕುರುಷ್ವಮಾಂ ।**
**ಭದ್ರಂ ಕಶ್ಯಪದಾಯಾದೇ ಕುರು ಭದ್ರಾಂ ಮತಿಂ ಮಮ　　॥ ೮೫ ॥**

---

೮೨. ಈ ಪ್ರಕಾರವಾಗಿ ಸಕಲ ವಿಗ್ರಹಗಳಿಗೂ ಪೂಜೆ ಬೆಳೆದ ಬಳಿಕ ಬ್ರಾಹ್ಮಣರನ್ನು ಪೂಜಿಸಿ ದಕ್ಷಿಣೆಗಳನ್ನು ಕೊಡಬೇಕು. ಎಲ್ಲರಿಗಿಂತ ಮೊದಲು ಜೋಯಿಸರನ್ನೂ, ಆಮೇಲೆ ಮನೆಯನ್ನು ಕಟ್ಟಿದ ವಿಶ್ವಕರ್ಮಸ್ವರೂಪಿಯಾದ ಸ್ಥಪತಿಯನ್ನೂ ಪೂಜೆಮಾಡಿ ಸಂಭಾವನೆಕೊಡಬೇಕು.

೮೩. ಆ ಬಳಿಕ ಮನೆಯ ಯಜಮಾನನು ಮಂತ್ರ-ಪಾರಾಯಣವನ್ನು ಮಾಡಬೇಕು. ಅವನ ಜತೆಯಲ್ಲಿ ಜೋಯಿಸನೂ ಸ್ಥಪತಿಯೂ ಸಹ ಕುಳಿತುಕೊಂಡು ತಾವೂ ಸಹ ಮಂತ್ರಪಾರಾಯಣವನ್ನು ಮಾಡಬೇಕು. ಈ ಮಂತ್ರಗಳು ಗೃಹಮಂಗಳಾರ್ಥವಾದುದರಿಂದಲೂ, ಯಜಮಾನನ ಪುಷ್ಟಿಪ್ರದವಾದುದರಿಂದಲೂ ಅದನ್ನಿಲ್ಲಿ ವಿವರವಾಗಿ ಹೇಳುತ್ತೇನೆ. ಈ ಮಂತ್ರಗಳು ಸಾಮಾನ್ಯವಾದುವಲ್ಲ, ಋಷಿಗಳ ಮುಖದಿಂದ ಹೊರಬಿದ್ದುವು. ಅದನ್ನೀಗ ಮುಂದೆ ಬರೆಯುತ್ತೇನೆ.

೮೪-೯೦. ನಂದೇನಂದಯ ಎಂಬ ಮಂತ್ರಶ್ಲೋಕದಿಂದಾರಂಭಿಸಿ ೯೦ ನೇ ಶ್ಲೋಕ ಪೂರ್ತಿಯಾಗಿ ಏಳು ಶ್ಲೋಕಗಳೇ ಆ ಮಂತ್ರಗಳು. ಆ ಮಂತ್ರಗಳನ್ನು ಪಾರಾಯಣಮಾಡಬೇಕು. ಆ ಶ್ಲೋಕಾರ್ಥಗಳನ್ನೀಗ ಕನ್ನಡ ಭಾಷೆಯಲ್ಲಿ ಬರೆಯುತ್ತೇನೆ.

ಎಲೈ ವಸಿಷ್ಠಋಷಿಯ ಮಗಳಾದ ನಂದಾದೇವಿಯೇ! ನೀನೀಗ ವಾಸ್ತುಶಾಂತಿಯ ಕಾಲದಲ್ಲಿ ಇಲ್ಲಿಗೆ ಬಂದು ಈ ಮನೆಯನ್ನು ಹಣಗಳಿಂದಲೂ ಮಕ್ಕ

**ಸರ್ವಬೀಜಸಮಾಯುಕ್ತೇ ಸರ್ವರತ್ನೌಷಧೈರ್ವೃತೇ ।**
**ರುಚಿರೇ ನಂದನೇ ನಂದೇ ವಾಸಿಷ್ಠೇ ರಮ್ಯತಾಮಿಹ ॥ ೮೬ ॥**

**ಪ್ರಜಾಪತಿಸುತೇ ದೇವಿ ಚತುರಗ್ರೇ ಮಹೀಮಯೇ ।**
**ಸುಭಗೇ ಸುವ್ರತೇ ಭದ್ರೇ ಗೃಹೇ ಕಾಶ್ಯಪಿ ರಮ್ಯತಾಂ ॥ ೮೭ ॥**

**ಪೂಜಿತೇ ಪರಮಾಚಾರ್ಯೈ ರ್ಗಂಧಮಾಲ್ಯೈರಲಂಕೃತೇ ।**
**ಭವಭೂತಿಕರೀ ದೇವಿ ಗೃಹೇ ಭಾರ್ಗವಿ ರಮ್ಯತಾಂ ॥ ೮೮ ॥**

**ಅವ್ಯಂಗೇ ಚಾಕೃತೇ ಪೂರ್ಣೇ ಸುನೇತ್ರ್ಯಂಗಿರಸಃ ಸುತೇ ।**
**ಇಷ್ಟಕೇ ತ್ವಂ ಪ್ರಯಚ್ಛೇಷ್ಟಂ ಪ್ರತಿಷ್ಠಾಂ ಕಾಮಯಾಮ್ಯಹಂ ॥ ೮೯ ॥**

---

ಳಿಂದಲೂ ತುಂಬಿಸು. ಓ! ಜಯಪ್ರದಳಾದ ಜಯಾದೇವಿಯೇ! ನೀನೀ ಶಾಂತಿ ಕರ್ಮದಲ್ಲಿ ಸನ್ನಿಹಿತಳಾಗಿ ಲೋಕಕ್ಕೂ ಜನಗಳಿಗೂ ಜಯವನ್ನುಂಟುಮಾಡು. ಎಲೌ! ಆಂಗಿರಸಋಷಿಗಳ ದಾಯಭಾಗಾರ್ಹಳಾದ ಪೂರ್ಣಾದೇವಿಯೇ! ನೀನು ಬಂದು ನನ್ನನ್ನು ಪೂರ್ಣಕಾಮನನ್ನಾಗಿ ಮಾಡು. ಕಶ್ಯಪಋಷಿಗಳ ದಾಯಾದಿ ಯಾದ ಭದ್ರಾದೇವಿಯೇ! ನನ್ನ ಬುದ್ಧಿಯನ್ನು ಸರ್ವದಾ ಶುಭಕರ (ಪುಣ್ಯಕರ) ವಾಗಿರುವ ಆಲೋಚನೆಗಳಿಂದ ತುಂಬಿರುವಂತೆ ಮಾಡಮ್ಮಾ!! ಓ! ವಸಿಷ್ಠರ ಪ್ರೇಮಕುಮಾರಿಯರಾದ ರುಚಿರೆ, ನಂದನೆ, ನಂದೆಯರಿರಾ!! ನೀವೆಲ್ಲರೂ ಸರ್ವ ಬೀಜಸಮೃದ್ಧಿಯಿಂದಲೂ ಸರ್ವರತ್ನ ಸರ್ವೌಷಧಿಗಳಿಂದಲೂ ಈ ಮನೆಯು ತುಂಬಿ ರುವಂತೆ ಮಾಡಿರಿ. ಎಲೌ! ಬ್ರಹ್ಮನ ಸುಕುಮಾರಿಯಾದ ಚತುರಳಾದ ಮಹೀ ದೇವಿಯೇ! ಕಶ್ಯಪಕುಮಾರಿಯರಾದ ಸುಭಗಾ, ಸುವ್ರತಾ, ಭದ್ರಾ, ಗೃಹಾಧಿದೇವತೆ ಯರಿರಾ! ನೀವೆಲ್ಲರೂ ಈ ಮನೆಗೆ ಬಂದು ಆನಂದದಿಂದ ವಿಹರಿಸಿರಿ. ಎಲೌ! ಭೃಗುಕುಮಾರಿಯಾದ ಭಾರ್ಗವಿ (ಲಕ್ಷ್ಮಿ) ಯೇ! ನೀನು ಎಷ್ಟೋ ಮಂದಿ ಪರಮಾಚಾರ್ಯರುಗಳಿಂದಲೂ, ಅನೇಕ ಮಂದಿ ಭಕ್ತರಿಂದಲೂ, ಷೋಡಶೋಪಚಾರ ಗಳಿಂದಲೂ, ಸಹಸ್ರನಾಮ ಕುಂಕುಮಾರ್ಚನೆಗಳಿಂದಲೂ ಪೂಜಿಸಲ್ಪಟ್ಟವಳು. ನೀನು ಐಶ್ವರ್ಯಪ್ರದೆಯು. ಅಂತಹ ನೀನು ನಮ್ಮ ಮನೆಗೆ ಬಂದು ಸಂತೋಷವಾಗಿ ವಾಸಮಾಡಿಕೊಂಡಿರು. ಓ! ಪೂರ್ಣಸ್ವರೂಪಳಾದ ಆಂಗೀರಸಋಷಿಗಳ ಮಗಳಾದ ಇಷ್ಟಕಾದೇವಿಯೇ! ನನಗೆ ಲೋಕದಲ್ಲಿ ತುಂಬಾ ಪ್ರತಿಷ್ಠೆಯನ್ನು ಸಂಪಾದಿಸಬೇಕೆಂಬ ಇಷ್ಟವಿದೆ. ಇಂತಹ ನನಗೆ ಬೇಕಾದ ಈ ಇಷ್ಟವನ್ನು ನೀನು ಸಲ್ಲಿಸಬೇಕಮ್ಮಾ!!

**ದೇಶಸ್ವಾಮಿ ಪುರಸ್ವಾಮಿ ಗೃಹಸ್ವಾಮಿ ಗೃಹೇ ವಸ ।**
**ಮನುಷ್ಯಧನಹಸ್ತ್ಯಶ್ವ ಪಶುವೃದ್ಧಿಕರೀ ಭವ ॥೯೦॥**

**ಗೃಹಪ್ರವೇಶೇಽಪಿ ತಥಾ ಶಿಲಾನ್ಯಾಸಸಮೋ ವಿಧಿಃ ।**
**ಕರ್ತವ್ಯಃ ಸಕಲೋ ರಾಮಶಿಲಾನ್ಯಾಸವಿವರ್ಜಿತಃ ॥೯೧॥**

**ಪೂಜಿತಾಪರಲಕ್ಷ್ಮೀಕಂ ಹುತ್ವಾಽಗ್ನಿಂ ಚಾಪ್ಯಲಂಕೃತಂ ।**
**ಪಂಚರಂಗೇನ ಸೂತ್ರೇಣ ಬದ್ಧಪ್ರತಿಸರಂ ತಥಾ ॥೯೨॥**

**ಸಫಲೇಷು ಚ ಬಾಣೇಷು ದಿಶಾಸು ವಿದಿಶಾಸು ಚ ।**
**ಗವಾಕ್ಷಕೇಷು ಕರ್ತವ್ಯಾಶ್ಚಕ್ರಾ ರಕ್ಷೋಽಹಣಾಸ್ತಥಾ ॥೯೩॥**

---

ಇಷ್ಟಾರ್ಥಪ್ರದಳಾದೆಲೌ ಮಹಾದೇವಿಯೇ! ದೇಶಸ್ವಾಮಿಯ, ಪುರಸ್ವಾಮಿಯ, ಗೃಹ ಸ್ವಾಮಿಗಳ ಮನೆಗಳಲ್ಲೆಲ್ಲಾ ನೀನು ನಿಂತು ಮನುಷ್ಯರನ್ನೂ, ಧನವನ್ನೂ ಆನೆ ಕುದುರೆಗಳನ್ನೂ, ಹಸುಗಳನ್ನೂ ವೃದ್ಧಿಗೊಳಿಸಿ ಕಾಪಾಡಮ್ಮಾ!!

೯೧. ಶಿಲಾನ್ಯಾಸವಿಧಿಯು ಬಿಟ್ಟುಹೋದಾಗ್ಯೂ ಗೃಹಪ್ರವೇಶ (ವಾಸ್ತು ಹೋಮ) ವಿಧಿಯು ಶಿಲಾನ್ಯಾಸವಿಧಿಗೆ ಸಮನಾಗಿರುವುದರಿಂದ, ಈ ಗೃಹಪ್ರವೇಶ ಕರ್ಮ ವನ್ನು ಖಂಡಿತವಾಗಿ ಮಾಡಬೇಕು.

೯೨. ಹೀಗೆ ಮಾಡಿದರೆ ಮಹಾಲಕ್ಷ್ಮಿಯು ಪ್ರೀತಳಾಗುವಳು. ಗೃಹಪ್ರವೇಶ ಹೋಮವಾದ ಬಳಿಕ ಪಂಚರಂಗಮಯವಾದ ಸೂತ್ರ (ಹಸೀ ದಾರ)ದಿಂದ ಪ್ರತಿಸರ (ಕಂಕಣ)ವನ್ನು ಮನೆಯ ಸುತ್ತಲೂ ಕಟ್ಟಬೇಕು.

೯೩. ಮನೆಯ ಎಲ್ಲಾ ಬಾಗಿಲುಗಳ ಮೇಲೂ, ದಿಗ್ವಿದಿಕ್ಕುಗಳಲ್ಲೂ, ಕಿಟಕಿಗಳ ಮೇಲೂ ಬರುವಂತೆ ಮನೆಯ ಸುತ್ತಲೂ ಹಸೀ ನೂಲನ್ನು ಕಟ್ಟಬೇಕು. ಈರೀತಿ ಪ್ರತಿಸರವನ್ನು ಸುತ್ತಲೂ ಚಕ್ರಾಕಾರವಾಗಿ ಕಟ್ಟಿಕೊಂಡು ಹೋಗುವಾಗ ರಕ್ಷೋಘ್ನ ಸೂಕ್ತ (ರಕ್ಷೋಽಹಣ)ವನ್ನು ಪಾರಾಯಣ ಮಾಡುತ್ತಲಿರಬೇಕು.

ಸರ್ವಸ್ಯಾಸ್ಯ ತಥಾ ನ್ಯಾಸಂ ಮಂತ್ರೈ ರಕ್ಷೋಹಣೈರ್ಭವೇತ್ ।
ಗೋಪೃಷ್ಠ ವಿನ್ಯಸ್ತಕರಃ ಪ್ರವಿಶೇಚ್ಚ ಗೃಹೀ ಗೃಹಂ ॥ ೯೪ ॥

ಸ್ವನುಲಿಪ್ತಸ್ಸ್ರಖೀ ಸ್ರಗ್ವೀ ಸಪತ್ನೀಕಸ್ತಥೈವ ಚ ।
ದ್ವಿಜಪುಣ್ಯಾಹಘೋಷೇಣ ವೀಣಾವೇಣುರವೇಣ ಚ ॥ ೯೫ ॥

ಕಾಲೇ ಶುಭೇ ಕಾಲವಿದಾ ಪ್ರದಿಷ್ಟೇ
ಸತೋರಣಂ ಪೂರ್ಣಘಟಾಭಿರಾಮಂ ।
ಪ್ರವಿಶ್ಯ ಕಾಲಜ್ಞಸಮರ್ಚಿತಾನಾಂ
ಕೃತ್ವಾಽರ್ಚನಂ ತತ್ರ ಸುರೋತ್ತಮಾನಾಂ ॥ ೯೬ ॥

ಸಂಪೂಜ್ಯ ವಹ್ನಿಂ ದ್ವಿಜಪುಂಗವಾಂಶ್ಚ
ಮಾಂಗಲ್ಯಮಾಲಭ್ಯ ಚ ಭೋಜಯಿತ್ವಾ ।

---

೯೪. ಈರೀತಿ ರಕ್ಷೋಹಣಮಂತ್ರದಿಂದ ಗೃಹನ್ಯಾಸಕರ್ಮವು ಮುಗಿದ ಬಳಿಕ ಹಸುವಿನ ಬಾಲದ ಮೇಲೆ ತನ್ನ ಕೈಯಿಟ್ಟುಕೊಂಡು (ಹಸುವಿನ ಬಾಲವನ್ನು ಹಿಡಿದು ಕೊಂಡು) ಮನೆಯೊಳಕ್ಕೆ ಪ್ರವೇಶಿಸಬೇಕು.

೯೫. ಈರೀತಿ ಗೃಹವನ್ನು ಪ್ರವೇಶಿಸುತ್ತಿರುವ ಸಮಯದಲ್ಲಿ ಯಜಮಾನನು ಮೈಗೆಲ್ಲಾ ಗಂಧವನ್ನು ತೊಡೆದುಕೊಂಡಿರಬೇಕು. ತಲೆಗೆ (ಜುಟ್ಟಿಗೆ) ಹೂ ಮುಡಿದಿರ ಬೇಕು. ಹೆಂಡತಿಯು ಜತೆಯಲ್ಲಿ ಅಲಂಕಾರಮಾಡಿಕೊಂಡು ಬರಬೇಕು. ಈರೀತಿ ದಂಪತಿಗಳು ಗೃಹಪ್ರವೇಶ ಮಾಡುವ ಸಮಯದಲ್ಲಿ ಬ್ರಾಹ್ಮಣರು ಪುಣ್ಯಾಹಮಂತ್ರ ಗಳನ್ನು ಹೇಳುತ್ತಿರಬೇಕು. ವೀಣಾವೇಣುಸ್ವರಗಳಾಗುತ್ತಿರಬೇಕು. ವಂದಿಮಾಗಧರು ಹೊಗಳುತ್ತಿರಬೇಕು. ಢಕ್ಕಡಮರುಗಗಳ ಸದ್ದಾಗುತ್ತಿರಬೇಕು.

೯೬. ಮನೆಯ ಮುಂದೆ ತಳಿರು ತೋರಣಗಳು ಅಲಂಕರಿಸಲ್ಪಟ್ಟಿರಬೇಕು. ಜೋಯಿಸರು ಗೊತ್ತುಮಾಡಿದ ಮುಹೂರ್ತದಲ್ಲಿ ಯಜಮಾನನು ಪೂರ್ಣಕುಂಭವನ್ನು ಎರಡು ಕೈಗಳಿಂದಲೂ ಹಿಡಿದುಕೊಂಡು ದೇವರಮನೆಗೆ ಮೊದಲು ಪ್ರವೇಶಮಾಡ

ವಿಪ್ರಾನ್ಮಧುಕ್ಷೀರ ಘೃತೋತ್ಕಟಾನ್ನೈಃ
ಸದಕ್ಷಿಣಾಂಸ್ತಾಂಶ್ಚ ತಥಾ ವಿಸರ್ಜ್ಯ ॥ ೯೭ ॥

ಸಪ್ತಾಹಮಗ್ನಿಂ ಪರಿಚರ್ಯ ತತ್ರ
ಸಂಪೂಜ್ಯ ವಿಪ್ರಾನ್ವಿಧಿವಚ್ಚ ರಾಮ ।
ಗೃಹೇ ವಸೇತ್ಪೂಜಿತದೇವವಿಪ್ರೇ
ಶುಚೌ ಸದಾ ಸರ್ವಗುಣೋಪಪನ್ನೇ ॥ ೯೮ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಮಂ ಪ್ರತಿ ಪುಷ್ಕರಕಥಾಸು ವಾಸ್ತುವಿದ್ಯಾವರ್ಣನಂನಾಮ ಏಕೋನತ್ರಿಂಶತ್ತಮೋಽಧ್ಯಾಯಃ**

---

ಬೇಕು. ಅಲ್ಲಿ ಜೋಯಿಸರು ಹೇಳಿದ ಕ್ರಮದಂತೆ ದೇವತಾರ್ಚನೆ ಮಾಡಬೇಕು. ಔಪಾಸನೆ ಮಾಡಬೇಕು.

೯೭. ಅನೇಕ ಮಂದಿ ಬ್ರಾಹ್ಮಣರಿಗೆ ಊಟಕ್ಕೆ ಹೇಳಿ ಒಳ್ಳೇ ಉತ್ತಮರೀತಿಯ ಸಂತರ್ಪಣೆ ಮಾಡಿ ದ್ವಿಜರನ್ನು ಸಂತೃಪ್ತಿಪಡಿಸಬೇಕು. ಊಟಕ್ಕೆ ನಾನಾ ವಿಧವಾದ ಭಕ್ಷ್ಯಗಳನ್ನೂ ಪಕ್ವಾನ್ನಗಳನ್ನೂ ಮಾಡಿಸಿ ಯಥೇಚ್ಛವಾಗಿ ಬಡಿಸಬೇಕು. ಬ್ರಾಹ್ಮಣರಿಗೆ ಕೈತುಂಬಾ ದಕ್ಷಿಣೆಯನ್ನು ಕೊಡಬೇಕು.

೯೮. ಬ್ರಾಹ್ಮಣರೆಲ್ಲರೂ ತೃಪ್ತರಾಗಿ ತಮ್ಮ ತಮ್ಮ ಮನೆಗಳಿಗೆ ಹೋದ ಬಳಿಕ ಒಂದು ವಾರದವರೆಗೆ ಆ ಮನೆಯಲ್ಲಿ ಹವನಹೋಮಗಳೂ ಬ್ರಾಹ್ಮಣ ಸಮಾರಾಧನೆಯೂ ನಡೆಯಬೇಕು. ಈರೀತಿ ಇದುವರಿವಿಗೆ ನಾನು ಮೇಲೆ ವಿವರಿಸಿದ ರೀತಿಯಲ್ಲಿ ಸರ್ವಗುಣಸಮೃದ್ಧವಾದ ದೇವಬ್ರಾಹ್ಮಣಪೂಜಾವೈಭವದಿಂದೊಪ್ಪುವ ನಿರ್ಮಲವಾದ ಗೃಹದಲ್ಲಿ ಯಜಮಾನನು ವಾಸಮಾಡಿಕೊಂಡಿರಬೇಕಯ್ಯಾ! ಹೀಗೆಂದು ಪುಷ್ಕರನು ಪರಶುರಾಮನಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ
ಸಂವಾದರೂಪವಾದ ವಾಸ್ತುವಿದ್ಯಾವರ್ಣನವೆಂಬ ಹೆಸರಿನ
ಇಪ್ಪತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.

*

॥ ೩ ॥

## ಅಥ
## ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
### ತ್ರಿಂಶತ್ತಮೋಽಧ್ಯಾಯಃ

**ಪುಷ್ಕರ ಉವಾಚ**

**ಉತ್ತರೇಣ ಶುಭಃ ಪ್ಲಕ್ಷೋ ವಟಃ ಪ್ರಾಗ್ಭಾಗಪೋತ್ತಮ ।**
**ಉದುಂಬರಶ್ಚ ಯಾಮ್ಯೇನ ಸೌಮ್ಯೇನಾಶ್ವತ್ಥ ಏವ ಚ ॥ ೧ ॥**

**ಏತೇ ಕ್ರಮೇಣ ನೇಷ್ಯಂತಿ ದಕ್ಷಿಣಾದಿ ಸಮುದ್ಭವಾಃ ।**
**ಸಮೀಪಜಾತಾಶ್ಚ ತಥಾ ವರ್ಜ್ಯಾಃ ಕಂಟಕಿನೋ ದ್ರುಮಾಃ ॥ ೨ ॥**

**ವಾಮಭಾಗೇ ತಥೋದ್ಯಾನಂ ಕುರ್ಯಾದ್ವಾಸಗೃಹಾಚ್ಛುಭಂ ।**
**ವಾಪಯೇತ್ಪ್ರಾಕ್ತಿಲಾಂಸ್ತತ್ರ ಮೃಂದೀಯಾತ್ತಾಂಶ್ಚ ಪುಷ್ಪಿತಾನ್ ॥ ೩ ॥**

---

### ಮೂವತ್ತನೆಯ ಅಧ್ಯಾಯವು

೧. ಪುಷ್ಕರನು ಹೇಳುತ್ತಾನೆ:—ಬಸರೀಮರವಾದರೆ ಉತ್ತರದಿಕ್ಕಿನಿಂದ ತರಬೇಕು. ಆಲದಮರವಾದರೆ ಪೂರ್ವದಿಕ್ಕಿನಿಂದ ತರಬೇಕು. ಅತ್ತೀಗಿಡವಾದರೆ ದಕ್ಷಿಣದ ಕಡೆಯಿಂದ ತರಬೇಕು. ಅಶ್ವತ್ಥವೃಕ್ಷವಾದರೆ ಪಶ್ಚಿಮದಿಕ್ಕಿನಿಂದ ತರಬೇಕು.

೨. ಈರೀತಿ ಇವುಗಳನ್ನು ದಕ್ಷಿಣಾದಿದಿಕ್ಕುಗಳಲ್ಲಿ ಹುಟ್ಟಿರುವುದನ್ನು ನೋಡಿ ಕುಯ್ದು ಮನೆಗೆ ತರಬೇಕು. ಊರಿನ ಹತ್ತಿರವೇ ಬೆಳೆದಿರುವ ಮರವನ್ನಾಗಲೀ ಮುಳ್ಳುಮರವನ್ನಾಗಲೀ ಮನೆಗೆಲಸಕ್ಕೆ ಉಪಯೋಗಿಸಕೂಡದು.

೩. ಮರಮುಟ್ಟುಗಳ ವಿಚಾರವಾದ ಮೇಲೆ ಇನ್ನು ಮುಂದೆ ಉಪವನ (ಉದ್ಯಾನವನ) ನಿರ್ಮಾಣಕ್ರಮವನ್ನರುಹುತ್ತೇನೆ. ಕೇಳು, ವಾಸದ ಮನೆಯ ಎಡಗಡೆ ಮನೋಹರವಾದ ದೊಡ್ಡದೊಂದು ಉದ್ಯಾನವನ (ಪಾರ್ಕ್) ವನ್ನು ನಿರ್ಮಾಣ ಮಾಡಬೇಕು. ಅದರಲ್ಲಿ ಮೊದಲು ಎಳ್ಳನ್ನು ಬಿತ್ತಿ ಆ ಎಳ್ಳುಗಿಡಗಳು ಹುಟ್ಟಿ ಹೂವಾದ ಬಳಿಕ ಉತ್ತುಬಿಡಬೇಕು.

**ತತಸ್ತು ರೋಪಯೇದ್ವೃಕ್ಷಾನ್ ಪ್ರಯತಃ ಸುಸಮಾಹಿತಃ ।**
**ಸ್ನಾತೋ ದ್ರುಮಮಥಾಭ್ಯರ್ಚ್ಯ ಬ್ರಾಹ್ಮಣಾಂಶ್ಚ ಶಿವಂ ತಥಾ ॥ ೪ ॥**

**ಧ್ರುವಾಣಿ ಪಂಚವಾಯವ್ಯಂ ಹಸ್ತಃ ಪುಷ್ಯಃ ಸವೈಷ್ಣವಃ ।**
**ನಕ್ಷತ್ರಾಣಿ ತಥಾ ಮೂಲಂ ಶಸ್ಯತೇ ದ್ರುಮರೋಪಣೇ ॥ ೫ ॥**

**ಉದ್ಯಾನಂ ಸಜಲಂ ರಾಮ ನಾಭಿರಾಮಂ ಯದಾ ತದಾ ।**
**ಪ್ರವೇಶಯೇನ್ನವಿಪಟಿ (ಕುರುಹಾನ್) ಪುಷ್ಕರಿಣ್ಯಶ್ಚ ಕಾರಯೇತ್ ॥ ೬ ॥**

**ಸಂಸ್ಕಾರ್ಯರ್ಮುದ್ಭಿದಂ ತೋಯಂ ಕೂಪಾಃ ಕಾರ್ಯಾಃ ಪ್ರಯತ್ನತಃ ।**
**ಹಸ್ತಂ ಮಘಾ ತಥಾ ಮೈತ್ರಂ ಸೌಮ್ಯಂ ಪುಷ್ಯಂ ಚ ವಾಸವಂ ॥ ೭ ॥**

---

೪. ಅನಂತರ ಮರಗಳನ್ನು ಹುಟ್ಟಿಹಾಕಬೇಕು. ಮರಗಳನ್ನು ನೆಡುವಾಗ ಪರಿಶುದ್ಧನಾಗಿಯೂ ಶಾಂತನಾಗಿಯೂ ಇರಬೇಕಲ್ಲದೆ, ಸ್ನಾನಮಾಡಿ ಶುಚಿಯಾಗಿ ಮರಗಳಿಗೆ ನಮಸ್ಕರಿಸಿ ಬ್ರಾಹ್ಮಣರ ಬಾಯಿಯಿಂದ ಮಂಗಳವನ್ನು ನುಡಿಸಿ ನೆಡಬೇಕು.

೫. ಮರಗಳನ್ನು ನೆಡಬೇಕಾದರೆ ಐದು ಧ್ರುವನಕ್ಷತ್ರಗಳು ಶ್ರೇಷ್ಠವಾದುವು. ವಾಯುದೇವತಾಕವಾದ ನಕ್ಷತ್ರ ಹಸ್ತ ಪುಷ್ಯ, ವಿಷ್ಣುದೇವತಾ ನಕ್ಷತ್ರ, ಮೂಲಾ ನಕ್ಷತ್ರಗಳು ಒಳ್ಳೆಯುವು.

೬. ಉದ್ಯಾನವನದಲ್ಲಿ ಗಿಡಗಳನ್ನು ನೆಡಬೇಕಾದರೆ ಮೊದಲು ಅಲ್ಲಿ ನೀರನ್ನು ಸಂಪಾದಿಸಿಕೊಳ್ಳಬೇಕು. ನೀರಿಲ್ಲದೆ ಮರ ಹುಟ್ಟಿಹಾಕಿದರೆ ಏನೇನೂ ಪ್ರಯೋಜನವಿಲ್ಲ ವಾದ್ದರಿಂದ ಮೊದಲು ಉದ್ಯಾನವನದಲ್ಲಿ ಕೊಳಗಳನ್ನು ತೋಡಿ ನೀರನ್ನು ಶೇಖರಿಸಿಡಬೇಕು.

೭. ಧ್ರುವಜಲ ಸಿಕ್ಕುವವರಿಗೂ ನೆಲವನ್ನು ತೋಡಿ ಭಾವಿಯು ಸಿದ್ಧವಾದ ಬಳಿಕ ಅದನ್ನು ವಿಸ್ತಾರವಾಗಿ ಮಾಡಿ ಪುಷ್ಕರಿಣೀ (ಕೊಳದ)ರೂಪವಾಗಿ ಮಾಡಿದರೂ ಸರಿ. ಅಥವಾ ಚಿಕ್ಕ ಪಾತ್ರವನ್ನಾಗಿ ಮಾಡಿ ಭಾವಿಯನ್ನು ಕಟ್ಟಿಸಿದರೂ ಸರಿ. ಒಟ್ಟಿನ ಮೇಲೆ ಭಾವಿಯು ಮೊದಲು ಸಿದ್ಧವಾಗಬೇಕು. ಅದರ ನೀರನ್ನು ಸಂಸ್ಕರಿಸಬೇಕು.

ಉತ್ತರಾತ್ರಿತಯಂ ರಾಮ ತಥಾ ಪೂರ್ವಾ ಚ ಫಲ್ಗುನೀ ।
ಜಲಾಶಯಸಮಾರಂಭೇ ಪ್ರಶಸ್ತೇ ವಾರುಣಂ ತಥಾ ॥ ೮ ॥

ಸಂಪೂಜ್ಯ ವರುಣಂ ದೇವಂ ವಿಷ್ಣುಂ ಪರ್ಜನ್ಯಮೇವ ಚ ।
ತರ್ಪಯಿತ್ವಾ ದ್ವಿಜಾನ್ಕಾಮೈಸ್ತದ್ವಾರಂಭಕರೋ ಭವೇತ್ ॥ ೯ ॥

ಅಥೋದ್ಯಾನೇ ಪ್ರವಕ್ಷ್ಯಾಮಿ ಪ್ರಶಸ್ತಾನ್ಪಾದಪಾನ್ದ್ವಿಜ ।
ಅರಿಷ್ಟಾಶೋಕಪುನ್ನಾಗ ಶಿರೀಷಾಮ್ರಪ್ರಿಯಂಗವಃ ॥ ೧೦ ॥

ಪನಸಾಶೋಕಕದಲೀ ಜಂಬೂಲಿಕುಚದಾಡಿಮಾಃ ।
ಮಾಂಗಲ್ಯಾಃ ಪೂರ್ವಮಾರಾಮೇ ರೋಪಣೀಯಾ ಗೃಹೇಷು ವಾ ॥ ೧೧ ॥

---

೮. ಹಸ್ತ, ಮಖೆ, ಮೈತ್ರ, ಸೌಮ್ಯ, ಪುಷ್ಯ, ವಾಸವ, ಉತ್ತರ, ಉತ್ತರಾಷಾಡ, ಉತ್ತರಾಭಾದ್ರಪದ, ಪೂರ್ವಫಲ್ಗುನೀ, ವಾರುಣೀ ಈ ನಕ್ಷತ್ರಗಳು ಜಲಾಶಯ ಸಮಾರಂಭ ಮಹೋತ್ಸವಕ್ಕೆ ಪ್ರಶಸ್ತವಾದ ನಕ್ಷತ್ರಗಳು.

೯. ಭಾವಿಯಲ್ಲಾಗಲೀ ಕೊಳದಲ್ಲಾಗಲೀ ನೀರು ಉತ್ಪತ್ತಿಯಾದೊಡನೆಯೇ ಮೊದಲು ಅಲ್ಲಿಗೆ ಪೂಜಾಸಾಮಗ್ರಿಗಳೊಡನೆ ಹೋಗಿ ವರುಣ, ವಿಷ್ಣು, ಪರ್ಜನ್ಯ ದೇವತೆಗಳಿಗೆ ಪೂಜೆಮಾಡಬೇಕು. ಪೂಜಾನಂತರ ಬ್ರಾಹ್ಮಣರಿಗೆ ದಾನದಕ್ಷಿಣೆಗಳನ್ನು ಕೊಟ್ಟು ತೃಪ್ತಿಪಡಿಸಬೇಕು. ಆ ಬಳಿಕ ಆ ನೀರನ್ನು ಉಪಯೋಗಿಸಬೇಕು.

೧೦. ಉದ್ಯಾನವನದಲ್ಲಿ ಹಾಕಿ (ನೆಟ್ಟು) ಬೆಳೆಸಬೇಕಾದ ಪ್ರಶಸ್ತವಾದ ವೃಕ್ಷಗಳಾವುವೆಂಬುದನ್ನೀಗ ವಿವರಿಸುತ್ತೇನೆ. ಬೇವು, ಅಶೋಕ, ಪುನ್ನಾಗ, ಶಿರೀಷ, ಮಾವು, ಪ್ರಿಯಂಗು.

೧೧. ಹಲಸು, ಬಾಳೆ, ನೇರಳೆ, ನಿಂಬೆ, ಚಕೋತ, ದಾಡಿಮಾ ಮುಂತಾದ ಮರಗಳನ್ನು ಮೊದಮೊದಲಾಗಿ ಮನೆಯ ಉದ್ಯಾನ (ತೋಟ)ದಲ್ಲಾಗಲೀ ತೋಟಗಳಲ್ಲಾಗಲೀ ನೆಟ್ಟು ಬೆಳಸಬೇಕು.

**ಕೃತ್ವಾ ಬಹುತ್ವಮೇತೇಷಾಂ ರೋಪ್ಯಾಸ್ಸರ್ವೇ ಹ್ಯನಂತರಂ ।**
**ಶಾಲ್ಮಲಿಂ ಕೋವಿದಾರಂ ಚ ವರ್ಜಯಿತ್ವಾ ವಿಭೀತಕಂ ॥ ೧೨ ॥**

**ಅಸನಂ ದೇವದಾರುಂ ಚ ಪಲಾಶಂ ಪುಷ್ಕರಂ ತಥಾ ।**
**ನ ವಿವರ್ಜ್ಯಾಸ್ತಥಾ ಕಶ್ಚಿದ್ದೇವೋದ್ಯಾನ್ಯೇಷು ಜಾನತಾ ॥ ೧೩ ॥**

**ತತ್ರಾಪಿ ಬಹುತಾ ಕಾರ್ಯಾ ಮಾಂಗಲ್ಯಾನಾಂ ದ್ವಿಜೋತ್ತಮ ।**
**ಸಾಯಂ ಪ್ರಾತಸ್ತು ಘರ್ಮಾನ್ತೇ ಶೀತಕಾಲೇ ದಿನಾನ್ತರಂ ॥ ೧೪ ॥**

**ವರ್ಷಾಕಾಲೇ ಭುವಃ ಶೋಷೇ ಸೇಕ್ತವ್ಯಾ ರೋಪಿತಾ ದ್ರುಮಾಃ ।**
**ಉತ್ತಮಂ ವಿಂಶತಿರ್ಹಸ್ತಂ ಮಧ್ಯಮಂ ಷೋಡಶಾಂತರಂ ॥ ೧೫ ॥**

---

೧೨. ಮೊದಮೊದಲು ಇವುಗಳಲ್ಲಿ ಒಂದೊಂದನ್ನು ಬೆಳಸಿದರೂ ಸಾಕು. ಕ್ರಮೇಣ ಈ ವೃಕ್ಷಗಳನ್ನೇ ಸ್ಥಳ (ಭೂಮಿಯ) ವೈಶಾಲ್ಯವಿದ್ದ ಮಟ್ಟಿಗೂ ಹೆಚ್ಚು ಹೆಚ್ಚಾಗಿ ಹಾಕಿ ಅಭಿವೃದ್ಧಿ ಮಾಡುತ್ತಾ ಬರಬೇಕು. ಶಾಲ್ಮಲೀ (ಬೂರಗ) ಕೋವಿದಾರ ವಿಭೀತಕ ವೃಕ್ಷಗಳನ್ನು ಹಾಕಿ ಬೆಳೆಸಬಾರದು.

೧೩. ದೇವರಿಗೋಸ್ಕರ ಬಿಟ್ಟ ತೋಟಗಳಲ್ಲಾಗಲೀ ತೋಪುಗಳಲ್ಲಾಗಲೀ ಹೊನ್ನೆ, ಸಾಗುವಾನಿ, ದೇವದಾರು, ಮುತ್ತುಗ, ಪುಷ್ಕರ, ಮುಂತಾದ ಮರಗಳನ್ನು ನೆಟ್ಟು ಬೆಳಸಬೇಕು.

೧೪. ಈಗ ಹೇಳಿದ ಮರಗಳನ್ನು ಕಡೆಗೆ ಕಾಡುಗಳಲ್ಲೆಲ್ಲಾ ಬಹಳವಾಗಿ ಹಾಕಿ ಬೆಳಸಿ ದೊಡ್ಡದು ಮಾಡಬೇಕು. (ಬಹುಕಾಲದಿಂದ ಬೆಳಸಿದ ಈ ವನ್ಯವೃಕ್ಷಗಳೇ ಈಗಲೂ ಕಾಡಿನಲ್ಲೆಲ್ಲಾ ವಿಸ್ತಾರವಾಗಿ ಬೆಳೆದು ಅದರ ಸಂತತಿಗಳೇ ಪ್ರಪಂಚದಲ್ಲೆಲ್ಲಾ ಹರಡಿದೆಯೆಂದು ಭಾವಿಸಬೇಕು.)

೧೫. ಈರೀತಿ ಮರಗಳನ್ನು ನೆಟ್ಟಮೇಲೆ ಅದರ ಕಡೆ ನೋಡದೆ ಉದಾಸೀನ ರಾಗಿರಕೂಡದು. ಬೇಸಿಗೆ ಮತ್ತು ಛಳಿಯ ದಿವಸಗಳಲ್ಲಿ ಪ್ರತಿದಿನವೂ ಸಾಯಂಕಾಲದ ಹೊತ್ತು ದೊಡ್ಡ ಪಾತಿಯನ್ನು ಮಾಡಿ ಆ ಪಾತಿಯ ತುಂಬಾ ನೀರನ್ನು ಹೊಯ್ಯುತ್ತಿರಬೇಕು.

**ಸ್ಥಾನಾತ್ಸ್ಥಾನಾಂತರಂ ಕಾರ್ಯಂ ವೃಕ್ಷಾಣಾಂ ದ್ವಾದಶಾವರಂ ।**
**ಅಭ್ಯಾಶಜಾತಾಸ್ತರವಃ ಸಂಸ್ಪೃಶಂತಃ ಪರಸ್ಪರಂ ॥ ೧೬ ॥**

**ಅವ್ಯಕ್ತಮಿಶ್ರ ಮೂಲತ್ವಾದ್ಭವಂತಿ ವಿಫಲಾ ದ್ವಿಜ ।**
**ತೇಷಾಂ ವ್ಯಾಧಿಸಮುತ್ಪತ್ತೌ ಶೃಣು ರಾಮ ಚಿಕಿತ್ಸಿತಂ ॥ ೧೭ ॥**

---

೧೬. ಮಳೆಗಾಲ ಬಂದಾಗಲೂಸಹ ಒಂದು ವೇಳೆ ಸರಿಯಾಗಿ ಮಳೆ ಬಾರದೆ ಮರಗಳು ಬತ್ತಿಹೋಗುವ ಸಂಭವವುಂಟಾದಾಗ ಅವಕ್ಕೆ ಹುಯ್ನೀರನ್ನು ಹಾಕಬೇಕು. ಮೇಲಿನ ಮಳೆಯನ್ನು ನಂಬಿಕೊಂಡಿರಬಾರದು. ಮರಗಳನ್ನು ನೆಡುವಾಗ ಮುಂದೆ ಹೇಳುವ ನಿಯಮಗಳನ್ನು ಅವಶ್ಯಕವಾಗಿ ಅನುಸರಿಸಬೇಕು ;—ಒಂದು ಮರಕ್ಕೂ ಇನ್ನೊಂದು ಮರಕ್ಕೂ ಮಧ್ಯೇ ಇಪ್ಪತ್ತು ಮೊಳದಷ್ಟು ಜಾಗವನ್ನು ಬಿಟ್ಟು ಮರಗಳನ್ನು ಹಾಕಬೇಕು. ಅಥವಾ ಹದಿನಾರು ಮೊಳದಷ್ಟು ಜಾಗವನ್ನು ಬಿಡುವುದು ಮಧ್ಯಮ ಪಕ್ಷವೆನಿಸುವುದು. ಹನ್ನೆರಡು ಮೊಳ ಜಾಗವನ್ನು ಬಿಡುವುದಕ್ಕೆ ಕನಿಷ್ಠಪಕ್ಷವೆಂದು ಹೆಸರು. ಈರೀತಿ ಒಂದು ಮರಕ್ಕಿಂತ ಇನ್ನೊಂದು ಮರಕ್ಕೆ ಮಧ್ಯದಲ್ಲಿ ಸ್ಥಳವನ್ನು ಬಿಡದೆ ಇನ್ನೂ ಹತ್ತಿರ ಹತ್ತಿರಕ್ಕೆ ಗಿಡಗಳನ್ನು ಹಾಕುವುದರಿಂದ ಅವು ದೊಡ್ಡದಾದ ಮೇಲೆ ಒಂದಕ್ಕೊಂದು ಸೋಕುವುದರಿಂದ ಫಲ ಕಡಿಮೆಯಾಗಿ ಹೋಗುತ್ತವೆ. (ಮರ ದೊಡ್ಡದಾದ ಮೇಲೆ ಒಂದಕ್ಕೊಂದು ಸೋಕಬಾರದೆಂದು ಈಗಲೂ ತಿಳಿದವರು ಹೇಳುತ್ತಿರುವರು. ಕೆಲವು ರೈತರು ತುಂಬಾ ಫಲವು ದೊರೆಯುವುದೆಂಬ ಆಶೆಯಿಂದ ತೆಂಗು ಹಲಸು ಮುಂತಾದ ಫಲವೃಕ್ಷಗಳನ್ನು ಬಹು ಹತ್ತಿರವಾಗಿ ನೆಟ್ಟು ಬಿಡುವರು. ಅವು ಬೆಳದ ಮೇಲೆ ಒಂದಕ್ಕೊಂದು ಆವರಿಸಿ ಹಬ್ಬಿಕೊಂಡು ತೋಟವೆಲ್ಲಾ ಕತ್ತಲೆ ಯಾಗುವುದಲ್ಲದೆ ಫಲವು ಬೇಗ ಬಿಡುವುದೇ ಇಲ್ಲ. ಬಿಟ್ಟರೂ ಸರಿಯಾಗಿ ದಟ್ಟವಾಗಿ ಬಿಡುವುದಿಲ್ಲವೆಂಬುದು ಸರ್ವರ ಅನುಭವದಲ್ಲಿಯೂ ಇರುವುದರಿಂದ ಈಗ ವಿವರಿಸಿದ ಮೇರೆ ಈ ವೃಕ್ಷಾಯುರ್ವೇದಶಾಸ್ತ್ರ ನಿಯಮದಂತೆ ನಡೆದುಕೊಳ್ಳುವುದು ಉತ್ತಮ.)

೧೭. ಹಾಗೆ ದೂರದೂರ ಹಾಕದೆ ಹೋದರೆ ಒಂದರ ಬೇರಿಗೆ ಇನ್ನೊಂದರ ಬೇರು ಸೇರಿ ನುಲಿದುಕೊಂಡು ಇದು ಇಂಥಾ ಗಿಡದ ಬೇರೆಂಬುದೇ ತಿಳಿಯದೆ ಅವ್ಯಕ್ತ ಮಿಶ್ರಮೂಲವಾಗಿ ಬಿಡೋಣದರಿಂದಲೂ, ಕಷ್ಟಪಟ್ಟದ್ದೆಲ್ಲಾ ವಿಫಲವಾಗಿ ಹೋಗುವುದ ರಿಂದಲೂ ಇದನ್ನು ಇಷ್ಟುದೂರ ನಿನಗೆ ತಿಳಿಸಬೇಕಾಯಿತಯ್ಯಾ! ಪರಶುರಾಮ! ಇನ್ನು ಮುಂದೆ ಮರಗಳಿಗೆ ಏನಾದರೂ ಖಾಯಿಲೆ ಬಂದರೆ ಆಗ ಮಾಡಬೇಕಾದ ಚಿಕಿತ್ಸಾಕ್ರಮವನ್ನು ನಿನಗೆ ತಿಳಿಸುತ್ತೇನೆ, ಕೇಳು.

ಆದೌ ಸಂಶೋಧನಂ ತೇಷಾಂ ಕಿಂಚಿಚ್ಛಸ್ತ್ರೇಣ ಕಾರಯೇತ್ ।
ವಿಡಂಗಘೃತಪಂಕಾಕ್ತಾನ್ ಸೇಚಯೇಚ್ಛೀತವಾರಿಣಾ ॥ ೧೮ ॥

ಫಲನಾಶೇ ಕುಲುತ್ಥೈಶ್ಚ ಮಾಷೈರ್ಮುದ್ಗೈಸ್ತಿಲೈರ್ಯವೈಃ ।
ಶ್ರಿತಶೀತಪಯಸ್ಸೇಕಃ ಫಲಪುಷ್ಪಾಯ ಸರ್ವದಾ ॥ ೧೯ ॥

ಆವಿಕಾಜಶಕೃಚ್ಚೂರ್ಣಂ ಯವಚೂರ್ಣಂ ತಿಲಾನಿ ಚ ।
ಗೋಮಾಂಸಮುದಕಂ ಚೇತಿ ಸಪ್ತರಾತ್ರಂ ನಿಧಾಪಯೇತ್ ॥ ೨೦ ॥

ಉತ್ಸೇಕಂ ಸರ್ವವೃಕ್ಷಾಣಾಂ ಫಲಪುಷ್ಪಾದಿವೃದ್ಧಿದಂ ।
ರಂಗತೋಯೋಕ್ಷಿತಂ ಬೀಜಂ ರಂಗತೋಯಾಭಿಷೇಚಿತಂ ॥ ೨೧ ॥

---

೧೮. ಮರಗಳಲ್ಲಿ ಸರಿಯಾಗಿ ಹೂವು ಕಚ್ಚದೆ, ಹಣ್ಣು ಬಿಡದೆ ಮಾರು ಹತ್ತಿತೆಂದು (ಕಾಹಿಲೆ) ತಿಳಿದು ಬಂದೊಡನೆ ಮೊದಲು ಅದನ್ನು ಶಸ್ತ್ರದಿಂದ ಕತ್ತರಿಸಿ ನೋಡಬೇಕು. (ಶಸ್ತ್ರಚಿಕಿತ್ಸೆ). ಅದರ ಬಣ್ಣವೇನಾದರೂ ಬದಲಾಯಿಸಿದಂತೆ ಕಂಡು ಬಂದರೆ ವಾಯುವಿಳಂಗ, ತುಪ್ಪ, ಕೇಸರಿಗಳನ್ನು ತಣ್ಣೀರಿಗೆ ಬೆರಸಿ ಆ ನೀರನ್ನು ಅದರ ಪಾತಿಗೆ ಸುರಿಯುತ್ತಾ ಬರಬೇಕು. ಹೀಗೆ ಮಾಡಿದರೆ ದೋಷನಿವಾರಣೆಯಾಗುವುದು

೧೯. ಹುರಳಿ, ಉದ್ದು, ಹೆಸರು, ಎಳ್ಳು, ಗೋಧಿ ಬತ್ತ ಇತ್ಯಾದಿ ಸಸ್ಯಗಳಿಗೆ. ಮಾರುಹತ್ತಿ (ರೋಗ ಪ್ರಾಪ್ತಿಯಾಗಿ) ಬೆಳೆ ಸರಿಯಾಗಿ ಆಗುವುದಿಲ್ಲವೆಂದು ಕಂಡು ಬಂದಾಗ ತಣ್ಣೀರನ್ನು ತುಂಬಿಕೊಂಡು ಅದರ ಮೇಲೆ ಎರಚಬೇಕು.

೨೦. ಮತ್ತು ಕುರಿ ಹಿಕ್ಕೆ, ಆಡಿನ ಹಿಕ್ಕೆ, ಇವುಗಳನ್ನು ಒಣಗಿಸಿ, ಅದರ ಜತೆಗೆ ಅಕ್ಕಿ ಎಳ್ಳುಗಳನ್ನು ಬೆರಸಿ ಚೆನ್ನಾಗಿ ಕುಟ್ಟಿ ಹುಡಿಮಾಡಿ, ಅದನ್ನು ದನದ ಮಾಂಸದ ನೀರಿನಲ್ಲಿ ಬೆರಸಿ ಏಳು ದಿವಸ ಒಂದು ಪಾತ್ರೆಯಲ್ಲಿ ಹಾಕಿ ಇಟ್ಟಿರಬೇಕು.

೨೧. ಏಳು ದಿವಸ ಕಳೆದ ಮೇಲೆ ಈ ಔಷಧದ ನೀರನ್ನು ಖಾಯಿಲೆಯಾಗಿರುವ ಮರಗಳ ಮೇಲೂ, ಮಾರುಹತ್ತಿರುವ ಪೈರುಗಳ ಮೇಲೂ ಚಿಮುಕಿಸುತ್ತಾ ಬಂದರೆ ಅದರ ಖಾಯಿಲೆಯು(ಮಾರುಹೋಗಿ) ನಾಶವಾಗಿ ಫಲಪುಷ್ಪಗಳು ಹೆಚ್ಚಾಗಿ ಬಿಡುವುವು.

ಉದಗ್ರಪುಷ್ಪಂ ಭವತಿ ಯೌವನೇ ನಾತ್ರ ಸಂಶಯಃ ।
ಮತ್ಸ್ಯಾಂಭಸಾ ತು ಸಿಕ್ತೇನ ವೃದ್ಧಿರ್ಭವತಿ ಶಾಖಿನಾಂ ॥ ೨೨ ॥

ತತಃ ಪ್ರಧಾನತೋ ವಕ್ಷ್ಯೇ ದ್ರುಮಾಣಾಂ ದೋಹದಾನ್ಯಹಂ ।
ಮತ್ಸ್ಯೋದಕೇನ ಶೀತೇನ ಚಾಮ್ರಾಣಾಂ ಸೇಕ ಇಷ್ಯತೇ ॥ ೨೩ ॥

ಮೃದ್ವೀಕಾನಾಂ ತಥಾ ಕಾರ್ಯಸ್ತೇನೈವಂ ರಿಪುಸೂದನ ।
ಪಕ್ವಾಸೃಗ್ರುಧಿರಂ ಚೈವ ದಾಡಿಮಾನಾಂ ಪ್ರಶಸ್ಯತೇ ॥ ೨೪ ॥

ತುಷಂ ದೇಯಂ ಚ ಭವ್ಯಾನಾಂ ಮದ್ಯಂ ಚ ಬಕುಲದ್ರುಮೇ ।
ವಿಶೇಷಾತ್ಕಾಮಿನೀವಕ್ತ್ರ ಸಂಸರ್ಗಾತ್ತು ಗುಣಂ ಚ ಯತ್ ॥ ೨೫ ॥

---

೨೨. ಹೂವಿನ ಬೀಜಗಳನ್ನು ರಂಗುರಂಗಿನ ನೀರಿನಲ್ಲಿ ನೆನೆಹಾಕಿ ಅದನ್ನು ಭೂಮಿಯಲ್ಲಿ ನೆಟ್ಟು ಅದರ ಪಾತೆಗೆ ಬಣ್ಣಬಣ್ಣದ ನೀರುಗಳನ್ನು ಹಾಕಿ ಬೆಳಸಿದರೆ ಆ ಬೀಜವು ಗಿಡವಾಗಿ ಹೂವು ಬಿಡುವ ಸಮಯದಲ್ಲಿ ಆ ಬಣ್ಣದ ಹೂಗಳನ್ನೇ ಉದಗ್ರ (ಎತ್ತರ)ವಾಗಿ ಬಿಡುವುವು. ಈ ಶ್ಲೋಕದಲ್ಲಿ ಉದಗ್ರ ಪುಷ್ಪ-ತದ್ರಂಗಪುಷ್ಪ ಎಂದೆರಡು ಪಾಠಗಳಿವೆ. ಇವೆರಡರಲ್ಲಿ ತದ್ರಂಗವೆಂಬ ಪಾಠವೇ ಬಹಳ ಚೆನ್ನಾಗಿದೆ.

೨೩. ಮರಗಿಡಗಳು ಹೊರವಾಗಿ ಬೆಳೆಯಬೇಕಾದರೆ ಮೀನಿನ ನೀರನ್ನು ಅದರ ಪಾತೆಗಳಿಗೆ ಎರೆಯಬೇಕು. ಹೀಗಾದರೆ ಹೊರವಾಗಿ ಬೆಳೆಯುತ್ತವೆ. ಇನ್ನೂ ಮುಖ್ಯಮುಖ್ಯವಾದ ಮರಗಳನ್ನು ಬೆಳೆಸುವ ಕ್ರಮವು ದೋಹಳಶಾಸ್ತ್ರ ರೀತಿಯಾಗಿ ವಿವರಿಸಲ್ಪಡುವುದು. ಅದರಲ್ಲಿ ಮುಖ್ಯಮುಖ್ಯವಾದ ಕೆಲವನ್ನು ಮಾತ್ರ ಇಲ್ಲಿ ಹೇಳುತ್ತೇನೆ. ತಣ್ಣಗಿರುವ ಮೀನಿನ ನೀರನ್ನು ಸೀಮಾವಿನ ಗಿಡದ ಪಾತೆಗಳಿಗೆ ಹೊಯ್ಯುತ್ತ ಬಂದರೆ ಹಣ್ಣು ಬಲು ಸಿಹಿಯಾಗುವುದು.

೨೪. ದ್ರಾಕ್ಷೀ-ಬಳ್ಳಿಗಳಿಗೂ ಇದೇ ರೀತಿಯಾಗಿ ಮೀನಿನ ನೀರನ್ನು ಪಾತೆಗಳಿಗೆ ಸುರಿಯುತ್ತಾ ಬಂದರೆ ದ್ರಾಕ್ಷೀಹಣ್ಣುಗಳು ಬಹು ಮಧುರವಾಗುವುವು. ದಾಳಿಂಬದ ಗಿಡದ ಪಾತೆಗೆ ರಕ್ತವನ್ನು ಸುರಿದರೆ ಹಣ್ಣು ಬಹು ಸೊಗಸಾಗಿ ಬಿಡುತ್ತದೆ.

೨೫. ಪಗಡೇಗಿಡದ ಪಾತೆಗೆ ಹೊಟ್ಟು ಹೆಂಡ ಬೆರಸಿ ಹಾಕಿದರೆ ಪಗಡೇ ಹೂವು ಬಹು ಅಂದವಾಗಿ ಬಿಡುತ್ತದೆ. ಅದರಲ್ಲೂ ವಿಶೇಷವಾಗಿ ಕಾಮಿನಿಯರು ಆಸವ (ಮದ್ಯ) ವಿಶೇಷಗಳನ್ನು ಬಾಯಿಗೆ ತುಂಬಿಕೊಂಡು ಆ ಗಿಡದ ಪಾತಿಗಳಿಗೆ ಮುಕ್ಕಳಿಸಿದರೆ ಹೂವು ಇನ್ನೂ ಸೊಗಸಾಗಿಯೇ ಬಿಡುತ್ತದೆ.

**ಪ್ರಶಸ್ತಂ ಚಾಪ್ಯಶೋಕಾನಾಂ ಕಾಮಿನೀ ಪಾದ ತಾಡನಂ ।**
**ಸೃಗಾಲಮಾಂಸತೋಯಂ ಚ ನಾರಂಗಾಕ್ಷೋಟಯೋರ್ಹಿತಂ ॥ ೨೬ ॥**

**ಮಧುಯಷ್ಟ್ಯುದಕಂ ಚೈವ ಬದರಾಣಾಂ ಪ್ರಶಸ್ಯತೇ ।**
**ಗಂಧೋದಕಂ ಚ ಗೋಮಾಂಸಂ ಕತಕಾನಾಂ ಪ್ರಶಸ್ಯತೇ ॥ ೨೭ ॥**

**ಕ್ಷೀರಸೇಕೇನ ಭವತಿ ಸಪ್ತಪರ್ಣೋ ಮನೋಹರಃ ।**
**ಮಾಂಸಪೂತೋ ವಸಾಮಜ್ಜಾಸೇಕಃ ಕುರಬಕೇ ಹಿತಃ ॥ ೨೮ ॥**

**ಪೂತಿಮತ್ಸ್ಯಘೃತಂ ಪೂತಿಕರ್ಪಾಸಾ ಫಲಮೇವ ಚ ।**
**ಅರಿಮೇದಸ್ಯ ಸೇಕೋಽಯಂ ಪಾಟಲೇಷು ಚ ಶಸ್ಯತೇ ॥ ೨೯ ॥**

---

೨೬. ಅಶೋಕ (ಪೂಸರಳು) ವೃಕ್ಷದಲ್ಲಿ ಚೆನ್ನಾಗಿ ಹೂವು ಬಿಡಬೇಕಾದರೆ ಅದರ ಬುಡವನ್ನು ಹುಡುಗಿಯರು ತಮ್ಮ ಪಾದಗಳಿಂದ ತಾಡನಮಾಡಬೇಕು. (ಒದೆಯಬೇಕು.) ಮತ್ತು ಕಿತ್ತಲೇಗಿಡದ ಪಾತಿಗೆ ನರೀಮಾಂಸದ ನೀರನ್ನು ಸುರಿದರೆ ಕಿತ್ತಲೇಹಣ್ಣು ಚೆನ್ನಾಗಿ ಬಿಡುವುದು. ಬೆಟ್ಟದಗೋಣೀ (ಆಕ್ಷೋಟ-ಅಕ್ರೋಟ್) ಮರಕ್ಕೂ ಹೀಗೆ ಮಾಡಿದರೆ ಅದೂ ಸಹ ಪುಷ್ಪಫಲಭರಿತವಾಗುವುದು.

೨೭. ಯಲಚೀಮರದ ಬುಡದ ಪಾತೆಗೆ ಅತಿಮಧುರದ ನೀರನ್ನೆರೆದರೆ ಯಲಚೀಹಣ್ಣು ಬಹಳ ಚೆನ್ನಾಗಿ ಬಿಡುತ್ತದೆ. ಚಿಲ್ಲದಗಿಡ ಮತ್ತು ನಿಂಬೇಗಿಡದ ಪಾತಿಗೆ ಗೋಮಾಂಸದ ನೀರಿಗೆ ಬೆರೆಸಿದ ಗಂಧೋದಕವನ್ನು ಹಾಕಿದರೆ ಹಣ್ಣು ಚೆನ್ನಾಗಿ ಬಿಡುವುದು. (ಅಭಿಧಾನಕೋಶದಲ್ಲಿ ಚಕ್ಷುಷ್ಯಂಕತಕಃ ಎಂದು ಹೇಳಿದೆ.)

೨೮. ಏಳೆಲೆ ಬಾಳೇಗಿಡಕ್ಕೆ ಹಾಲೆರೆದರೆ ಮನೋಹರವಾಗಿ ಎಲೆ ಬಿಡುವುದು. ಗೋರಂಟೀ ಗಿಡಕ್ಕೆ ಮಾಂಸಪೂತವಾದ ವಸಾಮಜ್ಜಾಜಲ ಸೇಚನೆಯು ಬಹು ಹಿತಕರವಾಗಿರುವುದು.

೨೯. ಹತ್ತೀ ಗಿಡಕ್ಕೆ ದುರ್ಗಂಧದಿಂದ ಕೂಡಿದ ಮೀನಿನ ಕೊಬ್ಬನ್ನು ಹಾಕಿದರೆ ಹತ್ತೀಕಾಳು ದಪ್ಪನಾಗಿ ಬಿಡುತ್ತದೆ. ಅರಿಮೇದದ (ಅತಿಮೇಘ) ನೀರನ್ನು ಪಾದರೀಗಿಡದ ಬುಡದಲ್ಲಿ ಹುಯ್ದರೆ ಪಾದರೀಹೂವು ಬಹು ಸುವಾಸನೆಯಾಗುತ್ತದೆ.

**ಕಪಿತ್ಥಬಿಲ್ವಯೋಃ ಸೇಕಂ ಗುಡತೋಯೇನ ಕಾರಯೇತ್ ।**
**ಜಾತೀನಾಂ ಮಲ್ಲಿಕಾಯಾಶ್ಚ ಗಂಧತೋಯಂ ಪರಂ ಹಿತಂ ॥ ೩೦ ॥**

**ತಥಾ ಕುಬ್ಜಕಜಾತೀನಾಂ ಕೂರ್ಮಮಾಂಸಂ ಪ್ರಶಸ್ಯತೇ ।**
**ಖರ್ಜೂರನಾರಿಕೇರಾಣಾಂ ವಂಶಸ್ಯ ಕದಲಸ್ಯ ಚ ॥ ೩೧ ॥**

**ಲವಣೇನ ಸತೋಯೇನ ಸೇಕೋ ವೃದ್ಧಿಕರಃ ಸ್ಮೃತಃ ।**
**ವಿಡಂಗಂ ತಂಡುಲೋಪೇತಂ ಮತ್ಸ್ಯಮಾಂಸಂ ಭೃಗೂತ್ತಮ ॥ ೩೨ ॥**

**ಸರ್ವೇಷಾಮವಿಶೇಷೇಣ ದೋಹದಂ ಪರಿಕಲ್ಪಯೇತ್ ।**

---

೩೦. ಬೇಲದಮರ, ಬಿಲ್ವಪತ್ರೇಮರದ ಬುಡಕ್ಕೆ ಬೆಲ್ಲದ ಪಾನಕವನ್ನು ಹಾಕಿದರೆ ಹಣ್ಣು ರುಚಿಯಾಗುತ್ತದೆ. ಜಾಜಿ ಮತ್ತು ಮಲ್ಲಿಗೇಹಂಬಿನ ಬುಡಕ್ಕೆ ಗಂಧೋದಕವನ್ನು ಸುರಿದರೆ ಬಹಳ ಸುವಾಸನೆಯಾದ ಹೂವು ಬಿಡುತ್ತದೆ.

೩೧. ಅದೇ ರೀತಿ ಕುಳ್ಳಾಗಿ ಬೆಳೆಯುವ ಹೂಗಿಡಗಳಿಗೆ ಆಮೆಯ ಮಾಂಸದ ನೀರು ಬಹಳ ಹಿತಕರವಾಗಿರುವುದು. ಖರ್ಜೂರ, ತೆಂಗು, ಬಿದಿರು, ಬಾಳೇಗಿಡದ ಬುಡಗಳಿಗೆ ಉಪ್ಪುನೀರು ಬೆರಸಿ ಸುರಿದರೆ ಫಲವು ಹೊರವಾಗಿ ಬಿಡುತ್ತದೆ.

೩೨. ಸಾಮಾನ್ಯವಾಗಿ ಎಲ್ಲಾ ವಿಧವಾದ ಹೂಹಣ್ಣುಗಳನ್ನು ಬಿಡುವ ಯಾವ ಗಿಡಕ್ಕಾಗಲೀ ಯಾವ ಮರಕ್ಕೇ ಆಗಲೀ ವಾಯುವಿಳಂಗ, ಕಲಗಚ್ಚು, ಮೀನಿನಮಾಂಸದ ನೀರುಗಳನ್ನು ಬೆರಸಿ ಪಾತೆಗಳಿಗೆ ಸುರಿಯುವುದು ಬಹಳ ಒಳ್ಳೇ ಚಿಕಿತ್ಸೆಯೆಂದು ದೋಹಳಶಾಸ್ತ್ರದ ಸಿದ್ಧಾಂತವಾಗಿರುತ್ತದೆ.

೩೩. ಎಲೈ ಪರಶುರಾಮನೇ ! ಕೇಳು. ಮೇಲೆ ಹೇಳಿದ ಕ್ರಮವನ್ನನುಸರಿಸಿ ಯಾವ ಗಿಡ ಮರ ಸಸ್ಯಗಳಾಗಲೀ ಚಿಕಿತ್ಸೆಮಾಡಿದರೆ ಆ ಗಿಡಗಳಲ್ಲಿ ಒಳ್ಳೇ

**ಏವಂಕೃತೇ ಚಾರುಪಲಾಶಪುಷ್ಪಾಃ**
**ಸುಗಂಧಿನೋ ವ್ಯಾಧಿವಿವರ್ಜಿತಾಶ್ಚ ।**
**ಭವಂತಿ ನಿತ್ಯಂ ತರವಃ ಸರಸ್ಯಾಃ**
**ಚಿರಾಯುಷಃ ಸಾಧುಫಲಾನ್ವಿತಾಶ್ಚ** ॥ ೩೩ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ವೃಕ್ಷಾಯುರ್ವೇದ ವರ್ಣನಂ ನಾಮ ತ್ರಿಂಶತ್ತಮೋಽಧ್ಯಾಯಃ**

---

ಹೂವುಗಳೂ ಹಣ್ಣುಗಳೂ ಯಥೇಚ್ಛವಾಗಿ ಬಿಡುವುವಲ್ಲದೆ ಆ ಗಿಡಗಳಿಗೆ ಯಾವ ವಿಧವಾದ ಉಪದ್ರವವೂ ತಗಲದೆ ಅವು ಬಹುಕಾಲದತನಕ ಜೀವಿಸಿ ಫಲವನ್ನು ಕೊಡುತ್ತಿರುತ್ತವೆ.

ಇಂತೆಂಬಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪ ವಾದ ದ್ವಿತೀಯ ಖಂಡದಲ್ಲಿ ವೃಕ್ಷಾಯುರ್ವೇದ ವರ್ಣನೆಯೆಂಬ ಹೆಸರಿನ ಮೂವತ್ತನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಅಥೈಕತ್ರಿಂಶೋಽಧ್ಯಾಯಃ

**ಪುಷ್ಕರ ಉವಾಚ**

**ದುರ್ಗೇ ಸರ್ವಗುಣೋಪೇತೇ ವಾಸ್ತುಲಕ್ಷಣಸಂಯುತೇ ।**
**ವಸನ್ನಿವರ್ಧಯೇತ್ಕೋಶಂ ಧರ್ಮೇಣ ಪೃಥಿವೀಪತಿಃ ॥ ೧ ॥**

**ಪ್ರಜಾನಾಂ ಪಾಲನಂ ಕಾರ್ಯಂ ತತ್ರ ಸ್ಥಾನೇ ಮಹೀಕ್ಷಿತಾ ।**
**ಸ್ವದೇಶೇ ದೇವತಾಯಾಶ್ಚ ಕೃತಾ ರಾಜ್ಞಃ ಪುರಾತನೈಃ ॥ ೨ ॥**

**ದಾಯಂ ವಿತ್ತಂ ಜನಂ ತಾಸಾಂ ಪ್ರಯತ್ನೇನ ಚ ಪಾಲಯೇತ್ ।**
**ದೇವದ್ರವ್ಯಾಪಹಾರೇಣ ರಾಜಾ ನರಕಮೃಚ್ಛತಿ ॥ ೩ ॥**

---

### ಮೂವತ್ತೊಂದನೆಯ ಅಧ್ಯಾಯವು

೧. ಪುಷ್ಕರನು ಪುನಃ ಹೇಳುತ್ತಾನೆ.—ಎಲೈ ಪರಶುರಾಮನೇ, ಕೇಳು. ಸಕಲ ಗುಣಗಳಿಂದ ಯುಕ್ತವಾದ ವಾಸ್ತುಲಕ್ಷಣದಿಂದೊಡಗೂಡಿದ ದುರ್ಗದಲ್ಲಿ ವಾಸ ಮಾಡುತ್ತಾ ಮಹಾರಾಜನು ಧರ್ಮಮಾರ್ಗದಿಂದಲೇ ತನ್ನ ಕೋಶ (ಖಜಾನೆ)ವನ್ನು ಅಭಿವೃದ್ಧಿಮಾಡಿಕೊಳ್ಳಬೇಕು.

೨. ಮತ್ತು ಮಹಾರಾಜನು ರಾಜ್ಯಭಾರವನ್ನು ಮಾಡುತ್ತಿರುವಾಗ ಪ್ರಜೆಗಳನ್ನು ಚೆನ್ನಾಗಿ ಪರಿಪಾಲನೆಮಾಡಬೇಕು. ಮತ್ತು ತನ್ನ ದೇಶದಲ್ಲಿರುವ ಎಲ್ಲಾ ದೇವಸ್ಥಾನದಲ್ಲಿನ ದೇವರುಗಳಿಗೂ ಪುರಾತನಕಾಲದಿಂದ ನಡೆದುಕೊಂಡು ಬಂದಿರುವ ಕ್ರಮದಂತೆ ಸೇವೆಯನ್ನು ಸರಿಯಾಗಿ ಸಲ್ಲಿಸುತ್ತಾ ಆ ಧರ್ಮವನ್ನು ಚೆನ್ನಾಗಿ ಪಾಲಿಸಿಕೊಂಡು ಬರಬೇಕು.

೩. ಜನರ ಪಿತ್ರಾರ್ಜಿತ ಸ್ವತ್ತುಗಳನ್ನೂ ಹಣವನ್ನೂ ಜನರ ಮಾನವನ್ನೂ ರಾಜನು ಚೆನ್ನಾಗಿ ಸಂರಕ್ಷಣೆಮಾಡಿಕೊಂಡು ಬರಬೇಕು. ದೇವರ ಸ್ವತ್ತನ್ನಾಗಲೀ ದ್ರವ್ಯವನ್ನಾಗಲೀ ಅಪಹಾರಮಾಡಿದ ರಾಜನು ನರಕವಾಸವನ್ನನುಭವಿಸಬೇಕಾಗುತ್ತದೆ.

**ಅಸ್ಮಿನ್ನಪಿ ತಥಾ ಲೋಕೇ ಪ್ರಾಪ್ನೋತಿ ಚ ಪರಾಭವಂ ।**
**ಪಾಲಯಂತಿ ಮಹೀಂ ದೇವಾಃ ಪೂಜಿತಾಃ ಪೃಥಿವೀಕ್ಷಿತಾ　　॥ ೪ ॥**

**ದೈವಾಯತ್ತಮಿದಂ ಸರ್ವಂ ಭೂತಲಂ ದ್ವಿಜಪುಂಗವ ।**
**ಧೂಪದೀಪನಮಸ್ಕಾರ ಪುಷ್ಪಮಾಲ್ಯಾನು ಲೇಪನೈಃ　　॥ ೫ ॥**

**ರತ್ನಾನು ಸಂಪ್ರದಾನೈಶ್ಚ ಪೂಜನೀಯಾಃ ಸುರೋತ್ತಮಾಃ ।**
**ಪೂಜಿತಾಃ ಪೂಜಯಂತ್ಯೇತೇ ಚಾಯುಷಾ ಯಶಸಾ ಶ್ರಿಯಾ　　॥ ೬ ॥**

**ಪ್ರಾಪ್ಯತೇ ದೇವತಾಭಕ್ತ್ಯಾ ಚಾನುಷ್ಠಾನೇ ಮಹತ್ಪದಂ ।**
**ಪೂಜಿತಾಃ ಸಂಪ್ರಯಚ್ಛಂತಿ ಕಾಮಾನ್ನೃಣಾಮಭೀಪ್ಸಿತಾನ್　　॥ ೭ ॥**

---

೪. ದೇವದ್ರವ್ಯಾಪಹಾರಮಾಡಿದ ರಾಜನು ಈ ಲೋಕದಲ್ಲೂ ಪರಲೋಕದಲ್ಲೂ ಸಹ ತಿರಸ್ಕಾರವನ್ನು ಹೊಂದಬೇಕಾಗುತ್ತದೆ. ಮಹಾರಾಜನಿಂದ ಪೂಜಿತರಾದ ದೇವತೆಗಳು ತಾವೇ ಭೂಮಿಯ ಭಾರವನ್ನು ಹೊತ್ತಂತೆ ಭಾವಿಸಿ ಲೋಕವನ್ನು ಸುವೃಷ್ಟಿಯಿಂದ ಕಾಪಾಡುತ್ತಾ ಜನರನ್ನು ಉದ್ಧರಿಸುತ್ತಾರೆ.

೫-೬. ಎಲೈ ವಿಪ್ರಶ್ರೇಷ್ಠನಾದ ಪರಶುರಾಮನೇ ! ನಾನು ಈಗ ನಿನಗೆ ಹೇಳುವ ಮಾತನ್ನು ಚೆನ್ನಾಗಿ ಕೇಳು. ಈ ಸಕಲ ಭೂಮಂಡಲವೂ ದೇವತೆಗಳ ಅಧೀನದಲ್ಲಿರುವುದೆಂಬ ವಿಚಾರವು ನಿನಗೆ ಚೆನ್ನಾಗಿ ಗೊತ್ತಿರಲಿ. ಆದ್ದರಿಂದ ಭೂಲೋಕೋದ್ಧಾರಕರಾದ ದೇವತೆಗಳನ್ನು ಸರ್ವದಾ ಧೂಪದೀಪ ನಮಸ್ಕಾರಗಳಿಂದಲೂ, ಪುಷ್ಪಮಾಲ್ಯಾನು ಲೇಪನ ಸಮರ್ಪಣದಿಂದಲೂ, ರತ್ನಾದ್ಯಾಭರಣ ಸಂಪ್ರದಾನಗಳಿಂದಲೂ ರಾಜರೂ ಪ್ರಜೆಗಳೂ ಭಕ್ತಿಯಿಂದ ಪೂಜೆಮಾಡುತ್ತಲಿರಬೇಕು. ಈರೀತಿ ನಾವು ಅವರನ್ನು ಪೂಜೆಮಾಡಿದೆವೆಂದರೆ ಅವರು ಸುಪ್ರೀತರಾಗಿ ನಮಗೆಲ್ಲರಿಗೂ ಆಯುಸ್ಸನ್ನೂ, ಯಶಸ್ಸನ್ನೂ, ಯಥೇಚ್ಛವಾದ ಸಂಪತ್ತನ್ನೂ ಕೊಟ್ಟು ಕಾಪಾಡಿಕೊಂಡು ಬರಲು ಸಂದೇಹವಿಲ್ಲ.

೭. ದೇವತೆಗಳ ವಿಷಯದಲ್ಲಿ ಭಕ್ತಿ ಮಾಡೋಣದರಿಂದಲೂ ಅವರನ್ನು ಪೂಜೆಮಾಡೋಣದರಿಂದಲೂ ಮಹತ್ಪದವಿಯುಂಟಾಗುತ್ತದೆ. ಈರೀತಿ ನಮ್ಮಿಂದ ಪೂಜಿತರಾದ ದೇವತೆಗಳು ನಾವು ಕೋರಿದ ಕೋರಿಕೆಗಳೆಲ್ಲವನ್ನೂ ನೆರವೇರಿಸಿ ಕೊಡುತ್ತಾರೆ.

**ಏಕಮಪ್ಯಾಶ್ರಿತೋ ದೇವಂ ರಾಜಾ ಭಾರ್ಗವನಂದನ ।**
**ಸರ್ವಾಸಾಂ ಪೂಜನಂ ಕುರ್ಯಾದ್ದೇವತಾನಾಮಸಂಶಯಂ ॥ ೮ ॥**

**ದೇವತಾನಾಂ ನ ಚೋಚ್ಛಿಂದ್ಯಾತ್ಪೂರ್ವದಾಯಂ ಕಥಂಚನ ।**
**ಪ್ರಾಕ್‌ಸ್ಥಿತಂ ತನ್ನ ಚೋಚ್ಛಿಂದ್ಯಾನ್ನ ಚ ಚ್ಛಿಂದ್ಯಾತ್ತಥಾ ನವಂ ॥ ೯ ॥**

**ತಚ್ಛೇತ್ತಾ ನರಕಂ ಯಾತಿ ಸಹ ಪೂರ್ವೈಃ ಪಿತಾಮಹೈಃ ।**
**ಅಪಿ ಸ್ವಲ್ಪಂ ನ ಹರ್ತವ್ಯಂ ದೇವದ್ರವ್ಯಂ ವಿಜಾನತಾ ॥ ೧೦ ॥**

**ಸ್ವಲ್ಪಸ್ಯಾಪಿ ಫಲಂ ಘೋರಂ ಯಸ್ಮಾಜ್ಜನ್ಮಾಂತರೇ ಭವೇತ್ ।**
**ಷಷ್ಟಿ ವರ್ಷ ಸಹಸ್ರಾಣಿ ಷಷ್ಟಿ ವರ್ಷ ಶತಾನಿ ಚ ॥ ೧೧ ॥**

---

೮. ಎಲೈ ಪರಶುರಾಮನೆ! ಕೇಳು. ರಾಜನಾದವನು ಒಂದೇ ದೇವರನ್ನು ಆಶ್ರಯಿಸಿಕೊಂಡಿದ್ದಾಗ್ಯೂ ಸಕಲ ದೇವತೆಗಳನ್ನೂ ಪೂಜೆಮಾಡಬೇಕು.

೯. ದೇವರುಗಳಿಗೋಸ್ಕರವಾಗಿ ಕೊಟ್ಟಿರುವ ವೃತ್ತಿಸ್ವಾಸ್ಥ್ಯಗಳನ್ನು ಯಾವಾಗಲೂ ಕಿತ್ತುಕೊಳ್ಳಬಾರದು. ಹಿಂದಿನ ಕಾಲದಿಂದ ಬಂದಿರುವುದನ್ನು ನಡೆಸಿಕೊಡಬೇಕು. ಹೊಸದಾಗಿ ಕೊಟ್ಟ ವೃತ್ತಿಯನ್ನೂ ಕಿತ್ತುಕೊಳ್ಳಬಾರದು.

೧೦. ಹಾಗೇನಾದರೂ ದೇವಾದಾಯಕ್ಕೆ ವಿಘ್ನಮಾಡಿದವನು ತನ್ನ ಪೂರ್ವ ಪಿತೃಗಳನ್ನು ನರಕಕ್ಕೆ ತಳ್ಳುವವನಲ್ಲದೆ ತಾನೂ ಸಹ ನರಕದಲ್ಲಿ ಬೀಳುವನು. ದೇವದ್ರವ್ಯದಲ್ಲಿ ಒಂದೇ ಒಂದು ಬಿಡಿಗಾಸನ್ನೂ ಅಪಹರಿಸಲೇಬಾರದು. ಇದು ಬುದ್ಧಿವಂತರ ಲಕ್ಷಣ.

೧೧. ಒಂದು ಸ್ವಲ್ಪವೇ ಆದರೂ ದೇವದ್ರವ್ಯವನ್ನಪಹರಿಸಿದ್ದೇ ಆದರೆ ಅದು ಜನ್ಮಾಂತರದಲ್ಲಿ ಬಹು ಘೋರವಾಗಿ ಪರಿಣಮಿಸುವುದಲ್ಲದೆ ಈ ಅಪಹಾರದೋಷದಿಂದ ಅರವತ್ತುಸಾವಿರದ ಅರವತ್ತುನೂರು ವರ್ಷದಕಾಲ ನರಕದಲ್ಲಿ ವಾಸಮಾಡಬೇಕಾಗುತ್ತದೆ.

ದೇವದ್ರವ್ಯಾಪಹರಣಾನ್ನರಕಂ ಪ್ರತಿಪದ್ಯತೇ ।
ಸಂತೀಹ ದೇವತಾಃ ಸೌಮ್ಯಾಃ ಸಂತ್ಯುಗ್ರಾಶ್ಚಾಪಿ ಭಾರ್ಗವ　　॥ ೧೨ ॥

ದರ್ಶಯಂತಿ ರುಷಂ ಸೌಮ್ಯ ರಾಜ್ಯ ಭ್ರಂಶಾದಿಭಿರ್ನೃಣಾಂ ।
ಅಸ್ಮಿಁಲ್ಲೋಕೇ ರುಷಂ ಕ್ರೂರಾಂ ನೈವ ಕುರ್ವಂತಿ ದೇವತಾಃ　　॥ ೧೩ ॥

ತಾಸಾಂ ವಿತ್ತಾಪಹರಣಾದ್ರಾಜಾ ನರಕಮೃಚ್ಛತಿ ।
ಪೂರ್ವೈಃ ಪಿತಾಮಹೈಸ್ಸಾರ್ಧಂ ಪ್ರಾಗುಕ್ತಂ ಫಲಮೇವ ತು　　॥ ೧೪ ॥

ದೇವದ್ರವ್ಯಾಪಹರಣಂ ನೈವ ಜಾತು ಭವೇದ್ವೃಥಾ ।
ಸರ್ವಸ್ವರಹಿತಾನ್ಕೃತ್ವಾ ದೇವದ್ರವ್ಯಾಪಹಾರಿಣಃ　　॥ ೧೫ ॥

ಅಂಕಯಿತ್ವಾ ದ್ವಿಜಶ್ರೇಷ್ಠ ಸ್ವರಾಷ್ಟ್ರಾದ್ವಿಪ್ರವಾಸಯೇತ್ ।
ತ್ರೈವಿದ್ಯಾ ವಣಿಜೋ ವೈಶ್ಯಾ ಲಿಂಗಿನೋ ದೇವಪಾಲಕಾಃ　　॥ ೧೬ ॥

---

೧೨. ಎಷ್ಟೋ ಸೌಮ್ಯ ದೇವತೆಗಳುಂಟು. ಎಷ್ಟೋ ಕ್ರೂರ ದೇವತೆಗಳೂ ಉಂಟು. ಅವುಗಳು ಕೋಪಿಸಿಕೊಂಡವೆಂದರೆ ಮನುಷ್ಯರಿಗೆ ರಾಜ್ಯಭ್ರಂಶಾದಿ ಕಷ್ಟಗಳನ್ನು ಕೊಟ್ಟುಬಿಡುತ್ತವೆ.

೧೩. ಈ ಲೋಕದಲ್ಲಿ ಬದುಕಿರುವವರೆವಿಗೂ ಎಷ್ಟೇ ಕ್ರೂರವಾದ ದೇವತೆಗಳಾದಾಗ್ಗೂ ಏನೂ ಕೆಡುಕುಮಾಡದೆ ಇದ್ದಾಗ್ಗೂ ಅವುಗಳ ದ್ರವ್ಯಾಪಹಾರದಿಂದ ರಾಜನು ನರಕದಲ್ಲಿ ವಾಸಮಾಡಬೇಕಾಗುತ್ತದೆ.

೧೪. ಮತ್ತು ಹಿಂದಿನ ಶ್ಲೋಕದಲ್ಲಿ ವಿವರಿಸಿರುವ ಮೇರೆ ಇವನು ತಾನೂ ಕೆಡುವುದಲ್ಲದೆ ತನ್ನ ಪಿತೃಗಳನ್ನೂ ನರಕದಲ್ಲಿ ಕೆಡವಿಬಿಡುತ್ತಾನೆ.

೧೫-೧೭. ದೇವದ್ರವ್ಯಾಪಹಾರದೋಷವು ಎಂದಿಗೂ ವ್ಯರ್ಥವಾಗುವುದಿಲ್ಲ. ಆ ದೋಷವು ದೇವದ್ರವ್ಯಾಪಹಾರಮಾಡಿದವರ ಸಕಲ ಸ್ವತ್ತನ್ನೂ ನಾಶಮಾಡಿಬಿಡುವುದಲ್ಲದೆ, ಅವರಿಗೆ ತಕ್ಕ ಶಿಕ್ಷೆಯನ್ನೂ ಕೊಟ್ಟು ಅವರನ್ನು ರಾಜ್ಯಭ್ರಷ್ಟರನ್ನಾಗಿ ಮಾಡಿಬಿಡುತ್ತದೆ. ಆದುದರಿಂದ ದೇವಾಲಯದ ಸ್ವತ್ತಿಗೆ ಪಾಲುಗಾರರಾದ ಬ್ರಾಹ್ಮಣರೂ, ವರ್ತಕರೂ, ವೈಶ್ಯರೂ, ಲಿಂಗಿಗಳೂ, ದೇವಪಾಲಕರಾದ ಅಧಿಕಾರಿಗಳೂ ಅದರ ಕಟ್ಟುಪಾಡಿಗೆ ಒಳಪಟ್ಟವರೂ ಸಹ ಪರಸ್ಪರ ಕಲಹವನ್ನು ಮಾಡದೆ ದೇವಸ್ಥಾನದ

ತಥಾ ತತ್ಪ್ರತಿಬದ್ಧಾಶ್ಚ ನಕುರ್ಯುಃ ಕಲಹಂ ಮಿಥಃ ।
ತೇಷಾಂ ಸಹಾಯಕಃ ಸ್ವಾಮೀ ನಿಗ್ರಹಾನುಗ್ರಹೀ ಭವೇತ್ ॥ ೧೭ ॥

ರಾಗದ್ವೇಷವಿಯುಕ್ತಸ್ತು ವಿವಾಸ್ಯಶ್ಚಾನ್ಯಥಾ ಭವೇತ್ ।
ದಂಡಂ ಚ ದೇವತಾಗಾಮಿ ದೇವದ್ರವ್ಯಸ್ಯ ಸೂಚಕಂ ॥ ೧೮ ॥

ಸರ್ವಾನ್ನಿವಾಸಯೇದ್ರಾಜಾ ಧಾರ್ಮಿಕೋ ಧರ್ಮಕಾರಣಾತ್ ।
ರಾಜ್ಞಾ ಸರ್ವಪ್ರಯತ್ನೇನ ಪಾಲನೀಯಾಃ ಸುರಾಲಯಾಃ ॥ ೧೯ ॥

ಕರ್ತವ್ಯಾಶ್ಚ ಮಹಾಭಾಗ ಸುರಲೋಕಮಭೀಪ್ಸತಾ ।
ದೇವತಾಸ್ತು ಪ್ರತಿಷ್ಠಾಪ್ಯ ತಲ್ಲೋಕಂ ಧ್ರುವಮಾಪ್ನುಯಾತ್ ॥ ೨೦ ॥

---

ಕೆಲಸಗಳನ್ನು ಸುಸೂತ್ರವಾಗಿ ನಡೆಸಿಕೊಂಡು ಹೋಗಬೇಕು. ಇವರುಗಳಿಗೆಲ್ಲಾ ಸಹಾಯಕನಾದ ಅಧಿಪತಿಯು (ಪಾರುಪತ್ತೇಗಾರನು) ನಿಗ್ರಹಾನುಗ್ರಹ ಸಮರ್ಥನಾಗಿರಬೇಕು.

೧೮-೧೯. ರಾಗದ್ವೇಷಗಳಿಂದ ಬಿಡಲ್ಪಟ್ಟವನಾದಾಗ್ಯೂ ಅಂತಹ ಅಧಿಕಾರಿಯ ಮೇಲೆ ಯಾವನು ಈರ್ಷ್ಯಾಸೂಯೆಗಳಿಂದ ಕೂಡಿದವನಾಗಿ ಅವನನ್ನು ರಾಜ್ಯದಿಂದ ಹೊರಡಿಸುವನೋ ಅವನೇ ದಂಡಾರ್ಹನಾಗುವನು. ಧಾರ್ಮಿಕನಾದ ರಾಜನು ಈ ವಿಚಾರಗಳನ್ನೆಲ್ಲಾ ಚೆನ್ನಾಗಿ ವಿಚಾರಿಸಿ ಯಾವನಾದರೂ ದೈವದ್ರೋಹಿಯೆಂದು ತಿಳಿದು ಬಂದರೆ, ಅಂತಹವನನ್ನು ಮಾತ್ರ ಧರ್ಮಪಾಲನೆಗೋಸ್ಕರವಾಗಿ ರಾಜ್ಯದಿಂದಲೇ ಹೊರಡಿಸಿಬಿಡಬೇಕು. .

೨೦. ಹೇಗೇ ಆದರೂ ರಾಜನಾದವನು ಸಕಲ ಪ್ರಯತ್ನಗಳಿಂದಲೂ ದೇವಸ್ಥಾನದ ಸ್ವತ್ತು ಅನ್ಯಥಾ ಆಗದಂತೆ ಕಾಪಾಡುತ್ತಾ ಬರಬೇಕು. ಸ್ವರ್ಗಕ್ಕೆ ಹೋಗಿ ಸುಖಪಡಬೇಕೆಂಬ ಆಶೆಯಿದ್ದವನು ದೇವಸ್ವತ್ತನ್ನು ರಕ್ಷಣೆಮಾಡಲೇಬೇಕು. ದೇವತಾಪ್ರತಿಷ್ಠಾಪನೆ ಮಾಡಿದವನು ಆಯಾ ದೇವತೆಗಳ ಲೋಕವನ್ನೇ ಹೊಂದುವನು,

ಕೃತ್ವಾ ದೇವಗೃಹಂ ಶುಭ್ರಂ ಸ್ವರ್ಗಮಾಪ್ನೋತ್ಯನುತ್ತಮಂ ।
ತದಾ ಭೋಗಪ್ರಮಾಣೇನ ಲಕ್ಷ್ಮೀಸ್ತತ್ರಾಪಿಭಾರ್ಗವ ॥ ೨೧ ॥

ಮೃತ್ಪ್ರಾಸಾದಾದ್ದಶಗುಣಂ ಸ್ಥೂಲದಾರುಕೃತೇ ಭವೇತ್ ।
ಫಲಂ ದಶಗುಣಂ ತಸ್ಮಾತ್ತಥಾ ಪಕ್ವೇಷ್ಟಕಾಕೃತೇ ॥ ೨೨ ॥

ತಸ್ಮಾದ್ದಶಗುಣಂ ಶೈಲೇ ನಾತ್ರ ಕಾರ್ಯಾ ವಿಚಾರಣಾ ।
ಯಾವತ್ಸಂಖ್ಯಂ ನರಃ ಕುರ್ಯಾದ್ದೇವವೇಶ್ಮ ಸುಧಾಸಿತಂ ॥ ೨೩ ॥

ತಾವಜ್ಜನ್ಮಾಂತರಾಣೀಹ ಯಶಸಾ ಸ ವಿರಾಜತೇ ।
ಕೃತ್ವಾ ಚ ಚಿತ್ರವಿನ್ಯಾಸಂ ಗಂಧರ್ವೈಃ ಸಹ ಮೋದತೇ ॥ ೨೪ ॥

---

೨೧. ಯಾರು ದೇವಸ್ಥಾನವನ್ನು ಶುಭ್ರ (ಶುಚಿ) ವಾಗಿಟ್ಟಿರುವರೋ ಅವರು ಪರಲೋಕಕ್ಕೆ ಹೋದಾಗ ಅತ್ಯುತ್ತಮವಾದ ಸ್ವರ್ಗಭೋಗವನ್ನನುಭವಿಸುತ್ತಾರೆ. ಅವರೆಷ್ಟು ದಿವಸ ಅಲ್ಲಿ ವಾಸಮಾಡುವರೋ ಆ ಪ್ರಮಾಣವನ್ನನುಸರಿಸಿ ಮಹಾಲಕ್ಷ್ಮಿಯು ಅವರ ಬಳಿಯಲ್ಲಿ ಸ್ಥಿರವಾಗಿ ನೆಲೆಸಿರುತ್ತಾಳೆ.

೨೨. ಮಣ್ಣಿನ ಗೋಡೆ ಹಾಕಿ ದೇವಸ್ಥಾನವನ್ನು ಕಟ್ಟುವುದಕ್ಕಿಂತ ದಪ್ಪ ದಪ್ಪ ಮರಗಳಿಂದಲೂ (ತೊಲೆ) ಇಟ್ಟಿಗೆಗಳಿಂದಲೂ ಭದ್ರವಾಗಿ ಕಟ್ಟಿಸಿದರೆ ಹತ್ತರಷ್ಟು ಫಲವುಂಟು. ಚೆನ್ನಾಗಿ ಬೆಂದ ಒಳ್ಳೇ ಇಟ್ಟಿಗೆಗಳನ್ನೇ ಜೋಡಿಸಿ ಇಟ್ಟಿಗೆಗಾರೆಗಳಿಂದ ಗುಡಿಯನ್ನು ಕಟ್ಟಿಸಿದರೆ ಅದರ ಫಲಕ್ಕಿಂತ ಹತ್ತರಷ್ಟು ಫಲವುಂಟು.

೨೩. ಬರೀ ಕಲ್ಲಿನ ಕಟ್ಟಡದ ದೇವಸ್ಥಾನವನ್ನು ಕಟ್ಟಿಸಿದವರಿಗಂತೂ ಅಮೋಘವಾದ ಫಲವುಂಟಾಗುವುದು. ಆ ಕಟ್ಟಡದ ಕಲ್ಲುಗಳು ಮತ್ತು ಇಟ್ಟಿಗೆಗಳನ್ನು ಲೆಖ್ಖಮಾಡಿದರೆ ಎಷ್ಟು ಲೆಖ್ಖ ಸಿಗುವುದೋ, ಆ ಗೋಡೆಗಳಿಗೆ ಸುಣ್ಣ ಬಳಸಿದರೆ ಆ ಲೆಖ್ಖದಷ್ಟು ಜನ್ಮಗಳ (ಜನ್ಮ ಪುನಃ ಬರುವುದಾದರೆ) ತನಕ (ಸುಧಾ ಧವಳ) ಕೀರ್ತಿಯನ್ನು ಸಂಪಾದಿಸಿಕೊಂಡು ಜೀವಿಸುತ್ತಾನೆ.

೨೪-೨೫. ದೇವಸ್ಥಾನದ ಗೋಡೆಗಳ ಮೇಲೆ ನಾನಾವಿಧವಾದ ದೇವರ ಚಿತ್ರಗಳನ್ನು ಯಾರು ಬರೆಯಿಸುವರೋ ಅವರು ಗಂಧರ್ವಲೋಕದಲ್ಲಿ ಗಂಧರ್ವಗಣದೊಡನೆ ಸೇರಿಕೊಂಡು ಆ ಗಂಧರ್ವರ ಭೋಗಕ್ಕೆ ಭಾಗಿಗಳಾಗುತ್ತಾರೆ. ಯಾರು ದೇವಸ್ಥಾನವನ್ನು ಸಂಶೋಧನ (ಸ್ವಚ್ಛ ಅಥವಾ ಗುಡಿಸಿ) ಮಾಡುವರೋ ಅವರು

**ಕೃತ್ವಾ ಸಂಶೋಧನಂ ತತ್ರ ವಿರೋಗಃ ಸಮುಪದ್ಯತೇ ।**
**ಪ್ರೋಕ್ಷಯಿತ್ವಾ ಮನಸ್ತಾಪಾನ್ಮಾನವಃ ಪ್ರತಿಮುಚ್ಯತೇ ॥ ೨೫ ॥**

**ಕೃತ್ವೋಪಲೇಪನಂ ರಾಮ ನಾಕಮಾಪ್ನೋತ್ಯನುತ್ತಮಂ ।**
**ಗಂಧರ್ವಲೋಕಮಾಪ್ನೋತಿ ಕೃತ್ವಾ ವರ್ಣಕರಂಜಿತಂ ॥ ೨೬ ॥**

**ಗಂಧೈಃ ಸಮುಕ್ಷಿತಂ ಕೃತ್ವಾ ಗಂಧರ್ವೈಸ್ಸಹ ಮೋದತೇ ।**
**ಉಪಕಾರಪ್ರದಾನೇನ ಶ್ರಿಯ ಮಾಪ್ನೋತ್ಯನುತ್ತಮಾಂ ॥ ೨೭ ॥**

**ಗೀತವಾದ್ಯಪ್ರದಾನೇನ ಸುಖಮಾಪ್ನೋತ್ಯನುತ್ತಮಂ ।**
**ಪ್ರೇಕ್ಷಣೀಯ ಪ್ರದಾನೇನ ರೂಪವಾನಭಿಜಾಯತೇ ॥ ೨೮ ॥**

---

ರೋಗರಹಿತರಾಗಿ ಸುಖಪಡುತ್ತಾರೆ. ಈರೀತಿ ಗುಡಿಸಿದ ದೇವಸ್ಥಾನದಲ್ಲಿ ಯಾರು ನೆಲವನ್ನು ನೀರಿನಿಂದ ಚಿಮುಕಿಸುತ್ತಾರೋ ಅವರ ಆಧಿ (ಮನಸ್ತಾಪ) ಗಳು ನಾಶವಾಗುತ್ತವೆ.

೨೬. ದೇವಸ್ಥಾನದ ನೆಲವನ್ನು ಯಾರು ಚೆನ್ನಾಗಿ ಸಾರಿಸುತ್ತಾರೋ ಅವರು ಮಹತ್ತರವಾದ ಸ್ವರ್ಗಭೋಗಗಳನ್ನು ಹೊಂದುವರು. (ಹಿಂದೆ ಬಂದಿರುವ ಮಾಂಧಾತೃಚಕ್ರವರ್ತಿಯ ಕಥೆಯನ್ನೋದಿದರೆ ಈ ಅನುಲೇಪನದ ಫಲವು ಗೊತ್ತಾಗುವುದು). ಮತ್ತು ಅಂತಹವರು ಚಿತ್ರವಿಚಿತ್ರಬಣ್ಣಗಳಿಂದ ಕಂಗೊಳಿಸುತ್ತಿರುವ ಗಂಧರ್ವಲೋಕದಲ್ಲಿ ಬಹಳಕಾಲ ವಾಸಮಾಡುವರು.

೨೭. ದೇವಸ್ಥಾನದಲ್ಲಿ ದೇವರಿಗೆ ಗಂಧದ ಸೇವೆಮಾಡಿದರೆ ಗಂಧರ್ವಲೋಕದಲ್ಲಿ ಸುಖವುಂಟಾಗುತ್ತದೆ. ದೇವಸ್ಥಾನದಲ್ಲಿ ಹೂಗಳನ್ನೆರಚಿದರೂ ಸಹ ಅತ್ಯುತ್ತಮವಾದ ಐಶ್ವರ್ಯವನ್ನು ಹೊಂದುತ್ತಾನೆ.

೨೮. ದೇವಾಲಯದಲ್ಲಿ ಗೀತವಾದ್ಯಸೇವೆಯನ್ನು ಮಾಡುವವನು ಬಹಳ ಸೌಖ್ಯವನ್ನು ಹೊಂದುತ್ತಾನೆ. ದೇವರಿಗೆ ದರ್ಪಣ ದಾನಮಾಡಿದರೆ ಬಹಳ ರೂಪವಂತನಾಗಿ ಜನಿಸುತ್ತಾನೆ.

**ತಥಾ, ಔಜ್ಜ್ವಲ್ಯಮಾಪ್ನೋತಿ ಯತ್ರಯತ್ರಾಭಿಜಾಯತೇ ।**
**ಸ್ನಾಪಯಿತ್ವಾ ಘೃತೇನಾರ್ಚಾಂ ಸರ್ವಪಾಪೈಃ ಪ್ರಮುಚ್ಯತೇ　　॥ ೨೯ ॥**

**ಸ್ನಾಪಯಿತ್ವಾ ಚ ತೈಲೇನ ವಿರೋಗಃ ಸಮುಪದ್ಯತೇ ।**
**ಅಂಬುನಾ ಸ್ನಾಪಯಿತ್ವಾ ತು ಸೌಭಾಗ್ಯಮಧಿಗಚ್ಛತಿ　　॥ ೩೦ ॥**

**ವಿರೂಕ್ಷಯಿತ್ವಾ ತಾಂ ರಾಮ ಪಾಪಂ ಜಹತಿ ಮಾನವಾಃ ।**
**ಅನುಲೇಪನದಾನೇನ ರೂಪಮಾಪ್ನೋತ್ಯನುತ್ತಮಂ·　　॥ ೩೧ ॥**

**ತಥಾ ಪುಷ್ಪಪ್ರದಾನೇನ ಶ್ರಿಯಮಾಪ್ನೋತ್ಯನುತ್ತಮಾಂ ।**
**ಧೂಪದಾನೇನ ಧರ್ಮಜ್ಞ ರತಿಮಾಪ್ನೋತಿ ಶೋಭನಾಂ　　॥ ೩೨ ॥**

**ತಥಾ ದೀಪಪ್ರದಾನೇನ ಚಕ್ಷುಷ್ಮಾನಭಿಜಾಯತೇ ।**
**ಅನ್ನದಃ ಸರ್ವಮಾಪ್ನೋತಿ ಯತ್ಕಿಂಚಿನ್ಮನಸೇಚ್ಛತಿ　　॥ ೩೩ ॥**

---

೨೯. ಮತ್ತು ಅವನು ಯಾವ ಯಾವ ಜನ್ಮದಲ್ಲಿ ಹುಟ್ಟಿದಾಗ್ಗೂ ಉಜ್ವಲವಾದ ಯಶಸ್ಸನ್ನು ಹೊಂದುತ್ತಾನೆ. ದೇವರಿಗೆ ಘೃತದಿಂದ ಅಭಿಷೇಕ (ಪೂಜೆ)ಮಾಡಿಸಿದರೆ ಸಕಲ ಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆ.

೩೦. ಯಾವನು ದೇವರಿಗೆ ತೈಲೋದ್ವರ್ತನ ಸೇವೆಯನ್ನು ಮಾಡಿಸುವನೋ ಅಂಥವನ ಸಕಲ ರೋಗಗಳೂ ಪರಿಹಾರವಾಗುತ್ತವೆ. ದೇವರಿಗೆ ಶುದ್ಧೋದಕ ಸ್ನಾನವನ್ನು ಮಾಡಿಸುವವನು ಸೌಭಾಗ್ಯವನ್ನು ಹೊಂದುತ್ತಾನೆ.

೩೧. ಉದ್ವರ್ತನೆಯಾದ ಬಳಿಕ ಯಾವನು ದೇವರನ್ನು ನಿರ್ಮಲವಸ್ತ್ರದಿಂದ ಒರಸುತ್ತಾನೆಯೋ ಅವನು ಸಕಲ ಪಾಪಗಳನ್ನೂ ಕಳೆದುಕೊಳ್ಳುತ್ತಾನೆ. ಅನುಲೇಪನ (ಗಂಧ)ದಾನದಿಂದ ಅತ್ಯುತ್ತಮವಾದ ಸೌಂದರ್ಯವನ್ನು ಹೊಂದುತ್ತಾನೆ. ಹಾಗೂ ಪುಷ್ಪದಾನದಿಂದ ಯಥೇಚ್ಛವಾದ ಐಶ್ವರ್ಯವನ್ನು ಪಡೆಯುತ್ತಾನೆ.

೩೨. ಧೂಪದಾನ ಮಾಡೋಣದರಿಂದ ರತಿಯನ್ನನುಭವಿಸುತ್ತಾನೆ. ಹಾಗೂ ದೀಪದಾನ ಮಾಡೋಣದರಿಂದ ಸ್ವಚ್ಛವಾದ ನೇತ್ರಪ್ರಕಾಶವನ್ನು ಹೊಂದುತ್ತಾನೆ.

೩೩-೩೪. ದೇವಸ್ಥಾನದಲ್ಲಿ ಅನ್ನದಾನ ಮಾಡೋಣದರಿಂದ ಏನೇನು ಮನಸ್ಸಿನ ಬಯಕೆಗಳಿವೆಯೋ ಅವೆಲ್ಲವನ್ನೂ ಅನುಭವಿಸುತ್ತಾನೆ. ಪಾನಕಾದಿಗಳನ್ನು

ಪಾನಕಾನಾಂ ಪ್ರದಾನೇನ ತೃಪ್ತಿಮಾಪ್ನೋತ್ಯನುತ್ತಮಾಂ ।
ವಸುದೋ ರೂಪಮಾಪ್ನೋತಿ ರೂಪಮಾಪ್ನೋತಿ ರೂಪ್ಯದಃ ॥ ೩೪ ॥

ರುಕ್ಮದಸ್ಸರ್ವಮಾಪ್ನೋತಿ ಶ್ರಿಯಮಾಪ್ನೋತಿ ಸರ್ವದಃ ।
ಛತ್ರದಃ ಸ್ವರ್ಗಮಾಪ್ನೋತಿ ತಾಲವೃಂತಪ್ರದೋ ದಿವಂ ॥ ೩೫ ॥

ಚಾಮರಾಣಾಂ ಪ್ರದಾನೇನ ರಾಜಾ ಭವತಿ ಧಾರ್ಮಿಕಃ ।
ಪತಾಕಾಯಾಃ ಪ್ರದಾನೇನ ಸರ್ವಪಾಪಾನ್ವ್ಯಪೋಹತಿ ॥ ೩೬ ॥

ಧ್ವಜದಾನೇವ ಲೋಕೇಸ್ಮಿನ್ಧ್ವಜಭೂತೋ ಭವೇನ್ನರಃ ।
ನಾನಾವಿಧಾನಾಂ ಭೋಗಾನಾಂ ತಥಾ ರಾಮ ಪ್ರದಾಯಕಃ ॥ ೩೭ ॥

---

ದಾನಮಾಡೋಣದರಿಂದ ಎಲ್ಲ ವಿಧದಲ್ಲೂ ತೃಪ್ತಿಯನ್ನನುಭವಿಸುವವನಾಗುತ್ತಾನೆ. ಚಿನ್ನ ಮತ್ತು ಬೆಳ್ಳಿಯನಾಣ್ಯಗಳನ್ನು ದಾನಮಾಡುವವನು ಮಹಾ ಸೌಂದರ್ಯಶಾಲಿಯಾಗುತ್ತಾನೆ.

೩೫. ಸುವರ್ಣದಾನವಂ ಮಾಡುವವನು ಬೇಕುಬೇಕಾದ ಭೋಗಗಳನ್ನೂ, ಸರ್ವದಾನ ಮಾಡುವವನು ಮಹತ್ತಾದ ಐಶ್ವರ್ಯವನ್ನೂ ಹೊಂದುತ್ತಾನೆ.

೩೬. ದೇವಸ್ಥಾನದಲ್ಲಿ ಛತ್ರಿಯನ್ನು ದಾನಮಾಡುವವನು ಸ್ವರ್ಗವನ್ನು ಹೊಂದುತ್ತಾನೆ. ಬೀಸಣಿಗೆ ದಾನಮಾಡುವವನೂ ಸಹ ಸ್ವರ್ಗಸುಖವನ್ನೇ ಹೊಂದುತ್ತಾನೆ. ಚಾಮರಗಳನ್ನು ದಾನಮಾಡೋಣದರಿಂದ ಧಾರ್ಮಿಕನಾದ ಮಹಾರಾಜನಾಗಿ ಜನಿಸುತ್ತಾನೆ. ಧ್ವಜವನ್ನು ದಾನಮಾಡಿದರೆ ಸಕಲಪಾಪಗಳಿಂದಲೂ ಬಿಡುಗಡೆ ಹೊಂದುತ್ತಾನೆಯಲ್ಲದೆ ಆ ಧ್ವಜದಾನಬಲದಿಂದ ಈ ಲೋಕದಲ್ಲಿ ಧ್ವಜದಂತಹ ಔನ್ನತ್ಯವನ್ನು ಹೊಂದಿ ಸರ್ವ ಧ್ವಜಭೂತನಾಗಿ ಪರಿಣಮಿಸುವನು.

೩೭-೩೮. ನಾನಾ ವಿಧವಾದ ಭೋಗವಸ್ತುಗಳನ್ನು ದಾನಮಾಡುವವನು ಅಂತಂತಹ ಭೋಗಗಳನ್ನೇ ಭೂಲೋಕದಲ್ಲಿ ಯಥೇಚ್ಛವಾಗಿ ಅನುಭವಿಸುತ್ತಾನೆ. ದೇವಸ್ಥಾನದಲ್ಲಿ ಭೂದಾನ ಮಾಡಿದರೆ ಸಕಲವಿಧ ಭೋಗಗಳೂ ಅವನ ವಶವಾಗುವುವು.

ತಾನೇವ ಭೋಗಾನಾಪ್ನೋತಿ ಸರ್ವಮಾಪ್ನೋತಿ ಭೂಮಿದಃ ।
ದೇವಮಾಲ್ಯಾಪನಯನಾದ್ಗೋದಾನಫಲಮಾಪ್ನುಯಾತ್ ॥ ೩೮ ॥

ತದಾಹುತಿಪ್ರದಾನೇನ ತಲ್ಲೋಕಮಭಿಪದ್ಯತೇ ।
ನಮಸ್ಕಾರಪ್ರಣಾಮಾಭ್ಯಾಂ ಏನೋಭಿಃ ಪ್ರತಿ ಮುಚ್ಯತೇ ॥ ೩೯ ॥

ಪ್ರದಕ್ಷಿಣಂ ತಥಾ ಕೃತ್ವಾ ಭವತ್ಯಾಚಾರವಾನ್ನರಃ ।
ಸ್ತುತ್ವಾ ಚ ದೇವತಾಂ ರಾಮ ಮನೋದುಃಖಾತ್ಪ್ರಮುಚ್ಯತೇ ॥ ೪೦ ॥

ಸಂತರ್ಪಯಿತ್ವಾ ತೋಯೇನ ತೃಪ್ತಿಂ ಸಮಧಿಗಚ್ಛತಿ ।
ತಸ್ಮಾತ್ಸರ್ವಪ್ರಯತ್ನೇನ ವಿಶುದ್ಧೇನಾನ್ತರಾತ್ಮನಾ ॥ ೪೧ ॥

ಅರ್ಚಾಸ್ಥಾಃ ಪೂಜಯೇತ್ಸರ್ವಾ ದೇವತಾ ಭೂರಿದರ್ಶನ ।
ತದಾಶ್ರಿತಾಂಶ್ಚ ಯುಂಜೀತ ತದಾ ತದ್ವಿಧಿಪಾರಗಾನ್ ॥ ೪೨ ॥

---

ದೇವರ ಪ್ರಸಾದವನ್ನು ಯಾರು ಭಕ್ತಿಯಿಂದ ಉಪಾಸಕರ ಹಸ್ತದಿಂದ ಸ್ವೀಕರಿಸಿ ಮನೆಗೆ ತೆಗೆದುಕೊಂಡು ಹೋಗುವರೋ ಅವರು ಗೋದಾನ ಮಾಡಿದ ಫಲವನ್ನು ಹೊಂದುತ್ತಾರೆ.

೩೯. ದೇವರಿಗೆ ಅನ್ನವನ್ನಾವನು (ಆಹುತಿ)ನಿವೇದನ ಮಾಡುವನೋ ಅವನು ಗೋಲೋಕವನ್ನು ಪ್ರವೇಶಿಸುತ್ತಾನೆ. ಪ್ರದಕ್ಷಿಣೆ ಮಾಡಿ ದೇವರಿಗೆ ಸಾಷ್ಟಾಂಗವಾಗಿ ನಮಸ್ಕಾರ ಮಾಡಿದರೆ ಅಂಥವನ ಸಕಲ ಪಾಪಗಳೂ ಪರಿಹಾರವಾಗುತ್ತವೆ.

೪೦. ಬರೀ ಪ್ರದಕ್ಷಿಣೆಯನ್ನು ಮಾತ್ರ ಮಾಡಿದರೆ ಆಚಾರವಂತನಾಗುತ್ತಾನೆ. ದೇವರನ್ನಾರು ಸ್ತೋತ್ರಮಾಡುವರೋ ಅವರು ತಮ್ಮ ಸಕಲ ವಿಧವಾದ ಮನೋದುಃಖ (ಮನಃಕ್ಲೇಶ)ಗಳನ್ನೂ ಕಳೆದುಕೊಳ್ಳುತ್ತಾರೆ.

೪೧. ದೇವರಿಗೆ ಬರೀ ಶುದ್ಧೋದಕವನ್ನು ಸಮರ್ಪಿಸಿದಾಗ್ಯೂ ಅಂತಹವನೂ ಸಹ ಮಹತ್ತರವಾದ ತೃಪ್ತಿಯನ್ನು ಹೊಂದುತ್ತಾನೆ. ಆದ್ದರಿಂದ ಬಹಳವಾದ ಪ್ರಯತ್ನ ಮಾಡಿ ಶುದ್ಧವಾದ ಅಂತರಂಗ ಭಕ್ತಿಯಿಂದ ಕೂಡಿದವರಾಗಿ,

೪೨. ಸಕಲ ದೇವತೆ (ಅರ್ಚಾ ವಿಗ್ರಹ)ಗಳನ್ನೂ ಯಾವಾಗಲೂ ಪೂಜೆ ಮಾಡಬೇಕಲ್ಲದೆ ಆ ದೇವಸ್ಥಾನಗಳಲ್ಲಿ ಕೆಲಸಮಾಡುವ ಜನರನ್ನೂ ಸಹ ದೈವಭಕ್ತಿಯಿಂದಿರುವಂತೆ ಪ್ರೇರಿಸಬೇಕಲ್ಲದೆ ಪೂಜಾವಿಧಿಯನ್ನು ಚೆನ್ನಾಗಿ ಬಲ್ಲವರನ್ನೇ ದೇವಸ್ಥಾನದ ಅರ್ಚನಾವೃತ್ತಿಗೆ ನೇಮಿಸಬೇಕು.

ತತ್ಪೂಜನೇ ತಥಾ ರಾಮ ತಾಂಶ್ಚ ಸಂಪೂಜಯೇತ್ಸದಾ ।
ಬ್ರಾಹ್ಮಣಾಶ್ಚ ನಿಯೋಕ್ತವ್ಯಾ ವೇದೋಕ್ತಸುರಪೂಜನೇ ॥ ೪೩ ॥
ಯಸ್ಯ ರಾಜ್ಞಸ್ತು ವಿಷಯೇ ದೇವವೇಶ್ಮ ವಿಶೀರ್ಯತೇ ।
ತಸ್ಯ ಸೀದತಿ ತದ್ರಾಷ್ಟ್ರಂ ದೇವವೇಶ್ಮ ಯಥಾ ತಥಾ ॥ ೪೪ ॥
ಸಂಸ್ಕಾರಂ ಲಂಭಯೇದ್ಯಸ್ತು ದೇವವೇಶ್ಮ ಪುರಾತನಂ ।
ಸ ಚ ಸೌಖ್ಯಮವಾಪ್ನೋತಿ ಯತ್ರ ಯತ್ರಾಭಿಜಾಯತೇ ॥ ೪೫ ॥
ವಾಪೀಕೂಪತಡಾಗಾನಾಂ ಸದಾ ತ್ರಿದಶವೇಶ್ಮನಾಂ ।
ಭೂಯಃ ಸಂಸ್ಕಾರಕರ್ತಾ ಚ ಲಭತೇ ಮುಕ್ತಿಜಂ ಫಲಂ ॥ ೪೬ ॥
ದೇವಸಂಪೂಜನಾದ್ರಾಮ ವೃದ್ಧಿಂ ಸಮುಪಗಚ್ಛತಿ ।
ರಾಜ್ಞಸ್ತು ವಿಷಯೇ ಯಸ್ಯ ಪೂಜ್ಯಂತೇ ಸತತಂ ಸುರಾಃ ॥ ೪೭ ॥

---

೪೩. ಈ ರೀತಿ ಭಗವದ್ಭಕ್ತಿಯಿಂದ ನಡೆದುಕೊಳ್ಳುವ ಅರ್ಚಕರನ್ನೂ ಸಹ ನಾವು ಪೂಜಿಸಬೇಕು. ವೇದೋಕ್ತವಾಗಿ ದೇವತಾರ್ಚನೆ ಮಾಡುವುದನ್ನಾರು ಕಲಿತಿರುವರೋ ಅಂಥಾ ಬ್ರಾಹ್ಮಣರನ್ನೇ ಸರಿಯಾಗಿ ಪರೀಕ್ಷೆಮಾಡಿ ಕೆಲಸಕ್ಕೆ ನಿಯಮಿಸಬೇಕು.

೪೪. ಯಾವ ರಾಜನ ರಾಜ್ಯದಲ್ಲಿ ದೇವಸ್ಥಾನವು ಕ್ಷೀಣಗತಿಗೆ ಬರುವುದೋ, ಆ ರಾಜನ ರಾಜ್ಯವೂ ಸಹ ದೇವಸ್ಥಾನವು ಕ್ಷೀಣಗತಿಗೆ ಬಂದಮೇರೆ ಕ್ಷೀಣದಶೆಯನ್ನೇ ಹೊಂದುವುದು.

೪೫. ಪುರಾತನವಾದ ದೇವಸ್ಥಾನಗಳಲ್ಲಿ ಯಾವನು ಪೂಜೆ ನಡೆಸದೆ ಸಂಪ್ರದಾಯ ಸಂಸ್ಕಾರವನ್ನು ಮೀರಿ ನಡೆಯುವನೋ ಅಂತಹ ರಾಜನು ಯಾವ ಯಾವ ದೇಶದಲ್ಲಿ ಯಾವ ಯಾವ ಜನ್ಮದಲ್ಲಿ ಹುಟ್ಟಿದಾಗ್ಗೂ ಅವನಿಗೆ ಸುಖವುಂಟಾಗುವುದಿಲ್ಲ.

೪೬. ವಾಪೀಕೂಪತಟಾಕಗಳನ್ನೂ ಜೀರ್ಣವಾದ ದೇವಸ್ಥಾನಗಳನ್ನೂ ಸಹ ಯಾವ ಪುಣ್ಯಾತ್ಮನು ಜೀರ್ಣೋದ್ಧಾರ ಮಾಡುವನೋ ಅಂಥವನು ಮೋಕ್ಷದಿಂದ ಯಾವ ವಿಧವಾದ ಸುಖವು ದೊರೆಯುವುದೋ ಅದಕ್ಕೆ ಸಮಾನವಾದ ಆನಂದಸುಖ (ಬ್ರಹ್ಮಾನಂದ)ವನ್ನನುಭವಿಸುವನು.

೪೭. ಯಾವ ಮಹಾರಾಜನ ರಾಜ್ಯದಲ್ಲಿರುವ ಸಕಲ ದೇವಸ್ಥಾನಗಳಲ್ಲಿಯೂ ಸಂತತವಾಗಿ ಪೂಜೆಗಳು ನಡೆಯುತ್ತಿರುವುವೋ ಆ ರಾಜನ ರಾಜ್ಯವು ಬಹಳ ಬೇಗ ಅಭಿವೃದ್ಧಿಸ್ಥಿತಿಗೆ ಬಂದೇ ಬರುತ್ತದೆ.

**ಅತಿವೃಷ್ಟಿರನಾವೃಷ್ಟಿರ್ಮೂಷಕಾಃ ಶಲಭಾಃ ಶುಕಾಃ ।**
**ರಾಕ್ಷಸಾಶ್ಚ ಪಿಶಾಚಾಶ್ಚ ರಿಪವಶ್ಚ ಸುದಾರುಣಾಃ ॥ ೪೮ ॥**

**ಈತಯಶ್ಚ ತಥೈವಾನ್ಯಾ ನ ಭವಂತಿ ದ್ವಿಜೋತ್ತಮ ॥ ೪೯ ॥**

**ತಸ್ಮಾತ್ಪ್ರಯತ್ನೇನ ಸದಾ ನರೇಂದ್ರೈಃ**
**ಪೂಜಾ ವಿಧೇಯಾ ವಿಷಯೇ ಸುರಾಣಾಂ ।**
**ಸುರಾರ್ಚನಾತ್ಪೂತಸಮಸ್ತಪಾಪಾಃ**
**ಸ್ವರ್ಗಂ ಕ್ಷಿತೀಶಾಃ ಚಿರಮಾಪ್ನುವಂತಿ ॥ ೫೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯ ಖಂಡೇ ಮಾರ್ಕಂಡೇಯ ವಜ್ರಸಂವಾದೇ ಸುರಪೂಜಾ ಮಾಹಾತ್ಮ್ಯವರ್ಣನಂನಾಮ ಏಕತ್ರಿಂಶೋಽಧ್ಯಾಯಃ**

---

೪೮-೫೦. ಯಾವ ರಾಜ್ಯದಲ್ಲಿರುವ ದೇವಸ್ಥಾನಗಳೆಲ್ಲದರಲ್ಲೂ ತಪ್ಪದೆ ವಿಧಿ ವಿಹಿತವಾಗಿ ಅರ್ಚನೆಗಳು ಕ್ರಮವಾಗಿ ನಡೆದುಬರುತಲಿರುವುವೋ ಆ ದೇಶದಲ್ಲಾವ ಕಡೆಯಲ್ಲಾದರೂ ಅತಿವೃಷ್ಟಿ, ಅನಾವೃಷ್ಟಿ, ಮೂಷಕ, ಶಲಭ, ಶುಕ, ರಾಕ್ಷಸ, ಪಿಶಾಚ, ಶತ್ರುಗಳೂ, ಭಯಂಕರ ಕ್ಷಾಮಗಳೂ ಪರಿಹಾರವಾಗುವುವಲ್ಲದೆ ಯಾವ ಈತಿಬಾಧೆಗಳೂ ಆ ರಾಜ್ಯದಲ್ಲಿ ನಿಲ್ಲುವುದಿಲ್ಲ. ಪರಶುರಾಮ! ಇದಕ್ಕಾಗಿಯೇ ಮಹಾರಾಜನಾದವನು ಸುರರ ವಿಷಯದಲ್ಲಿ ಮಾತ್ರ ತಿರಸ್ಕಾರಮಾಡದೆ, ಸಕಲ ಪ್ರಯತ್ನಗಳಿಂದಲೂ ತನ್ನ ರಾಜ್ಯದಲ್ಲಿರುವ ಎಲ್ಲಾ ದೇವಸ್ಥಾನಗಳಲ್ಲಿಯೂ ತಪ್ಪದೆ ಪೂಜೆಯನ್ನು ನಡೆಸಬೇಕು. ಈರೀತಿ ಮಾಡಿದರೆ ಅಂತಹ ಮಹಾರಾಜನು ತನ್ನ ಸಕಲ ಪಾಪಗಳನ್ನೂ ಸಕಲ ಕಷ್ಟಗಳನ್ನೂ ಪರಿಹಾರಮಾಡಿಕೊಂಡು ಚಿರಂಜೀವಿಯಾಗಿ ಬದುಕುತ್ತಾನೆ. ಹೀಗೆಂದು ಪರಶುರಾಮನಿಗೆ ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ ದ್ವಿತೀಯಖಂಡದಲ್ಲಿ ದೇವಪೂಜಾ ಮಾಹಾತ್ಮ್ಯವೆಂಬ ಹೆಸರಿನ ಮೂವತ್ತೊಂದನೆಯ ಅಧ್ಯಾಯ ಮುಗಿಯಿತು.

*

॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ದ್ವಾತ್ರಿಂಶೋಽಧ್ಯಾಯಃ

**ರಾಮ ಉವಾಚ**

**ಬ್ರಾಹ್ಮಣಾನ್ಪೂಜಯೇದ್ರಾಜಾ ಬ್ರಾಹ್ಮಣಾನ್ಪಾಲಯೇತ್ಸದಾ ।**
**ಬ್ರಾಹ್ಮಣಾ ಹಿ ಮಹಾಭಾಗ ದೇವಾನಾಮಪಿ ದೈವತಂ ॥ ೧ ॥**

**ಬ್ರಾಹ್ಮಣಾನಾಂ ಕ್ಷಿತಿಂದದ್ಯಾದ್ಭೋಗಾನನ್ಯಾಂಶ್ಚ ಪಾರ್ಥಿವಃ ।**
**ಬ್ರಾಹ್ಮಣೇಷು ತು ಯದ್ದತ್ತಂ ನಿಧಿಸ್ತತ್ಪಾರಲೌಕಿಕಂ ॥ ೨ ॥**

---

## ಮೂವತ್ತೆರಡನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನನ್ನು ಕುರಿತು ಪುನಃ ಹೇಳುತ್ತಾನೆ:—ಎಲೈ ಪರಶುರಾಮನೇ! ಇನ್ನು ಮುಂದೆ ಮಹಾರಾಜನಾದವನು ಬ್ರಾಹ್ಮಣರ ವಿಷಯದಲ್ಲಿ ಹೇಗೆನಡೆದುಕೊಳ್ಳಬೇಕೆಂಬ ವಿಷಯವನ್ನು ಹೇಳುವೆನು, ಕೇಳು. ಮಹಾರಾಜನು ಬ್ರಾಹ್ಮಣರನ್ನು ಪೂಜೆಮಾಡಬೇಕು. ಮತ್ತು ಅವರನ್ನು ಸಂರಕ್ಷಿಸಬೇಕು. ಎಲೈ ಪರಶುರಾಮನೇ! ಒಂದೇಒಂದು ಮಾತನ್ನು ಬ್ರಾಹ್ಮಣರ ವಿಚಾರವಾಗಿ ಹೇಳುವುದಾದರೆ ಬ್ರಾಹ್ಮಣರಾದವರು: ದೇವತೆಗಳಿಗಿಂತಲೂ (ದೇವತೆಗಳು) ಶ್ರೇಷ್ಠರೆಂದು ಹೇಳಬಹುದು.

೨. ಆದುದರಿಂದ ಪರಮಶ್ರೇಷ್ಠರಾದ ಬ್ರಾಹ್ಮಣರಿಗೆ ಮಹಾರಾಜನು ಭೂಮಿಯನ್ನು ದಾನಮಾಡಬೇಕು. ಇನ್ನೂ ಇತರವಿಧವಾದ ಭೋಗ್ಯಪದಾರ್ಥಗಳನ್ನು ಯಥೇಚ್ಛವಾಗಿ ಕೊಡಬೇಕು. ಯಾವುದೇ ಪದಾರ್ಥವನ್ನು ಬ್ರಾಹ್ಮಣರಿಗೆ ದಾನ ಮಾಡಿದಾಗ್ಗೂ ಅವೆಲ್ಲವುಗಳೂ ಪರಲೋಕದನಿಧಿಗಳಾಗಿ ಪರಿಣಮಿಸುತ್ತವೆ.

**ವೇದಲಾಂಗಲಕೃಷ್ಟೇಷು ದ್ವಿಜಕ್ಷೇತ್ರೇಷು ಭಾರತ ।**
**ಉಪ್ತಸ್ಯ ದಾನಬೀಜಸ್ಯ ಫಲಸ್ಯಾಂತೋ ನ ವಿದ್ಯತೇ ॥ ೩ ॥**

**ಬ್ರಹ್ಮಸ್ವಂ ಚೈವ ನಾದದ್ಯಾದ್ಬ್ರಹ್ಮಸ್ವಂ ಪಾಲಯೇತ್ತಥಾ ।**
**ಬ್ರಹ್ಮಸ್ವಹರಣಾದ್ರಾಮ ನರಕಂ ಪಶ್ಯತೇ ನರಃ ॥ ೪ ॥**

**ನವಿಷಂ ವಿಷಮಿತ್ಯಾಹುರ್ಬ್ರಹ್ಮಸ್ವಂ ವಿಷಮುಚ್ಯತೇ ।**
**ವಿಷಮೇಕಾಕಿನಂ ಹನ್ತಿ ಬ್ರಹ್ಮಸ್ವಂ ಸಪ್ತಪೂರುಷಂ ॥ ೫ ॥**

**ಬ್ರಹ್ಮಸ್ವಂ ಪ್ರಣಯಾದ್ಭುಕ್ತಂ ಹಿನಸ್ತ್ಯಾಸಪ್ತಮಂ ಕುಲಂ ।**
**ದ್ರೋಹಾದ್ಭುಕ್ತಂ ತದೇವೇಹ ಕುಲಾನಾಂ ಪಾತಯೇಚ್ಛತಂ ॥ ೬ ॥**

---

೩. ಬ್ರಾಹ್ಮಣರೆಂಬ ಕ್ಷೇತ್ರದಲ್ಲಿ ವೇದವೆಂಬ ನೇಗಿಲಿನಿಂದುತ್ತು ಹದಮಾಡಿದ ನೆಲದಲ್ಲಿ ದಾನವೆಂಬ ಬೀಜವನ್ನಾರು ಬಿತ್ತುವರೋ, ಆ ಬೀಜವು ಕುಯ್ಲಿಗೆಬಂದಾಗ ಅದರಲ್ಲಿಬಿಡುವ ಫಲಕ್ಕೆ ತುದಿ ಮೊದಲೇ ಇಲ್ಲ. ಅಂದರೆ ಅದು ಅಕ್ಷಯವಾಗುತ್ತಲೇ ಇರುವುದೆಂದು ತಿಳಿಯಬೇಕು.

೪. ಒಂದುವೇಳೆ ಬ್ರಾಹ್ಮಣರು ಸಂಪಾದಿಸಿದ ಸ್ವತ್ತು ಮಹಾರಾಜನ ಅಧೀನ ದಲ್ಲಿದ್ದಿತೆಂದು ಭಾವಿಸೋಣ. ಅಂತಹ ಸ್ವತ್ತನ್ನು ಇನ್ನೊಬ್ಬರಿಗೂ ಕೊಡಕೂಡದು. ಅಂತಹ ಬ್ರಹ್ಮಸ್ವ (ಬ್ರಾಹ್ಮಣರಸ್ವತ್ತು)ವನ್ನು ಜೋಪಾನವಾಗಿ ಕಾಪಾಡಿಕೊಂಡಿರ ಬೇಕು. ಹಾಗೆಮಾಡದೆ ಅದನ್ನು ಅಪಹರಿಸುವುದಾದರೆ ಅಂತಹವನು ನರಕದ ಬಾಗಿಲ (ಮುಖವ)ನ್ನು ನೋಡಬೇಕಾಗಿ ಬರುತ್ತದೆ.

೫. ವಿಷಕ್ಕೆ, ಪ್ರಾಣಕಳೆಯುವ ವಿಷವೆಂಬ ಹೆಸರು ಸಲ್ಲಲಾರದು ಆ ವಿಷವು ಪ್ರಾಣಕಳೆಯುವುದಾದರೆ ಸೇವಿಸಿದವನೊಬ್ಬನ ಪ್ರಾಣವನ್ನೇ ಕಳೆಯಬಲ್ಲುದು. ನಿಜ ವಾದ ವಿಷವೆನಿಸುವ ಬ್ರಹ್ಮಸ್ವವುಮಾತ್ರ ಸಪ್ತಪೂರುಷ (ಏಳುತಲೆಯ) ಪರ್ಯಂತರ ವಾದ ವಂಶವನ್ನೇ ತೊಡೆದುಬಿಡುವುದು.

೬. ಮೊದಲು ಉಪಭೋಗಿಸುವ ಸಮಯದಲ್ಲಿ ಬಹುಹಿತವಾಗಿ ಕಂಡುಬರ ಬಹುದಾದ ಆ ಬ್ರಹ್ಮಸ್ವವು ಕೊನೆಗೆ ಸಪ್ತಕುಲವನ್ನೂ ನಾಶಮಾಡಿಬಿಡುವುದು. ಹೀಗಿರುವಲ್ಲಿ ದ್ರೋಹದಿಂದೇನಾದರೂ ಬ್ರಹ್ಮಸ್ವವನ್ನು ಅಪಹರಿಸಿಬಿಡುವುದಾದರೆ (ದೈವಯೋಗಬಲದಿಂದ ಅವನ ವಂಶವೇನಾದರೂ ಉಳಿದಿದ್ದಪಕ್ಷದಲ್ಲಿ) ಅದು ಮುಂದೆ

**ಸುವರ್ಣಮೇಕಂ ಗಾಮೇಕಾಂ ಭೂಮೇ ರಪ್ಯೇಕಮಂಗುಲಂ ।**
**ಹರನ್ನರಕಮಾಪ್ನೋತಿ ಯಾ ವದಾಭೂತಸಂಪ್ಲವಂ ॥ ೭ ॥**

**ದೃಷ್ಟ್ವಾ ವಿಟಂ ದುರಾಚಾರಂ ಬ್ರಾಹ್ಮಣಂ ನ ದ್ವಿಷೇತ್ಕ್ವಚಿತ್ ।**
**ಬ್ರಾಹ್ಮಣಾನಾಂ ಪರೀವಾದಾನ್ನಾಶಮಾಪ್ನೋತಿ ಮಾನವಃ ॥ ೮ ॥**

**ನ ಜಾತು ಬ್ರಾಹ್ಮಣಂ ಹನ್ಯಾತ್ಸರ್ವಪಾಪೇಷ್ವವಸ್ಥಿತಂ ।**
**ನೈವಾಸ್ತಿ ಬ್ರಾಹ್ಮಣವಧಾತ್ಪಾಪಂ ಗುರುತರಂ ಕ್ವಚಿತ್ ॥ ೯ ॥**

---

ನೂರುತಲೆಯವರೆಗಿನ ವಂಶವನ್ನು ನಿರ್ನಾಮಮಾಡಿ ಬಿಡುವುದು. (ಇದಕ್ಕೆ ಜನರು ನಾನಾವಿಧವಾಗಿ ಅಪಾರ್ಥವನ್ನು ಕಲ್ಪಿಸಬಹುದು) ಹಾಗೆ ಕಲ್ಪಿಸಲೇಕೂಡದು. ಮುಖ್ಯವಾಗಿ ಬ್ರಾಹ್ಮಣರಸ್ವತ್ತನ್ನು ಅಪಹರಿಸಲು ಆಶೆಮಾಡಬಾರದೆಂಬ ನೀತಿಯನ್ನು ಮಾತ್ರ ಇಲ್ಲಿ ಕಲಿಯಬೇಕು.

೭. ಬ್ರಾಹ್ಮಣರಿಗೆ ಸಂಬಂಧಪಟ್ಟ ಒಂದು ಚೂರು ಚಿನ್ನವನ್ನಾಗಲೀ ಒಂದು ಹಸುವನ್ನಾಗಲೀ ಒಂದೇ ಒಂದಂಗುಲ ಅಳತೆಯ ನೆಲವನ್ನಾಗಲೀ ಅಪಹರಿಸಿಬಿಟ್ಟರೆ ಈ ಪ್ರಪಂಚವಿರುವ (ಆಭೂತಸಂಪ್ಲವ) ವರೆಗೂ ನರಕದಲ್ಲಿ ಬಿದ್ದಿರಬೇಕಾದೀತು! ಎಚ್ಚರವಿರಲಿ !!

೮. ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನಾವನಾದರೊಬ್ಬನು ಜಾತಿಕೆಟ್ಟು ಬರೀ ವ್ಯಭಿಚಾರದಿಂದಲೇ ಕಾಲಗಳೆಯುತ್ತಿದ್ದಾಗ್ಗೂ, ಅಂತಹ ಅಧಮನನ್ನೂ ಸಹ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನೆಂಬ ಗೌರವವನ್ನು ಕೊಟ್ಟು ಅವನ ಸಂಗಡ ಯಾರೂ ವಿರೋಧ (ಶತ್ರು) ಭಾವವನ್ನು ಮಾಡಿಕೊಳ್ಳಬಾರದು. ಬ್ರಾಹ್ಮಣ ಮಾತ್ರನಾದವನಿಗೆ ಅವಮಾನ (ತೇಜೋವಧೆ) ಮಾಡುವುದಾದರೆ ಅಂತಹ ಪರಿಹಾಸ ಮಾಡಿದ ಮನುಷ್ಯನು ಹಾಳಾಗಿಹೋಗುತ್ತಾನೆ.

೯. ಬ್ರಾಹ್ಮಣನಾದವನು ಮಾಡಬಾರದ ಸಕಲ ಪಾಪಗಳನ್ನು ಲೆಖ್ಖವಿಲ್ಲ ದಷ್ಟು ಮಾಡಿದ್ದಾಗ್ಗೂ ಅವನನ್ನು ಮರಣದಂಡನೆಗೆ ಗುರಿಪಡಿಸಬಾರದು. ಬ್ರಾಹ್ಮಣ ವಧೆಗಿಂತ ಗುರುತರವಾದ ಇನ್ನೊಂದು ಪಾಪವು ಇಲ್ಲವೇ ಇಲ್ಲ.

ಬ್ರಹ್ಮಹಾ ನರಕಂ ಯಾತಿ ಯಾವದಾಭೂತಸಂಪ್ಲವಂ ।
ವರ್ಷಾಣಾಮಯುತಂ ರಾಮ ಪಚ್ಯತೇ ಸ್ನಾಯುಪೂರಿತೇ ॥ ೧೦ ॥

ಶೋಣಿತಂ ಯಾವತಃ ಪಾಂಸೂನ್ಗೃಹ್ಣಾತೀಹ ದ್ವಿಜನ್ಮನಾಂ ।
ಕರ್ತಾ ತಾವಂತಿ ವರ್ಷಾಣಿ ಕೃತಕೃನ್ನರಕೇ ವಸೇತ್ ॥ ೧೧ ॥

ಉಪದ್ರುತೋ ದ್ವಿಜೋ ಯೇನ ತ್ಯಜೇಜ್ಜೀವಿತಮಾತ್ಮನಃ ।
ಬ್ರಹ್ಮಹತ್ಯಾ ಭವೇತ್ತಸ್ಯ ನಾತ್ರಕಾರ್ಯಾ ವಿಚಾರಣಾ ॥ ೧೨ ॥

ದೇಹತ್ಯಾಗಾಚ್ಚ ನರಕಂ ಬ್ರಾಹ್ಮಣೋಽಪಿ ಪ್ರಪದ್ಯತೇ ।
ತೇನ ಚಾಧಿಕಮಾಪ್ನೋತಿ ರಾಮ ಪಾಪಂ ನರಾಧಮಃ ॥ ೧೩ ॥

---

೧೦. ಬ್ರಾಹ್ಮಣನನ್ನು ಕೊಂದವನು ಪ್ರಪಂಚವಿರುವವರೆವಿಗೂ ನರಕದಲ್ಲೇ ವಾಸಮಾಡಬೇಕಾಗುವುದಲ್ಲದೆ ಹತ್ತುಸಾವಿರ ವರ್ಷಗಳವರೆಗೆ ಕೊಬ್ಬುಮಾಂಸಗಳಿಂದ ತುಂಬಿದ ನರಕದಲ್ಲಿ ಮುಳುಗಿರಬೇಕು.

೧೧. ಬ್ರಾಹ್ಮಣರ ರಕ್ತದ ಹನಿಗಳು ಯಾವನ ಹಿಂಸೆಯಿಂದ ನೆಲದಲ್ಲಿ ತೊಟ್ಟಿಕ್ಕುವುವೋ ಅಷ್ಟು ಸಾವಿರವರ್ಷಗಳ ತನಕ ಆ ಹಿಂಸೆಮಾಡಿದ ದುರಾತ್ಮನು ನರಕದಲ್ಲಿ ವಾಸಮಾಡಬೇಕಾಗುವುದು.

೧೨. ಯಾವನ ಹಿಂಸಾಕೃತ್ಯದಿಂದ ಬ್ರಾಹ್ಮಣನು ಪೀಡಿಸಲ್ಪಟ್ಟವನಾಗಿ ತನ್ನ ಪ್ರಾಣಗಳನ್ನು ತ್ಯಾಗಮಾಡುವನೋ ಆ ಬ್ರಾಹ್ಮಣನನ್ನು ಪೀಡಿಸಿದ ದುರಾತ್ಮನಿಗೆ ಬ್ರಹ್ಮಹತ್ಯೆಮಾಡಿದ ಪಾಪವು ಸಂಘಟಿಸುತ್ತದೆ. ಈ ವಿಷಯದಲ್ಲಿ ಯಾವ ಸಂದೇಹಕ್ಕೂ ಅವಕಾಶವಿಲ್ಲ.

೧೩. ಒಬ್ಬನಿಂದ ಹಿಂಸಿಸಲ್ಪಟ್ಟ ಬ್ರಾಹ್ಮಣನು ಪ್ರಾಣಗಳನ್ನು ಬಿಟ್ಟರೆ ಅವನಿಗೂ ನರಕವಾಸವೇ ಸಿದ್ಧ. ಹಿಂಸೆಮಾಡಿದ ಮನುಷ್ಯನಿಗಂತೂ ಅದಕ್ಕಿಂತ ಎಷ್ಟೋ ಪಾಲಿನಷ್ಟು ಪಾಪವೂ ನರಕವೂ ಪ್ರಾಪ್ತಿಯಾಗುವುದು.

**ಅದ್ಯೈವಂ ದೈವತಂ ಕುರ್ಯುಃ ಕುರ್ಯುರ್ದೈವಮದೈವತಂ ।**
**ಬ್ರಾಹ್ಮಣಾಶ್ಚ ಮಹಾಭಾಗಾ ನಮಸ್ಯಾಸ್ತೇ ಸದೈವ ಹಿ ॥ ೧೪ ॥**

**ಬ್ರಾಹ್ಮಣಾನಾಂ ತಥಾ ಕಾರ್ಯಂ ಯತ್ನಾತ್ಕುರ್ವೀತ ಪಾರ್ಥಿವಃ ।**
**ಕಾಲಾತಿಪಾತಂ ಚ ತಥಾ ವಿಪ್ರಕಾರ್ಯೇ ನ ಕಾರಯೇತ್ ॥ ೧೫ ॥**

**ನಿಷ್ಪೀಡಿತಸ್ತೂಪವಸೇದ್ಯೇನ ವಿದ್ವಾನ್ನಿಶಾಂ ಜನಃ ।**
**ಸ ರಾಮ ನರಕಂ ಯಾತಿ ವರ್ಷಾಣಾಂ ತು ದಶಾಯುತಂ ॥ ೧೬ ॥**

**ಬ್ರಾಹ್ಮಣೀ ರುದತೀ ಹನ್ತಿ ಕುಲಂ ರೋದಾಯತೇ ಧ್ರುವಂ**
**ತದಶ್ರುವಹ್ನಿರ್ದಹತಿ ಕುಲಂ ತ್ರಿಪುರುಷಂ ಧ್ರುವಂ ॥ ೧೭ ॥**

---

೧೪. ಓ! ಪರಶುರಾಮ! ಬ್ರಾಹ್ಮಣರಿಗಿರುವ ಶಕ್ತಿಯೆಂತಹುದೆಂಬುದನ್ನು ವಿವರಿಸುವೆನು ಕೇಳು. ಬ್ರಾಹ್ಮಣರು ದೇವರಲ್ಲದ ವಸ್ತುವಿನಲ್ಲಿ ದೇವತೆಯನ್ನಾವಾಹಿಸಿ ಪ್ರಾಣಗಳನ್ನು ತುಂಬಬಲ್ಲರು. ದೇವರಲ್ಲಿರುವ ಶಕ್ತಿಯನ್ನಾಕರ್ಷಿಸಿ (ಕಲಾಕರ್ಷಣಾದಿಗಳಮೂಲಕ) ಅದನ್ನು ದೇವರಲ್ಲದಂತೆ ಮಾಡುವರು. ಆದ್ದರಿಂದ ಮಹಾಭಾಗರಾದ ಬ್ರಾಹ್ಮಣರನ್ನು ಸರ್ವದಾ ನಮಸ್ಕಾರಮಾಡುತಲಿರಬೇಕು.

೧೫. ಬ್ರಾಹ್ಮಣರಾದವರು ಏನಾದರೂ ಕೆಲಸವಾಗಬೇಕೆಂದು ಕೇಳಿಕೊಂಡರೆ ಅದನ್ನು ಮಹಾರಾಜನು ಪ್ರಯತ್ನಪೂರ್ವಕವಾಗಿ ಮಾಡಿಕೊಡಬೇಕು. ಈರೀತಿ ಬ್ರಾಹ್ಮಣರ ಕೆಲಸ ಮಾಡುವುದರಲ್ಲಿ ಮಾತ್ರ ಖಂಡಿತವಾಗಿಯೂ ಕಾಲಹರಣ ಮಾಡಲೇಬಾರದು.

೧೬. ಯಾವ ಮನುಷ್ಯನಿಂದ ಬ್ರಾಹ್ಮಣನು ಪೀಡಿತನಾಗಿ ಒಂದು ರಾತ್ರಿ ಉಪವಾಸಮಾಡುವನೋ ಆ ಪೀಡಾಕಾರಕನಾದವನು ಒಂದುಲಕ್ಷ ವರ್ಷದವರಿವಿಗೆ ನರಕದಲ್ಲಿ ವಾಸಮಾಡಬೇಕಾಗುವುದು.

೧೭. ಬ್ರಾಹ್ಮಣಸ್ತ್ರೀಯಾದವಳು ಯಾರಿಂದ ಬಾಧಿತಳಾಗಿ ರೋದನಮಾಡುವಳೋ, ಆ ರೋದನ ಕಾರಣನಾದವನು ನಿಜವಾಗಿ ದುಃಖಭಾಗಿಯಾಗುವನಲ್ಲದೆ, ಅವಳ ಕಣ್ಣೀರಿನಿಂದ ಹುಟ್ಟಿದ ಬೆಂಕಿಯಿಂದ ಅವನ ಮೂರು ತಲೆಯವರೆಗಿನ ವಂಶವೂ ದಗ್ಧವಾಗಿ ಹೋಗುತ್ತದೆ.

**ವಿದ್ವಾನಪ್ಯಥವಾಽವಿದ್ವಾನ್ಬ್ರಾಹ್ಮಣೋ ಮಾನಮರ್ಹತಿ ।**
**ಪ್ರಣೀತಶ್ಚಾ ಪ್ರಣೀತಶ್ಚ ಯಥಾಽಗ್ನಿರ್ದ್ವಿಜಪುಂಗವ ॥ ೧೮ ॥**

**ಪ್ರತಿಷ್ಠಾಂ ಪ್ರಾಪ್ನುವಂತೀಹ ಸುರಾ ವಿಪ್ರಪ್ರತಿಷ್ಠಿತಾಃ ॥ ೧೯ ॥**

**ತಸ್ಮಾಚ್ಚೀ ತು ತಥಾಽಶ್ನನ್ತಿ ದೇವಾಶ್ಚ ಪಿತೃಭಿಸ್ಸಹ ।**
**ವಹ್ನೌ ಹುತಾಚ್ಛ್ರೇಷ್ಠತಮಂ ಹುತಂ ವಿಪ್ರಮುಖಾಗ್ನಿಷು ॥ ೨೦ ॥**

**ಅಸ್ಕಂದಮವಿರುದ್ಧಂ ಚ ಪ್ರಾಯಶ್ಚಿತ್ತೈರ್ವಿವರ್ಜಿತಂ ।**
**ಯಾವತೋ ಗ್ರಸತೇ ಗ್ರಾಸಾನ್ವಿದ್ವಾನ್ವಿಪ್ರಃ ಸುಸಂಸ್ಕೃತಃ ॥ ೨೧ ॥**

---

೧೮. ಬ್ರಾಹ್ಮಣನಾದವನು ವಿದ್ವಾಂಸನಾಗಿರಲೀ ಅಥವಾ ಅವಿದ್ಯಾವಂತನಾಗಿರಲೀ ಅವನನ್ನು ಯಾರಾದರೂ ನಮಸ್ಕಾರಮಾಡಲೀ ಅಥವಾ ಮಾಡದೇ ಇರಲಿ, ಒಟ್ಟಿನಮೇಲೆ ಬ್ರಾಹ್ಮಣಮಾತ್ರನಾದವನು ಸನ್ಮಾನಾರ್ಹನೆಂದು ತಿಳಿದು ಕೊಳ್ಳಬೇಕು. ಅದೆಂತೆಂದೊಡೆ;—ಯಜ್ಞೇಶ್ವರನು ಹೇಗೆ ಪೂಜ್ಯನೋ ಅದರಂತೆ ಬ್ರಾಹ್ಮಣನೂ ಪೂಜ್ಯನು. (ಯಜ್ಞೇಶ್ವರನು ಹೊರಗೆ ಉರಿಯುತ್ತಾನೆ. ಬ್ರಾಹ್ಮಣನ ಜಠರಾಗ್ನಿಯು ಒಳಗೇ ದಹನಮಾಡುತ್ತದೆ.)

೧೯-೨೦. ಬ್ರಾಹ್ಮಣರಿಂದ ಪ್ರತಿಷ್ಠಿತರಾದರೆ (ಪ್ರಾಣಪ್ರತಿಷ್ಠೆ ಮಾಡಿದರೆ) ದೇವತೆಗಳು ಪ್ರತಿಮಾ(ವಿಗ್ರಹಾ)ದಿಗಳಲ್ಲಿ ಸನ್ನಿಹಿತರಾಗುತ್ತಾರೆ. ಸಕಲ ದೇವತೆಗಳೂ ಪಿತೃಗಳೂ ಬ್ರಾಹ್ಮಣರ ಮುಖದಿಂದ (ಭೋಜನಮಾಡಿ) ತೃಪ್ತರಾಗುತ್ತಾರೆ. ಯಜ್ಞಯಾಗಾದಿಗಳನ್ನು ಕಷ್ಟಪಟ್ಟು ಮಾಡಿ ಅಗ್ನಿಯಲ್ಲಿ ಹೋಮಮಾಡುವುದಕ್ಕಿಂತಲೂ ಬ್ರಾಹ್ಮಣರ ಮುಖವೆಂಬ ಅಗ್ನಿ ಪುರುಷನಲ್ಲಿ ಹೋಮಮಾಡುವುದು ಬಹಳ ಶ್ರೇಷ್ಠವಾದ ಕೆಲಸ. (ಅಂದರೆ ಬ್ರಾಹ್ಮಣ ಸಂತರ್ಪಣೆ ಮಾಡೋಣದರಿಂದ ಯಜ್ಞಯಾಗಾದಿಗಳಿಂದ ದೊರಕುವ ಪುಣ್ಯವು ಲಭ್ಯವಾಗುವುದೆಂದರ್ಥ).

೨೧. ಧರ್ಮಶಾಸ್ತ್ರಮರ್ಯಾದೆಯನ್ನು ಮೀರದೆ ಯಾವನು ಪರಮ ಭಕ್ತಿಯಿಂದ ಯಾವ ಪ್ರಾಯಶ್ಚಿತ್ತಕ್ಕೂ ಗುರಿಯಾಗದೆ ಬ್ರಾಹ್ಮಣ ಸಮಾರಾಧನೆಯನ್ನು ಮಾಡುವನೋ ಆ ಅನ್ನವನ್ನು ಸುಸಂಸ್ಕೃತರಾದ (ಪರಮಪಾವನರಾದ) ಬ್ರಾಹ್ಮಣರು ಊಟಮಾಡಿದರೆ ಆ ಬ್ರಾಹ್ಮಣರ ಹೊಟ್ಟೆಯಲ್ಲಿ ಎಷ್ಟು ತುತ್ತು ಅನ್ನಗಳು ಬೀಳುವುವೋ, ಆ ಅನ್ನದಾತನಿಗೆ ಅಷ್ಟು ಸಂಖ್ಯಾಕವಾದ ಕ್ರತುಗಳನ್ನು ಮಾಡಿದ ಪುಣ್ಯವು ಲಭ್ಯವಾಗುತ್ತದೆ.

ಅನ್ನಪ್ರದಸ್ಯ ತಾವಂತಃ ಕ್ರತವಃ ಪರಿಕೀರ್ತಿತಾಃ ।
ಬ್ರಾಹ್ಮಣಾನಾಂ ಕರಾನ್ಮುಕ್ತಂ ತೋಯಂ ಶಿರಸಿ ಧಾರಯೇತ್ ॥ ೨೨ ॥

ಬ್ರಾಹ್ಮಣಸ್ಯ ಕರೇ ಯಸ್ಮಾತ್ಸರ್ವತೀರ್ಥಸಮಾಗಮಃ ।
ಬ್ರಾಹ್ಮಣೇಭ್ಯಃ ಸಮುತ್ಪನ್ನಂ ತ್ರೈಲೋಕ್ಯಂ ಸಚರಾಚರಂ ॥ ೨೩ ॥

ಅಮೋಘಶಾಪಾ ಧರ್ಮಜ್ಞಾ ಕಥಿತಾಸ್ತೇ ಜಗತ್ತ್ರಯೇ ।
ಆಶೀರ್ವಾದಮಮೋಘಂ ಚ ಬ್ರಾಹ್ಮಣಾನಾಂ ಪ್ರಕೀರ್ತಿತಂ ॥ ೨೪ ॥

ಆಶೀರ್ವಾದಪರಾಃ ಕಾರ್ಯಾಸ್ತಸ್ಮಾದ್ರಾಜ್ಞಾ ದ್ವಿಜೋತ್ತಮಾಃ ।
ಯೈಃ ಕೃತಃ ಸರ್ವಭಕ್ಷ್ಯೋಽಗ್ನಿರಪೇಯಶ್ಚ ಮಹೋದಧಿಃ ॥ ೨೫ ॥

ಕ್ಷಯೀ ಸೋಮೋಽಥವೃಷಣಸ್ತಥೈವ ಚ ಶತಕ್ರತುಃ ।
ಯೇಷಾಂ ಕೋಪಾಗ್ನಿರದ್ಯಾಪಿ ದಂಡಕೇ ನೋಪಶಾಮ್ಯತಿ ॥ ೨೬ ॥

---

೨೨-೨೩. ಬ್ರಾಹ್ಮಣರ ಹಸ್ತಗಳಲ್ಲಿ ಸಕಲ ವಿಧವಾದ ತೀರ್ಥಗಳೂ ವಾಸಮಾಡಿಕೊಂಡಿವೆಯಾದ್ದರಿಂದ ಬ್ರಾಹ್ಮಣರ ಹಸ್ತದಿಂದ ಹೊರಟ ಜಲವನ್ನು ಎಲ್ಲರೂ ಧರಿಸಬೇಕು. (ಪ್ರೋಕ್ಷಿಸಿಕೊಳ್ಳಬೇಕು.) ಎಷ್ಟು ವರ್ಣನೆ ಮಾಡಿದುದರಿಂದೇನು ಪ್ರಯೋಜನ! ಒಟ್ಟಿನ ಮೇಲೆ ಹೇಳುವುದಾದರೆ ಚರಾಚರಾತ್ಮಕವಾದೀ ಪ್ರಪಂಚವೆಲ್ಲವೂ ಬ್ರಾಹ್ಮಣರಿಂದಲೇ ಸಮುತ್ಪನ್ನವಾದುದೆಂದು ಭಾವಿಸಬೇಕು.

೨೪. ಮೂರು ಲೋಕದಲ್ಲೂ ಬ್ರಾಹ್ಮಣರ ಶಾಪವು ಸುಳ್ಳಾಗುವುದಿಲ್ಲ. ಅದೇ ಮೇರೆ ಬ್ರಾಹ್ಮಣರು ಮಾಡಿದ ಆಶೀರ್ವಾದವೂ ಸಹ ಅಮೋಘ (ಸುಳ್ಳಲ್ಲ)ವೆಂದು ನಿಜವಾಗಿಯೂ ತಿಳಿದಿರಬೇಕು.

೨೫. ಆದುದರಿಂದಲೇ ರಾಜರಾದವರು ಯಾವಾಗಲೂ ಬ್ರಾಹ್ಮಣಾಶೀರ್ವಾದಪರರಾಗಿರಬೇಕು. ಯಾವ ಈ ಬ್ರಾಹ್ಮಣರಿಂದಲೇ ಅಗ್ನಿಗೆ ಸರ್ವಭಕ್ಷಕತ್ವವು ಪ್ರಾಪ್ತವಾಯಿತೋ, ಕುಡಿಯಲಸಾಧ್ಯವಾದ ಸಮುದ್ರವು ಯಾವ ಈ ಬ್ರಾಹ್ಮಣರಿಂದಲೇ ಪಾನಮಾಡಲ್ಪಟ್ಟಿತೋ ಅಂತಹ ಮಹಾಶಕ್ತಿಯುಳ್ಳ ಬ್ರಾಹ್ಮಣರ ವಿಷಯದಲ್ಲಿ ಬಹಳ ಭಕ್ತಿಯಿಂದಿರಬೇಕು.

೨೬. ಬ್ರಾಹ್ಮಣರ ಶಾಪದಿಂದಲೇ ಅಲ್ಲವೆ ಇಂದ್ರನು ಅಜವೃಷಣನಾಗಿ ಪರಿಣಮಿಸಿದುದು? ಬ್ರಾಹ್ಮಣರ ಕೋಪಾಗ್ನಿಯು ಇಂದಿಗೂ ದಂಡಕಾರಣ್ಯದಲ್ಲಿ ಉಪಶಮನವಾಗದೆ ಕಣ್ಣಿಗೆ ಕಾಣಿಸುತ್ತಾ ಇಲ್ಲವೆ ?

ವಿಪುಲಶ್ಚ ತಥಾ ಯೇಷಾಂ ಪ್ರಸಾದೋ ಭೃಗುನಂದನ ।
ಯೇಷಾಂ ಪ್ರಸಾದಾತ್ ಕ್ಷೀಣೋಽಪಿ ವೃದ್ಧಿಮೃಚ್ಛತಿ ಚಂದ್ರಮಾಃ ॥ ೨೭ ॥

ಯೇಷಾಂ ಪ್ರಸಾದಾತ್‌ರಕ್ಷೋಭಿಃ ನಾಭಿಭೂಯೇತ ಭಾಸ್ಕರಃ ।
ಯೇಷಾಂ ಪ್ರಸಾದಾದ್ವಿಪುಲಾಂ ಕಾರ್ತವೀರ್ಯಃ ಶ್ರಿಯಂ ಗತಃ ॥ ೨೮ ॥

ಯೇಷಾಂ ಪ್ರಸಾದಾದ್ಧನದೋ ಧನಾಧ್ಯಕ್ಷತ್ವಮಾಗತಃ ।
ಅಸ್ನಾತಃ ಸ್ನಾನಮಾಪ್ನೋತಿ ವ್ರತಮಾಪ್ನೋತ್ಯಥಾ ವ್ರತೀ ॥ ೨೯ ॥

ಯೇಷಾಂ ವಚನಮಾತ್ರೇಣ ಕಿಂಭೂತಮಧಿಕಂ ತತಃ ।
ಭೋಗಂ ರಾಜ್ಯಂ ತಥಾ ಸ್ವರ್ಗಂ ಯೇಷಾಂ ವಾಕ್ಯೇನ ಲಭ್ಯತೇ ॥ ೩೦ ॥

---

೨೭. ಇದರಂತೆಯೇ ಬ್ರಾಹ್ಮಣರ ಅನುಗ್ರಹವೂ ಮಹತ್ತರವಾದ ಶ್ರೇಯಸ್ಸನ್ನೇ ಉಂಟುಮಾಡತಕ್ಕುದಾಗಿರುವುದು. ಅದೆಂತೆಂದರೆ; ಕೃಷ್ಣಪಕ್ಷದ ಚಂದ್ರನು ಬ್ರಾಹ್ಮಣಾನುಗ್ರಹದಿಂದಲೇ ವೃದ್ಧಿಯನ್ನು ಶುಕ್ಲಪಕ್ಷದಲ್ಲಿ ಹೊಂದುತ್ತಿರುವುದು ಪ್ರತ್ಯಕ್ಷ ಪ್ರಮಾಣವಲ್ಲವೇ ?

೨೮-೨೯. ಇದೇ ಬ್ರಾಹ್ಮಣರ ಪರಮಾನುಗ್ರಹದಿಂದ ಕುಬೇರನು ಧನಾಧ್ಯಕ್ಷತ್ವವನ್ನು ಪಡೆಯಲಿಲ್ಲವೆ? ಸ್ನಾನಮಾಡದೆ ಅಶುಚಿಯಾದ ಮನುಷ್ಯನು ಬ್ರಾಹ್ಮಣರ ವಚನ ಮಾತ್ರದಿಂದಲೇ ಸ್ನಾನಮಾಡಿದ ಫಲವನ್ನು ಹೊಂದುವುದಿಲ್ಲವೆ? ಯಾವ ವ್ರತವನ್ನು ಮಾಡದೆ ಇದ್ದಾಗ್ಗೂ, ನೀನು ವ್ರತಮಾಡಿದ ಫಲವನ್ನು ಹೊಂದಿದೆಯೆಂದು ಬ್ರಾಹ್ಮಣರ ವಚನವು ಹೊರಹೊರಟರೆ ಅಂಥವನು ವ್ರತಮಾಡಿದ ಪುಣ್ಯವನ್ನು ಹೊಂದುವುದಿಲ್ಲವೆ ?

೩೦. ಬ್ರಾಹ್ಮಣರ ವಚನ ಮಾತ್ರದಿಂದಲೇ ಸಕಲ ಸಿದ್ಧಿಗಳೂ ಉಂಟಾಗುತ್ತಿರುವುದರಿಂದ ಈ ವಿಚಾರವನ್ನು ಹೆಚ್ಚಾಗಿ ವಿವರಿಸಿದುದರಿಂದೇನೂ ಪ್ರಯೋಜನವಿಲ್ಲ. ಭೋಗವೂ, ರಾಜ್ಯವೂ, ಹಾಗೂ ಸ್ವರ್ಗಸುಖವೂ ಬ್ರಾಹ್ಮಣರ ಪ್ರಸಾದದಿಂದಲೇ ಲಭ್ಯವಾಗುತ್ತವೆ.

**ಅಪಾವನಕರಃ ಕ್ರೋಧೋ ಯೇಷಾಂ ರಾಮ ಸದಾ ಸ್ಥಿತಃ ।**
**ತೇ ಪೂಜ್ಯಾಸ್ತೇ ಚ ಸತ್ಕಾರ್ಯಾಸ್ತೇಷಾಂ ದಾರಾಣಿ ದಾಪಯೇತ್ ॥ ೩೧ ॥**

**ಧಾರಯಂತಿ ಜಗತ್ಸರ್ವಂ ಬ್ರಾಹ್ಮಣಾ ವೇದಪಾರಗಾಃ ।**
**ದೇವಾನಾಪ್ಯಾಯಯಂತೀಹ ಬ್ರಾಹ್ಮಣಾ ಭೃಗುನಂದನ ॥ ೩೨ ॥**

**ತೇ ತೃಪ್ತಾಸ್ತರ್ಪಯಂತೀಹ ಭುವನಂ ಸಕಲಂ ಸುರಾಃ ।**
**ಬ್ರಾಹ್ಮಣೇನಾಹುತಿರ್ದತ್ತಾ ವಹ್ನೌ ಭೃಗುಕುಲೋದ್ವಹ ॥ ೩೩ ॥**

---

೩೧. ಬಹು ಅಶುಚಿಯಾದ ಕೋಪವು ಬ್ರಾಹ್ಮಣರ ಜನ್ಮಸಿದ್ಧವಾದ ಹಕ್ಕೋ ಎಂಬಂತೆ ಅವರಲ್ಲಿ ಸರ್ವದಾ ವಾಸಮಾಡಿಕೊಂಡಿರುತ್ತದೆ. ಇಂತಹ ಕೋಪಿಷ್ಠರಾದ ಬ್ರಾಹ್ಮಣರನ್ನು ಸರ್ವದಾ ಸತ್ಕಾರಮಾಡಬೇಕು. ಅವರಿಗೆ ಕನ್ಯಾದಾನಾದಿಗಳನ್ನು ಮಾಡಬೇಕು.

೩೨. ವೇದಾಧ್ಯಯನವನ್ನು ಮಾಡಿದ ಬ್ರಾಹ್ಮಣರು ಸಕಲ ಲೋಕವನ್ನೂ ಧರಿಸುತ್ತಾರೆ. ಈ ವೇದಾಧ್ಯಯನ ಬಲದಿಂದಲೇ ವೇದೋಕ್ತ ಕ್ರಮದಿಂದ ಈ ವೇದ ವೇತ್ತರು ದೇವತೆಗಳನ್ನು ಯಜ್ಞಯಾಗಾದಿಗಳಲ್ಲಿಯೂ ಸಾಮಾನ್ಯಕಾಲಗಳಲ್ಲಿಯೂ ತೃಪ್ತಿಪಡಿಸುತ್ತಿರುವರು. ಈ ವೇದಗಳಿಂದಲೂ ಯಜ್ಞಗಳಿಂದಲೂ ಮಳೆ ಬರುವು ದೆಂದೂ ಅವರಿಂದ ಲೋಕಕ್ಕೆ ಅನ್ನವು ದೇವತೆಗಳ ಅನುಗ್ರಹದಿಂದಲೇ ಸಿಕ್ಕಿರುವುದೆಂಬ ವಿಷಯವೂ ಸಹ ವಾಚಕರ ನೆನಪಿನಲ್ಲಿರಬೇಕು.

೩೩. ಎಲೈ ಪರಶುರಾಮನೇ! ಕೇಳು. ಮೇಲೆ ಹೇಳಿದ ವಿಚಾರವನ್ನು ಇನ್ನೂ ನಿನಗೆ ವಿಸ್ತಾರವಾಗಿ ಹೇಳುತ್ತೇನೆ. ಅಗ್ನಿಯಲ್ಲಿ ಬ್ರಾಹ್ಮಣರು ದೇವತೆಗಳಿಗೆ ತೃಪ್ತಿಯಾಗಲೆಂದು ಕೊಟ್ಟ ಆಹುತಿಗಳಿಂದ ಆ ದೇವತೆಗಳು ಪರಮಾನಂದಭರಿತರಾಗಿ ಸಕಲ ಲೋಕವನ್ನೂ ವೃಷ್ಟಿರೂಪದಿಂದ ದಣಿಸಿ ಆಹಾರವನ್ನು ಕೊಟ್ಟು ಕಾಪಾಡು ತ್ತಿರುವರು.

ಆದಿತ್ಯಮಾಪ್ನೋತ್ಯಾದಿತ್ಯಾ ದ್ವೃಷ್ಟಿರ್ಭವತಿ ಭೂತಲೇ ।
ಅನ್ನಸ್ಯ ಚ ತಥೋತ್ಪತ್ತಿರನ್ನಾದ್ಭೂತೋದ್ಭವಃ ಸ್ಮೃತಃ ॥ ೩೪॥

ತಸ್ಮಾತ್ತ್ರಿಭುವನಂ ಸರ್ವಂ ಬ್ರಾಹ್ಮಣೈರೇವ ಧಾರ್ಯತೇ ।
ಬ್ರಾಹ್ಮಣಪ್ರಭವಾ ಭೂಮಿರ್ಬ್ರಾಹ್ಮಣಪ್ರಭವೋ ದಿವಃ ॥ ೩೫ ॥

ಬ್ರಾಹ್ಮಣಾನಾಮಿಮೇ ಲೋಕಾಃ ಪರಲೋಕಾಸ್ತಥೈವ ಚ ।
ಇಜ್ಯಾಸ್ವಾಧ್ಯಾಯತಪಸಾಮುಪರೋಧಾದ್ಯದಾ ದ್ವಿಜಾಃ ॥ ೩೬ ॥

ಸ್ವಾಮ್ಯಂ ಭುವಿ ನ ವಿಂದಂತಿ ಕ್ಷತ್ರಿಯಾಸ್ತು ತದಾ ಕೃತಾಃ ।
ಬ್ರಾಹ್ಮಣಾನಾಂ ವಚಃ ಕಾರ್ಯಂ ರಾಜಭಿಃ ಸತತೋತ್ಥಿತೈಃ ॥ ೩೭ ॥

---

೩೪. ಈರೀತಿ ಬ್ರಾಹ್ಮಣರು ಅಗ್ನಿಯಲ್ಲಿ ಹೋಮಮಾಡಿದ ಹವಿರ್ದ್ರವ್ಯಗಳು ಮೊದಲು ನೇರವಾಗಿ ಆದಿತ್ಯಮಂಡಲಕ್ಕೆ ಹೋಗಿ ತಲಪುತ್ತವೆ. ಆ ಆದಿತ್ಯನಿಂದಲೇ ವೃಷ್ಟಿಯುಂಟಾಗುತ್ತದೆ. ಯಾವಾಗ ಭೂಮಿಯಮೇಲೆ ಚೆನ್ನಾಗಿ ಮಳೆ ಬರುವುದೋ ಆಗ ಸಕಲ ಧಾನ್ಯಗಳೂ ಬೆಳೆಯಾಗುತ್ತವೆ. ಈರೀತಿ ನಾನಾವಿಧವಾದ ಧಾನ್ಯಗಳು ಮನುಷ್ಯರಿಗೆ ಆಹಾರರೂಪವಾಗಿ ಪರಿಣಮಿಸಿ ಲೋಕವು ಸುಖಸಮೃದ್ಧಿಗಳಿಂದ ನಲಿದಾಡುತ್ತದೆ.

೩೫. ಆದುದರಿಂದಲೇ ಸ್ವರ್ಗ-ಮರ್ತ್ಯ-ಪಾತಾಳಗಳೆಂಬೀ ಮೂರುಲೋಕದ ಸ್ಥಿತಿಗೂ ಬ್ರಾಹ್ಮಣರೇ ಕಾರಣರೆಂಬುದನ್ನು ಈಗಲಾದರೂ ತಿಳಿದುಕೊಳ್ಳಯ್ಯಾ! ಪರಶುರಾಮ! ಈ ಭೂಮಿಯು ಬ್ರಾಹ್ಮಣಪ್ರಭಾವವುಳ್ಳದ್ದು. ಮತ್ತು ಈ ಸ್ವರ್ಗಲೋಕವೂ ಬ್ರಾಹ್ಮಣರಿಂದಲೇ ಪ್ರಭೂತವಾದುದು.

೩೬. ಯಜ್ಞಾಧ್ಯಯನ ತಪಸ್ಸುಗಳ ಉಪರೋಧದಿಂದ ಯಾವಾಗ ಬ್ರಾಹ್ಮಣರು ಕೂಡಿರುವರೋ ಅದರ ಮಹತ್ವದಿಂದಲೇ ಈ ಲೋಕಗಳೂ ಪರಲೋಕಗಳೂ ಅಳ್ಳಾಡದೆ ನಿಂತಿವೆ.

೩೭. ಕ್ಷತ್ರಿಯರಾದವರು ಬ್ರಾಹ್ಮಣರ ಮಹಿಮೆಯಿಂದಲೇ ಭೂಸ್ವಾಮಿತ್ವದಿಂದ ವಿರಾಜಿಸುತ್ತಲಿದಾರೆ. ಹಾಗಲ್ಲದೆ ಇದ್ದರೆ ರಾಜರ ಸ್ವಾಮ್ಯವೆಲ್ಲಿದ್ದೀತು? ಆದುದರಿಂದಲೇ ಪ್ರತಿದಿನವೂ ರಾಜರಾದವರು ಬ್ರಾಹ್ಮಣರ ಸಲಹೆಯನ್ನು ಕೇಳಿ ಅವರ ಮಾತಿನಂತೆ ನಡೆದುಕೊಳ್ಳಬೇಕು.

ಧರ್ಮಮರ್ಥಂ ಚ ಕಾಮಂ ಚ ತೇಷಾಂ ವಾಚಿ ಪ್ರತಿಷ್ಠಿತಂ ।
ಬ್ರಾಹ್ಮಣಾನಾಂ ತು ವಾಕ್ಯೇನ ನಿಗ್ರಹಾನುಗ್ರಹಾವುಭೌ ॥ ೩೮ ॥

ಲೋಕೇ ಕಾರ್ಯೌ ಭೂಮಿಭೃತಾ ಭೂತಿಕಾಮೇನ ನಿತ್ಯದಾ ।
ರಾಜಾ ಬ್ರಾಹ್ಮಣವಾಕ್ಯೇನ ಯಃ ಕುರ್ಯಾಚ್ಛಾಸನಾದಿಕಂ ॥ ೩೯ ॥

ಸಮ್ಯಗ್ವಾಽಪ್ಯಥವಾಽಸಮ್ಯಕ್ತೇನ ನಾಕೇ ಮಹೀಯತೇ ।
ಉಲ್ಲಂಘ್ಯ ಶಾಸ್ತ್ರಂ ನೃಪತಿರ್ಯೋ ಯಥಾರುಚಿ ವರ್ತತೇ ॥ ೪೦ ॥

ಸ ರಾಮ ನರಕಂ ಯಾತಿ ಸುಕೃತೇನಾಪಿ ಕರ್ಮಣಾ ।
ಯತ್ರ ಬ್ರಾಹ್ಮಣವಾಕ್ಯಾನಿ ನ ಕರೋತೀಹ ಯೋ ನರಃ ॥ ೪೧ ॥

ನ ತತ್ರ ದೋಷವಾನ್ವಿಪ್ರೋ ರಾಜಾ ದೋಷೇಣ ಲಿಪ್ಯತೇ ।
ಬ್ರಾಹ್ಮಣಂ ದಶವರ್ಷಂ ಚ ಶತವರ್ಷಂ ಚ ಭೂಮಿಪಂ ॥ ೪೨ ॥

---

೩೮. ಧರ್ಮಾರ್ಥಕಾಮರೂಪಗಳಾದ ಪುರುಷಾರ್ಥಗಳೆಲ್ಲವೂ ಬ್ರಾಹ್ಮಣರ ನಾಲಿಗೆಯ ತುದಿಯಲ್ಲಿಯೇ ನಿಂತಿವೆ. ಮಹಾರಾಜನಾದವನು ನಿಗ್ರಹಾನುಗ್ರಹ ಸಾಮರ್ಥ್ಯವನ್ನು ಹೊಂದಿರುವುದೂ ಸಹ ಬ್ರಾಹ್ಮಣರ ವಾಙ್ಮಹಿಮೆಯಿಂದಲೇ ಆಗಿದೆ.

೩೯-೪೦. ಯಾವ ಮಹಾರಾಜನು ಸಕಲ ಭೋಗಭಾಗ್ಯಗಳಿಂದ ಸಂತೋಷ ಪಡಬೇಕೆಂದಾಶಿಸುವನೋ ಅಂತಹ ರಾಜನು ಬ್ರಾಹ್ಮಣ ವಾಕ್ಯವನ್ನು ಪರಿಪಾಲಿಸ ಬೇಕು. ಮತ್ತದಾವ ಮಹಾರಾಜನಾದವನು ಬ್ರಾಹ್ಮಣರ ಮಾತಿನಂತೆಯೇ ತನ್ನ ರಾಜ್ಯದಲ್ಲಿ ಧರ್ಮಶಾಸನವನ್ನು ಮಾಡುವನೋ ಆ ಬ್ರಾಹ್ಮಣ ವಾಕ್ಯಪರಿಪಾಲನೆ ಯಿಂದ ಆ ಮಹಾರಾಜನು ಸ್ವರ್ಗಲೋಕದಲ್ಲಿ ಪ್ರಸಿದ್ಧಿಯನ್ನು ಪಡೆಯುತ್ತಾನೆ.

೪೧. ಹಾಗಲ್ಲದೆ ಬ್ರಾಹ್ಮಣರ ವಾಕ್ಯವನ್ನು ಮೀರಿ, ಶಾಸ್ತ್ರಮರ್ಯಾದೆಯನ್ನೂ ಸಹ ಉಲ್ಲಂಘಿಸಿ ಯಾವ ಮಹಾರಾಜನು ಮನಸ್ಸು ಬಂದಹಾಗೆ ನಡೆದುಕೊಳ್ಳು ವನೋ ಅಂತಹವನು ಎಷ್ಟೇ ಪುಣ್ಯಮಾಡಿದ್ದರೂ ಸಹ ಅವುಗಳೆಲ್ಲಾ ನಾಶವಾಗಿ ನರಕದಲ್ಲಿ ಹೋಗಿ ಬೀಳಬೇಕಾಗುತ್ತದೆ.

೪೨. ಯಾವ ರಾಜ್ಯದಲ್ಲಿ ಮನುಷ್ಯನಾದವನು ಬ್ರಾಹ್ಮಣವಾಕ್ಯವನ್ನು ಕೇಳದೆ ಹೋಗುತ್ತಾನೋ ಆಗ ಆ ತಪ್ಪು ಬ್ರಾಹ್ಮಣನದಲ್ಲ. ಆಗ ರಾಜನೇ ತಪ್ಪುಗಾರ ನಾಗುತ್ತಾನೆ. (ಅಂದರೆ ಧರ್ಮನಿರ್ಣಯ ಮಾಡುವಾಗ ಬ್ರಾಹ್ಮಣರ ಮಾತಿನಂತೆ ಪ್ರಜೆಗಳು ನಡೆದುಕೊಳ್ಳಬೇಕೆಂದು ನಿಯಮವನ್ನು ಮಾಡಲೇಬೇಕು.)

**ಪಿತಾ ಪುತ್ರೌ ವಿಜಾನೀಯಾದ್ಬ್ರಾಹ್ಮಣಸ್ತು ತಯೋಃ ಪಿತಾ ।**
**ಯಸ್ಯ ರಾಜ್ಞಸ್ತು ವಿಷಯೇ ಬ್ರಾಹ್ಮಣಃ ಸೀದತಿ ಕ್ಷುಧಾ ।**
**ತಸ್ಯ ಸೀದತಿ ತದ್ರಾಷ್ಟ್ರಂ ದುರ್ಭಿಕ್ಷವ್ಯಾಧಿತಸ್ಕರೈಃ ॥ ೪೩ ॥**

**ತಸ್ಮಾತ್ಪೂಜ್ಯಾ ನಮಸ್ಕಾರ್ಯಾಸ್ಸಂವಿಭಾಜ್ಯಾಸ್ತಥಾ ದ್ವಿಜಾಃ ।**
**ರಾಜ್ಞಾ ಸರ್ವಪ್ರಯತ್ನೇನ ಲೋಕದ್ವಯಮಭೀಪ್ಸತಾ ॥ ೪೪ ॥**

**ಯದ್ಬ್ರಾಹ್ಮಣಾಸ್ತುಷ್ಟತಮಾ ವದಂತಿ**
**ತದ್ದೇವತಾಃ ಪ್ರತ್ಯಭಿನಂದಯಂತಿ ॥**

---

೪೩. ಒಬ್ಬ ಬ್ರಾಹ್ಮಣನಿಗೆ ಹತ್ತು ವರ್ಷದ ಮಗನಿದ್ದರೂ ರಾಜ್ಯದ ಪ್ರಭುವು ನೂರುವರ್ಷ ವಯಸ್ಸಿನವನಾಗಿದ್ದಾಗ್ಗೂ ಅವರಿಬ್ಬರಿಗೂ ಆ ಬ್ರಾಹ್ಮಣನೇ ತಂದೆಯು. ಆದರೆ ಹತ್ತು ವರ್ಷದ ಬ್ರಾಹ್ಮಣ ವಟುವಿಗೂ ವೃದ್ಧರಾಜನಿಗೂ ಇಲ್ಲಿ ಸಾಮ್ಯವನ್ನು ಕೊಟ್ಟು ಇವರಿಬ್ಬರೂ ಒಂದೇ ಸಮನಾಗಿ ಬ್ರಾಹ್ಮಣನನ್ನು ಗೌರವಿಸಬೇಕೆಂದು ಅಭಿಪ್ರಾಯ.

೪೪. ಯಾವ ರಾಜನ ರಾಜ್ಯದಲ್ಲಿ ಬ್ರಾಹ್ಮಣಮಾತ್ರನಾದವನು ಹೊಟ್ಟೇ ಹಸಿವಿನಿಂದ ಬಳಲಿ, ಅನ್ನವಿಲ್ಲದೆ ಸಂಕಟಪಡುವನೋ ಅಂತಹ ಆ ರಾಜ್ಯವು ದುರ್ಭಿಕ್ಷದಿಂದಲೂ, ರೋಗಾದ್ಯುಪದ್ರವಗಳಿಂದಲೂ, ಚೋರರ ಪ್ರಾಬಲ್ಯದಿಂದಲೂ ಸಹ ವ್ಯಾಪ್ತವಾಗಿ ನಾಶವಾಗಿಹೋಗುವುದು.

೪೫. ಈಲೋಕ ಪರಲೋಕಗಳಲ್ಲಿ ಸುಖಪಡಬೇಕೆಂದಿರುವ ರಾಜನು ಬ್ರಾಹ್ಮಣರನ್ನು ಪೂಜೆಮಾಡಬೇಕು. ಸರ್ವದಾ ನಮಸ್ಕರಿಸಬೇಕು. ಅವರಿಗೆ ಸಹಾಯಮಾಡಬೇಕು. ಯಾವ ಮಹಾರಾಜನಿಂದ ಬ್ರಾಹ್ಮಣರು ತುಷ್ಟರಾಗಿ ಆಶೀರ್ವಾದ ಮಾಡುವರೋ ಅಂತಹ ರಾಜನನ್ನು ದೇವತೆಗಳೂ ಸಹ ಹೊಗಳುತ್ತಾರೆ. ಕೇಳಯ್ಯಾ ! ಪರಶುರಾಮ !! ಪ್ರತ್ಯಕ್ಷದೇವರುಗಳಾದ ಬ್ರಾಹ್ಮಣರುಗಳು ಯಾವಾಗ ಸಂತೋಷದಿಂದ ನಲಿಯುತ್ತಾರೋ ಆಗ ಪರೋಕ್ಷದೇವತೆಗಳು ನಮ್ಮ

ತುಷ್ಟೇಷು ತುಷ್ಟಾಃ ಸತತಂ ಭವಂತಿ
ಪ್ರತ್ಯಕ್ಷದೇವೇಸು ಪರೋಕ್ಷದೇವಾಃ ॥ ೪೫ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ
ವಜ್ರಸಂವಾದೇ ರಾಮಂ ಪ್ರತಿ ಪುಷ್ಕರವಾಕ್ಯೇ
ಬ್ರಾಹ್ಮಣ ಪ್ರಶಂಸಾ ವರ್ಣನಂನಾಮ
ದ್ವಾತ್ರಿಂಶತ್ತಮೋಽಧ್ಯಾಯಃ

---

ಕಣ್ಣಿಗೆ ಕಾಣಿಸದೆ (ಸ್ವರ್ಗದಲ್ಲಿರುವ ದೇವತೆಗಳು) ಪರಮಾನಂದಭರಿತರಾಗುತ್ತಾರೆಂದು ತಿಳಿಯಬೇಕೆಂದು ಪರಶುರಾಮನಿಗೆ ಪುಷ್ಕರನು ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ದ್ವಿತೀಯಖಂಡದಲ್ಲಿ ಬ್ರಾಹ್ಮಣಪ್ರಶಂಸಾವರ್ಣನೆಯೆಂಬ ಹೆಸರಿನ
ಮೂವತ್ತೆರಡನೆಯ ಅಧ್ಯಾಯ ಮುಗಿಯಿತು.



॥ ಶ್ರೀ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ತ್ರಯಸ್ತ್ರಿಂಶೋಽಧ್ಯಾಯಃ

### ಪುಷ್ಕರ ಉವಾಚ

**ಸಾಧ್ವೀನಾಂ ಪಾಲನಂ ಕುರ್ಯಾತ್ಪೂಜನಂ ಚ ಮಹೀಪತಿಃ ।**
**ಏಕಪತ್ನ್ಯಃ ಸ್ತ್ರಿಯಸ್ಸರ್ವಾ ಧಾರಯಂತಿ ಜಗತ್ತ್ರಯಂ ॥ ೧ ॥**

**ಭರ್ತೃವ್ರತಾ ಭರ್ತೃಪರಾ ಭರ್ತೃಪೂಜನತತ್ಪರಾ ।**
**ಯಾತು ಸ್ತ್ರೀ ಸಾ ದಿವಂ ಯಾತಿ ಸಹ ಭರ್ತ್ರಾ ದ್ವಿಜೋತ್ತಮ ॥ ೨ ॥**

**ಏಕಪತ್ನ್ಯಸ್ತು ಯದ್ದುಃಖಂ ಸಂಹತೇ ದ್ವಿಜ ಸಾನುಗಾಃ ।**
**ತೇನ ತಾಃ ಸ್ವರ್ಗಮಾಸಾದ್ಯ ಸುಖಮಾಯಾಂತ್ಯನೇಕಧಾ ॥ ೩ ॥**

---

### ಮೂವತ್ತಮೂರನೆಯ ಅಧ್ಯಾಯವು.

೧. ಪುಷ್ಕರನು ಹೇಳುತ್ತಾನೆ.—ಮಹಾರಾಜನಾದವನು ಮಹಾಪತಿವ್ರತಾ ಶಿರೋಮಣಿಗಳಾದವರನ್ನು ಯಾವಾಗಲೂ ಕಾಪಾಡಬೇಕು. ಮತ್ತು ಅವರನ್ನು ಪೂಜೆ ಮಾಡಲೇಬೇಕು. ಸಕಲ ಪತಿವ್ರತೆ (ಏಕಪತ್ನಿ)ಯರೂ ಈ ಲೋಕವನ್ನು ಕಾಪಾಡತಕ್ಕವರು.

೨. ಯಾವ ಸ್ತ್ರೀಯು ಪತಿವ್ರತೆಯಾಗಿ ಗಂಡನ ಸೇವೆಯಲ್ಲೇ ಆಸಕ್ತಳಾಗಿ ಪತಿಪೂಜಾಸಕ್ತಳಾಗಿರುವಳೋ ಅಂತಹ ಮಹಾ ಪತಿವ್ರತೆಯು ತನ್ನ ಗಂಡನೊಡನೆ ಸ್ವರ್ಗಭೋಗಗಳನ್ನು ಹೊಂದುತ್ತಾಳೆ.

೩. ಏಕಪತ್ನೀ ವ್ರತಸ್ಥರಾದ ಗೃಹಸ್ಥರೂ ಪತಿವ್ರತೆಯರಾದ ಅವರ ಹೆಂಡತಿಯರೂ ಸಹ ತಮ್ಮ ಅನುಚರರಾದ ಪರಿವಾರ ಜನರೊಡನೆ ಕೂಡಿ ಈ ಲೋಕದಲ್ಲಿ ಪ್ರಾಪ್ತವಾಗುವ ಸಕಲ ದುಃಖಗಳನ್ನೂ ಸಹಿಸಿಕೊಂಡು ಕಾಲಹರಣ ಮಾಡುತ್ತಾ ಧರ್ಮಪರರಾಗಿರುವವರಾದರೆ ಆ ಧರ್ಮಮಹಿಮೆಯಿಂದ ಆ ಮಹನೀಯರೂ ಪತಿಪರಾಯಣೆಯರೂ ಸಹ ಸ್ವರ್ಗಕ್ಕೆ ಹೋದ ಬಳಿಕ ಅಲ್ಲಿ ನಾನಾ ಪ್ರಕಾರವಾದ ಸುಖಗಳನ್ನು ಅನುಭವಿಸುತ್ತಾರೆ.

ತಾಸಾಂ ಪ್ರಭಾವೋ ಹಿ ಮಹಾಂಸ್ತೇಜಶ್ಚೈವಾತಿದುಃಸಹಂ ।
ನ ಕೋಪನೀಯಾ ನೋಪೇಕ್ಷ್ಯಾ ನೈವ ತಾಶ್ಚ ವಿಮಾನಯೇತ್ ॥ ೪ ॥

ನಾಹೂಯೇದಪರಾಧೇಷು ದಂಡ್ಯಸ್ತಾಸಾಂ ಪತಿರ್ಭವೇತ್ ।
ಪುತ್ರೋ ವಾಽಪ್ಯಥವಾ ನೀತೌ ನೈವ ರಾಜಾ ಪ್ರಭುಃ ಕ್ವಚಿತ್ ॥ ೫ ॥

ನೈವ ಸಾಧ್ವೀ ವಿನಿರ್ದಿಷ್ಟಾ ಕೇವಲೋಪಸ್ಥರಕ್ಷಣಾತ್ ।
ವಿಪ್ರಿಯಂ ನಾಚರೇತ್ಕಿಂಚಿತ್ಪತ್ಯುಃ ಸಾಧ್ವೀತಿ ಸಾ ಸ್ಮೃತಾ ॥ ೬ ॥

ಕರ್ಮಣಾ ಮನಸಾ ವಾಚಾ ಭರ್ತುಃ ಪ್ರಿಯಹಿತೈಷಿಣೀ ।
ಯಾ ನಾರೀ ಸಾಸ್ಮೃತಾ ಸಾಧ್ವೀ ಪತಿಪೂಜನತತ್ಪರಾ ॥ ೭ ॥

---

೪. ಮಹಾಪತಿವ್ರತೆಯರ ಪ್ರಭಾವವನ್ನು ಅಷ್ಟಿಷ್ಟೆಂದು ಹೇಳುವ ಹಾಗಿಲ್ಲ. ಅವರ ತೇಜಸ್ಸಾದರೋ ಬಹಳ ದುಸ್ಸಹವಾದುದು. ಆದ್ದರಿಂದ ಅವರಿಗೆ ಕೋಪ ಬರುವಂತಹ ಕೆಲಸಗಳನ್ನು ಮಾಡಬಾರದು. ಅವರನ್ನು ಉಪೇಕ್ಷಿಸಬಾರದು. ಅವರನ್ನು ಅವಮಾನಪಡಿಸಬಾರದು.

೫. ಪತಿವ್ರತೆಯರಾದವರು ಏನಾದರೊಂದು ಸಣ್ಣ ತಪ್ಪು ಮಾಡಿದರೆಂದಿಟ್ಟುಕೊಳ್ಳೋಣ. ಅಂತಹ ಸಮಯದಲ್ಲಿ ಆ ತಪ್ಪಿನ ವಿಚಾರವಾಗಿ ತೀರ್ಮಾನ ಹೇಳಲು ಪಂಚಾಯತಿ ಮಾಡಬಾರದು. ಅವರುಗಳ ಶಿಕ್ಷೆರಕ್ಷೆಗಳಿಗೆ ಅವರವರ ಗಂಡಂದಿರೇ ಹಕ್ಕುದಾರರಾದ್ದರಿಂದ ಮಕ್ಕಳನ್ನಾಗಲೀ ದೊರೆಯನ್ನಾಗಲೀ ಇದಕ್ಕೆ ಕರೆತರಬಾರದು.

೬. ಬರೀ ಜಿಹ್ವೋಪಸ್ಥ ರಕ್ಷಣೆಗೋಸ್ಕರ ಗಂಡನನ್ನಾದರಿಸುವವಳು ಸಾಧ್ವಿಯೆಂದೆನಿಸಿಕೊಳ್ಳಲಾರಳು. ಹಾಗಲ್ಲದೆ ಬಡವನಾಗಲೀ ಧನಿಕನಾಗಲೀ ಅವನೆಂತಹನೇ ಆಗಲಿ ಗಂಡನಾದವನ ಮಾತಿಗೆ ಎದುರಾಡದೆ ಅವನನ್ನನುಸರಿಸಿಕೊಂಡು ಅವನ ಹಿತವನ್ನು ಸಾಧಿಸುವವಳೇ ನಿಜವಾದ ಪತಿವ್ರತೆಯೆಂದು (ಧರ್ಮಶಾಸ್ತ್ರದಲ್ಲಿ) ಹೇಳಲ್ಪಟ್ಟಿದೆ.

೭. ತನ್ನ ಆಚರಣೆಯಿಂದಲೂ ಮನೋವಾಕ್ಕಾಯಗಳಿಂದಲೂ ಯಾವ ಹೆಂಗಸು ತನ್ನ ಗಂಡನ ಹಿತವನ್ನು ಬಯಸುತ್ತಿರುವಳೋ ಮತ್ತು ಸರ್ವದಾ ಪತಿಪೂಜಾ ತತ್ಪರಳಾಗಿರುವಳೋ ಅವಳನ್ನೀಗ ಸಾಧ್ವಿಯೆಂದು ಹೇಳಬೇಕು.

**ನಮಸ್ಕಾರ್ಯಾಶ್ಚ ಪೂಜ್ಯಾಶ್ಚ ವಂದನೀಯಾಶ್ಚ ಭಾರ್ಗವ ।**
**ರಾಜ್ಞಾ ಸರ್ವಪ್ರಯತ್ನೇನ ತಥಾ ಲೋಕೈಶ್ಚ ಸರ್ವಶಃ ॥ ೮ ॥**

**ಅನಾಥಾಂ ಚ ತಥಾ ಸಾಧ್ವೀಂ ಬಿಭೃಯಾತ್ಪಾರ್ಥಿವೋತ್ತಮಃ ।**
**ತಸ್ಯೈ ಯದ್ದೀಯತೇ ದಾನಂ ತದನಂತಂ ಪ್ರಕೀರ್ತಿತಂ ॥ ೯ ॥**

**ಸಾಧ್ವೀನಾಮುಪಮಾನೇನ ಕುಲಂ ದಹತಿ ಪೂರುಷಃ ।**
**ತಾಸಾಂ ಸಂಪೂಜನಾದ್ರಾಮ ಸ್ವಕುಲಂ ಚೋನ್ನತಿಂ ನಯೇತ್ ॥ ೧೦ ॥**

**ನ ಧನೇನ ನ ಧಾನ್ಯೇನ ನಶೀಲೇನ ನ ಬಂಧುಭಿಃ ।**
**ನ ಯಜ್ಞೈರ್ದಕ್ಷಿಣಾವದ್ಭಿರ್ನಾಧೀತೇನ ತಥೈವ ಚ ॥ ೧೧ ॥**

---

೮. ಅಂತಹ ಮಹಾಪತಿವ್ರತೆಯನ್ನು ಮಹಾರಾಜನಾದವನು ಪ್ರತಿದಿವಸವೂ ನಮಸ್ಕಾರಮಾಡಬೇಕು. ಪೂಜೆಮಾಡಬೇಕು. ಸರ್ವಪ್ರಯತ್ನದಿಂದಲೂ ಅಂಥವಳನ್ನು ಪ್ರತಿದಿನವೂ ವಂದನೆ ಮಾಡುತಲಿರಬೇಕು.

೯. ಅನಾಥೆಯರಾದ ಪತಿವ್ರತಾಸ್ತ್ರೀಯರು ತನ್ನ ರಾಜ್ಯದಲ್ಲೆಲ್ಲಿದ್ದರೂ ಹುಡುಕಿ ಅಂಥವರ ಪೋಷಣೆಯನ್ನು ಮಹಾರಾಜನು ಮಾಡಬೇಕು. ಆ ರೀತಿಯಾದ ಅನಾಥೆಗೆ ಯಾವ ದಾನವನ್ನು ಕೊಟ್ಟಾಗ್ಯೂ, ಅದು ಅನಂತವಾಗಿ ಪರಿಣಮಿಸಲು ಅಡ್ಡಿಯಿಲ್ಲ.

೧೦. ಯಾವ ಮನುಷ್ಯನು ಸಾಧ್ವಿಯರನ್ನವಮಾನಪಡಿಸುತ್ತಾನೆಯೋ ಅವನ ಕುಲವು ಭಸ್ಮವಾಗಿ ಹೋಗುತ್ತದೆ. ಯಾವನು ಪತಿವ್ರತಾಸ್ತ್ರೀಯರನ್ನು ಗೌರವದಿಂದ ಪೂಜೆಮಾಡುತ್ತಾನೆಯೋ ಅವನ ವಂಶವು ಅಭಿವೃದ್ಧಿಯನ್ನು ಹೊಂದುವುದು.

೧೧-೧೨. ಯಾರ ವಂಶದಲ್ಲಿ ವಂಶೋದ್ಧಾರಕರಾದ ಮಹಾಪತಿವ್ರತೆಯರಿರುವರೋ ಆ ಕಾಲದ ಜನರು ಧನದಿಂದಲಾಗಲೀ, ಧಾನ್ಯದಿಂದಲಾಗಲೀ, ಶೀಲದಿಂದಾಗಲೀ, ಬಂಧುಬಳಗದಿಂದಾಗಲೀ, ಯಜ್ಞದಕ್ಷಿಣಾ ಸಾಧ್ಯವಾದ ಯಜ್ಞಯಾಗ

ಅಕುಲಾನಿ ಕುಲಾನ್ಯಾಹುಃ ಕಿಂತು ಸ್ತ್ರೀಣಾಂ ವಿಚೇಷ್ಟಿತೈಃ ।
ಯೇಷು ಸಾಧ್ವ್ಯಃ ಸ್ತ್ರಿಯೋ ರಾಮ ಕುಲೇಷು ಕುಲಧೂರ್ವಹಾಃ ॥ ೧೨ ॥

ಮಹಾಕುಲಾನಿ ತಾನೀಹ ಕೃಶಾನ್ಯಪಿ ಧನೈರ್ಯದಿ ।
ಪುತ್ರಾಣಾಮಪಿ ತತ್ಪುತ್ರಂ ಸಾಧ್ವೀ ಯಸ್ಯಾರಣಿರ್ಭವೇತ್ ॥ ೧೩ ॥

ಹವ್ಯೇಷು ಸಾಧ್ವೀತನಯಂ ತಥಾ ಕವ್ಯೇಷು ಯೋಜಯೇತ್ ।
ತತ್ರಾಲ್ಪಸ್ಯಾಪಿ ದಾನಸ್ಯ ಮಹತ್ಪುಣ್ಯಂ ಪ್ರಕೀರ್ತಿತಂ ॥ ೧೪ ॥

ಗಾಯತ್ರೀತು ಯಥಾ ರಾಮ ತಥಾ ಗಂಗಾ ಸರಿದ್ವರಾ ।
ಪಾವನೀ ಕೀರ್ತನಾದೇವ ತಥಾ ಸಾಧ್ವೀ ವರಾಂಗನಾ ॥ ೧೫ ॥

---

ಗಳಿಂದಾಗಲೀ, ವಿದ್ಯೆಯಿಂದಾಗಲೀ ಯಶಸ್ಸನ್ನು ಪಡೆಯಬೇಕಾಗಿಲ್ಲ. ಅಂತಹ ವಂಶವು ದುಷ್ಕುಲವಾದಾಗ್ಯೂ ಅದು ಪತಿವ್ರತಾಸ್ತ್ರೀಯರ ಮಹಿಮೆಯಿಂಸ ಸತ್ಕುಲ ವಾಗಿ ಪರಿಣಮಿಸುತ್ತದೆ.

೧೩. ಸಾಧ್ವಿಯಾದವಳು ಯಾವ ಗೃಹಸ್ಥನಿಗೆ ಹೆಂಡತಿಯಾಗಿರುವಳೋ. ಆ ಗೃಹಸ್ಥನು ಕಡುಬಡವನಾದಾಗ್ಯೂ ಅವನನ್ನು ಮಹಾಕುಲಪ್ರಸೂತನೆಂದು ಭಾವಿಸಬೇಕು. ಮತ್ತು ಆ ಗೃಹಸ್ಥನು ಅವನ ತಂದೆಯ ಮಕ್ಕಳೊಳಗೆ ಸುಪುತ್ರ ನೆನಿಸಿಕೊಳ್ಳುವನು.

೧೪. ಹವ್ಯಕವ್ಯ (ದೇವಪಿತೃಕಾರ್ಯ) ಗಳಲ್ಲಿ ಪತಿವ್ರತಾಸ್ತ್ರೀಯ ಹೊಟ್ಟೆ ಯಲ್ಲಿ ಹುಟ್ಟಿದ ಮಗನಿಗೆ ಊಟಕ್ಕೆ ಹೇಳಿದರೆ, ಆ ಕರ್ಮಕಾಲದಲ್ಲಿ ಎಷ್ಟೇ ಸ್ವಲ್ಪವಾಗಿ ದಾನಮಾಡಿದಾಗ್ಯೂ ಅದರಿಂದ ಮಹತ್ತಾದ ಪುಣ್ಯವುಂಟಾಗುವುದು.

೧೫. ಗಾಯತ್ರೀ ಮಂತ್ರವನ್ನು ಜಪಮಾಡುವುದರಿಂದಲೂ ಪರಮಪಾವನೆ ಯಾದ ಗಂಗಾ ಮಹಾನದಿಯ ನಾಮಸ್ಮರಣೆಯಿಂದಲೂ ಮತ್ತು ಕೀರ್ತನದಿಂದಲೂ ಯಾವ ಪುಣ್ಯವು ಪ್ರಾಪ್ತವಾಗುವುದೋ. ಮಹಾ ಪಾತಿವ್ರತ್ಯದಿಂದ ಶೋಭಿತಳಾದವಳ ನಾಮೋಚ್ಚಾರಣದಿಂದಲೂ ಅದೇ ವಿಧವಾದ ಪುಣ್ಯವು ಪ್ರಾಪ್ತವಾಗುವುದು.

ರಾಮಾಸ್ತು ಭೃಗುಶಾರ್ದೂಲ ನ ಪ್ರದುಷ್ಯಂತಿ ಕರ್ಹಿಚಿತ್ ।
ಮಾಸಿಮಾಸಿ ರಜಸ್ತಾಸಾಂ ದುಷ್ಕೃತಾನ್ಯಪಕರ್ಷತಿ ॥ ೧೬ ॥

ಸೋಮಸ್ತಾಸಾಂ ದದೌಶೌಚಂ ಗಂಧರ್ವಃ ಶಿಕ್ಷಿತಾಂ ಗಿರಂ ।
ಅಗ್ನಿಶ್ಚ ಸರ್ವಮೇಧ್ಯತ್ವಂ ತಸ್ಮಾನ್ನಿಷ್ಕಲ್ಮಷಾಃ ಸ್ತ್ರಿಯಃ ॥ ೧೭ ॥

ಬ್ರಾಹ್ಮಣಾಃ ಪಾದತೋ ಮೇಧ್ಯಾ ಗಾವೋ ಮೇಧ್ಯಾಸ್ತು ಪೃಷ್ಠತಃ ।
ಅಜಾಶ್ವಾ ಮುಖತೋ ಮೇಧ್ಯಾ ಸ್ತ್ರಿಯೋ ಮೇಧ್ಯಾಸ್ತು ಸರ್ವತಃ ॥ ೧೮ ॥

ಯಾಮಯೋ ಯಾನಿ ಗೇಹಾನಿ ಶಪಂತ್ಯಪ್ರತಿಪೂಜಿತಾಃ ।
ತಾನಿ ಕೃತ್ಯಾಹತಾನೀವ ವಿನಶ್ಯಂತಿ ಸಮಂತತಃ ॥ ೧೯ ॥

---

೧೬. ಪತಿವ್ರತಾಧರ್ಮದಿಂದ ಕೂಡಿದ ನಾರಿಯರನ್ನು ಯಾರೂ ಯಾವಾಗಲೂ ನಿಂದಿಸಬಾರದು. ಪತಿವ್ರತಾಸ್ತ್ರೀಯರಲ್ಲಿ ಏನಾದರೂ ಪಾಪಲೇಶವಿರುವುದಾದರೆ ಪ್ರತಿ ತಿಂಗಳೂ ಆ ಪಾಪಲೇಶವು ಅವರ ರಜಸ್ಸಿನ ಮೂಲಕ ಹೊರಕ್ಕೆ ಹೊರಟುಹೋಗುತ್ತದೆ.

೧೭. ಚಂದ್ರನು ಸ್ತ್ರೀಯರಿಗೆ ಸೌಂದರ್ಯವನ್ನು ಕೊಟ್ಟಿರುವನು. ಗಂಧರ್ವನು ಸೊಗಸಾದ (ಗಾನ ಮಾಡತಕ್ಕ) ಕಂಠವನ್ನು ಅನುಗ್ರಹಿಸಿರುವನು. ಯಜ್ಞೇಶ್ವರನು ನೈರ್ಮಲ್ಯವನ್ನು ಕೊಟ್ಟಿರುವನು. ಆದುದರಿಂದ ಸ್ತ್ರೀಯರನ್ನು ನಿಷ್ಕಲ್ಮಷರೆಂದು ಭಾವಿಸಬೇಕು.

೧೮. ಬ್ರಾಹ್ಮಣರು ಪಾದಗಳಿಂದ ಶ್ರೇಷ್ಠರಾದವರು. (ಆದ್ದರಿಂದ ಬ್ರಾಹ್ಮಣರ ಪಾದಕ್ಕೆ ನಮಸ್ಕಾರ ಮಾಡಬೇಕು.) ಹಸುಗಳು ಬಾಲದಿಂದ ಶ್ರೇಷ್ಠವನ್ನು ಹೊಂದಿವೆ. (ಆದ್ದರಿಂದ ಹಸುಗಳ ಬಾಲವನ್ನು ಕಣ್ಣಿಗೊತ್ತಿಕೊಳ್ಳುವರು.) ಆಡು ಮತ್ತು ಕುದುರೆಗಳು ಮುಖದಿಂದ ಶ್ರೇಷ್ಠವೆನಿಸಿಕೊಂಡಿವೆ. ಸ್ತ್ರೀಯರು ಮಾತ್ರ ಸಕಲ ವಿಧದಿಂದಲೂ ಸಕಲಾವಯವಗಳಿಂದಲೂ ಪವಿತ್ರರಾದವರು.

೧೯. ಹೆಂಗಸರು ಅವಮಾನದಿಂದ ತಪ್ತರಾಗಿ ಯಾರ ಮನೆಯನ್ನು ಕುರಿತು ಶಾಪಕೊಡುವರೋ ಅಂತಹ ಮನೆಯು (ಗೃಹಸ್ಥನು) ಸಂಪೂರ್ಣವಾಗಿ ನಾಶಹೊಂದುತ್ತದೆ.

ಸ್ತ್ರಿಯಃ ಶ್ರಿಯಶ್ಚ ಗೇಹೇಷು ನ ವಿಶೇಷೋಽಸ್ತಿ ಕಶ್ಚನ ।
ತಸ್ಮಾತ್ಸರ್ವಪ್ರಯತ್ನೇನ ಪೂಜನೀಯಾಃ ಸದಾ ಸ್ತ್ರಿಯಃ ॥ ೨೦ ॥

ಮಿಥ್ಯಾ ನಸಾಧ್ವೀ ಭವತೀಹ ಲೋಕೇ
ಭವತ್ಯಥಾಽಸ್ಮಿನ್ನಪರೇ ಚ ರಾಮ ।
ಸಾಧ್ವ್ಯಸ್ತಥಾ ಪೂಜ್ಯತಮಾಃ ಪ್ರದಿಷ್ಟಾ
ಲೋಕೇಷು ಸರ್ವೇಷು ಚರಾಚರೇಷು ॥ ೨೧ ॥

ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ
ಮಾರ್ಕಂಡೇಯ ವಜ್ರಸಂವಾದೇ ಸಾಧ್ವೀಮಾಹಾತ್ಮ್ಯಂ ನಾಮ
ತ್ರಯಸ್ತ್ರಿಂಶೋಽಧ್ಯಾಯಃ

---

೨೦. ಮನೆಯ ಹೆಂಗಸಿಗೂ, ಮಹಾಲಕ್ಷ್ಮಿಗೂ ಏನೇನೂ ವ್ಯತ್ಯಾಸವೇ ಇಲ್ಲದುದರಿಂದ ಮಹಾಲಕ್ಷ್ಮಿಯನ್ನು ಪೂಜೆಮಾಡಿದಂತೆ ಮನೆಯ ಹೆಂಗಸರನ್ನೂ ಭಕ್ತಿಭಾವನೆಯಿಂದ ಪೂಜಿಸಬೇಕು.

೨೧. ಮಹಾಪತಿವ್ರತೆಯಾದ ಸ್ತ್ರೀಯು ಆಡಿದಮಾತು ಈಲೋಕದಲ್ಲಾಗಲೀ ಪರಲೋಕದಲ್ಲಾಗಲೀ ಎಂದಿಗೂ ಸುಳ್ಳಾಗುವುದಿಲ್ಲ. ಆದ್ದರಿಂದ ಸಕಲ ಚರಾಚರ ಪ್ರಪಂಚದಲ್ಲಿಯೂ ಸಾಧ್ವಿಯರು ಪೂಜ್ಯತಮರೆಂದು ತಿಳಿಯಬೇಕು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಸಾಧ್ವೀಮಾಹಾತ್ಮ್ಯವೆಂಬ ಹೆಸರಿನ
ಮೂವತ್ತಮೂರನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

---

## ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಚತುಸ್ತ್ರಿಂಶತ್ತಮೋಽಧ್ಯಾಯಃ

---

ರಾಮ ಉವಾಚ

ಸಾಧ್ವೀನಾಂ ಶ್ರೋತುಮಿಚ್ಛಾಮಿ ದೇವ ಧರ್ಮಾನಶೇಷತಃ ।
ಸಾಧ್ವ್ಯೋ ಹಿ ನಾರ್ಯೋ ಲೋಕಾನಾಮಾಧಾರ ಇಹ ಕೀರ್ತಿತಃ ॥ ೧ ॥

ಪುಷ್ಕರ ಉವಾಚ

ಏತದೇವ ಪರಂ ರಾಮ ರಾಮಾಣಾಂ ಧರ್ಮಕಾರಣಂ ।
ಯದಾಸಾಂ ಸರ್ವಕಾರ್ಯೇಷು ನಿತ್ಯಂ ಹಿ ಪರತಂತ್ರತಾ ॥ ೨ ॥

---

## ಮೂವತ್ತನಾಲ್ಕನೆಯ ಅಧ್ಯಾಯವು.

೧. ರಾಮನು (ಪರಶುರಾಮನು) ಪುನಃ ಪ್ರಶ್ನೆ ಮಾಡುತ್ತಾನೆ:—ಅಯ್ಯಾ! ಪುಷ್ಕರನೇ! ಸಾಧ್ವಿಯರು ಲೋಕಾಧಾರಪ್ರಾಯರೆಂದು ನೀನು ಇದುವರಿಗೆ ಹೇಳಿದೆಯಲ್ಲಾ! ಅಂತಹ ಮಹಾಪತಿವ್ರತಾಸ್ತ್ರೀಯರ ಧರ್ಮವನ್ನು ಸಂಪೂರ್ಣವಾಗಿ ನನಗೆ ತಿಳಿಸಬೇಕು.

೨. ಪುಷ್ಕರನು ಉತ್ತರ ಹೇಳುತ್ತಾನೆ:—ಎಲೈ ಪರಶುರಾಮನೇ! ಕೇಳು. ಸಕಲ ಕಾರ್ಯಗಳಲ್ಲಿಯೂ ಹೆಂಗಸಾದವಳಿಗೆ ಯಾವ ಸ್ವಾತಂತ್ರ್ಯವೂ ಇಲ್ಲ. ಹೆಂಗಸಾದವಳಿಗೆ ಧರ್ಮಕಾರಣವೆಂದರೆ ಪರತಂತ್ರವೊಂದೇ ಎಂದು ತಿಳಿದುಕೋ.

ಬಾಲ್ಯೇ ಪಿತುರ್ವಶೇ ತಿಷ್ಠೇತ್ಪಾಣಿಗ್ರಾಹಸ್ಯ ಯೌವನೇ ।
ಪುತ್ರಾಣಾಂ ಭರ್ತರಿ ಪ್ರೇತೇ ನ ಸ್ತ್ರೀ ಸ್ವಾತಂತ್ರ್ಯಮರ್ಹತಿ ॥ ೩ ॥

ಪಿತ್ರಾ ಭರ್ತ್ರಾ ಸುತೇನೇಹ ನೇಚ್ಛೇದ್ವಿರಹಮಾತ್ಮನಃ ।
ತೇಷಾಂ ಚ ವಿರಹೇಣ ಸ್ತ್ರೀ ಗರ್ಹ್ಯೇ ಕುರ್ಯಾದುಭೇ ಕುಲೆ ॥ ೪ ॥

ಸದಾ ಪ್ರಹೃಷ್ಟಯಾ ಭಾವ್ಯಂ ಗೃಹಕಾರ್ಯೇ ಚ ದಕ್ಷಯಾ ।
ಸುಸಂಸ್ಕೃತೋಪಸ್ಕರಯಾ ವ್ಯಯೇ ಚಾಮುಕ್ತ ಹಸ್ತಯಾ ॥ ೫ ॥

ಯಃ ಪ್ರದದ್ಯಾತ್ಪಿತಾ ತ್ವೇನಾಂ ತದಭಾವೇಪಿ ಕಾರಕಃ ।
ತಂ ಶುಶ್ರೂಷೇತ ಜೀವಂತಂ ಸಂಸ್ಥಿತಂ ನ ತು ಲಂಘಯೇತ್ ॥ ೬ ॥

---

೩. ಆ ಪರತಂತ್ರವೆಂತೆಂಬುದನ್ನೀಗ ಹೇಳುವೆನು, ಕೇಳು. ಹೆಂಗಸಾದವಳು ಬಾಲ್ಯದಲ್ಲಿ ತಂದೆಯ ಅಧೀನದಲ್ಲಿದ್ದು ಅವನ ಪೋಷಣೆಯಿಂದ ಬೆಳೆಯಬೇಕು. ಯೌವನಕಾಲದಲ್ಲಿ ಗಂಡನ ಅಧೀನದಲ್ಲಿರಬೇಕು. ವಾರ್ಧಕ್ಯಾವಸ್ಥೆ ಪ್ರಾಪ್ತವಾಗಿ ಗಂಡನು ಸತ್ತುಹೋದ ಬಳಿಕ ಮಕ್ಕಳ ಅಧೀನದಲ್ಲಿರಬೇಕು. ಹೆಂಗಸಾದವಳು ಎಂದಿಗೂ ಸ್ವತಂತ್ರಳಲ್ಲ.

೪. ತಂದೆಯಿಂದಾಗಲೀ ಗಂಡನಿಂದಾಗಲೀ ಮಕ್ಕಳಿಂದಾಗಲೀ ಹೆಂಗಸಾದವಳು ಬಾಲ್ಯಯೌವನಕೌಮಾರಾವಸ್ಥೆಗಳಲ್ಲಿ ವಿಯುಕ್ತಳಾಗಿರ (ಬಿಟ್ಟಿರ) ಕೂಡದು. ಹಾಗೇನಾದರೂ ಅವರನ್ನು ಬಿಟ್ಟು ಬೇರೇ ಇದ್ದರೆ ಉಭಯಕುಲದಿಂದಲೂ ಗರ್ಹಿತಳಾಗುವಳು. (ಅವಳಿಗೆ ಮರ್ಯಾದೆಯಿಲ್ಲ.)

೫. ಹೆಂಗಸಾದವಳು ಮನೆಗೆಲಸಗಳನ್ನು ಸಂತೋಷದಿಂದಲೂ ಸಾಮರ್ಥ್ಯದಿಂದಲೂ ನಿರ್ವಹಿಸಬೇಕು. ಪದಾರ್ಥಗಳನ್ನು ಚೊಕ್ಕಟವಾಗಿಯೂ, ಚೆನ್ನಾಗಿಯೂ ಇಟ್ಟಿರಬೇಕು. ಖರ್ಚುಮಾಡುವುದರಲ್ಲಿ ಕೈಹಿಡಿತವಾಗಿರಬೇಕು.

೬. ತಂದೆಯಾದವನಾಗಲೀ, ಪೋಷಕನಾಗಲೀ ತನ್ನ ವಶದಲ್ಲಿದ್ದ ಕನ್ಯೆಯನ್ನು ಯಾರಿಗೆ ಪಾಣಿಗ್ರಹಣ ಮಾಡಿಕೊಡುವನೋ ಅಂತಹ ಪಾಣಿಗೃಹೀತನನ್ನು ಆ ಹೆಂಗಸು ಶುಶ್ರೂಷೆ ಮಾಡಿಕೊಂಡಿರಬೇಕು. ಅವನ ಮಾತನ್ನು ಮೀರಿ ನಡೆಯಬಾರದು.

**ಮಂಗಳಾರ್ಥಂ ಸ್ವಸ್ತ್ಯಯನಂ ಯಜ್ಞಶ್ಚಾಸಾಂ ಪ್ರಜಾಯತೇ ।**
**ಪ್ರಯುಜ್ಯತೇ ವಿವಾಹೇಷು ಪ್ರದಾನಂ ಸ್ವಾಮಿಕಾರಿತಂ ॥ ೭ ॥**

**ಅನೃತಾವೃತುಕಾಲೋಕ್ತೇ ಮಂತ್ರಸಂಸ್ಕಾರಕೃತ್ಪತಿಃ ।**
**ಸುಖಂ ನಿತ್ಯಂ ದದಾತೀಹ ಪರಲೋಕೇ ಚ ಯೋಷಿತಃ ॥ ೮ ॥**

**ವಿಶೀಲಃ ಕಾಮವೃತ್ತೋವಾ ಗುಣೈರ್ವಾ ಪರಿವರ್ಜಿತಃ ।**
**ಉಪಚರ್ಯಃ ಸ್ತ್ರಿಯಾ ಸಾಧ್ವ್ಯಾ ಸತತಂ ದೇವವತ್ಪತಿಃ ॥ ೯ ॥**

**ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನ ವ್ರತಂ ನಾಪ್ಯುಪೋಷಿತಂ ।**
**ಪತಿಂ ಶುಶ್ರೂಷತೇ ಯತ್ತು ತೇನ ಸ್ವರ್ಗೇ ಮಹೀಯತೇ ॥ ೧೦ ॥**

---

೭. ಮದುವೆಯಾದ ಹೆಂಡತಿಯಿಂದ ಸಹಿತನಾಗಿಯೇ ಗೃಹಸ್ಥನಾದವನು ಮಂಗಳಕಾರ್ಯಗಳನ್ನೂ ಪುಣ್ಯಾಹಾದಿ ಶುಭಕರ್ಮಗಳನ್ನೂ ಯಜ್ಞಯಾಗಾದಿಗಳನ್ನೂ ಮಾಡಬೇಕು. ಇಂತಹ ಗೃಹಿಣಿಯನ್ನು ಅವಳ ಪೋಷಕನಿಂದ ಯಥಾ ವಿಧಿಯಾಗಿ ಕನ್ಯಾದಾನರೂಪವಾಗಿ ಗಂಡನಾದವನು ಮದುವೆ-ಮಾಡಿಕೊಂಡಿರಬೇಕು.

೮. ಋತುಮತಿಯಾಗದ ಕನ್ಯೆಯನ್ನು ವಿವಾಹಮಾಡಿಕೊಂಡ ಬಳಿಕ ಅವಳು ಋತುಮತಿಯಾಗುವವರಿವಿಗೂ ನಿರೀಕ್ಷಿಸಿಕೊಂಡಿದ್ದು ಆ ಬಳಿಕ ಗಂಡನಾದವನು ಅವಳಿಗೆ ಗರ್ಭಾಧಾನಾದಿ ಸಂಸ್ಕಾರಕರ್ಮಗಳನ್ನು ಮಾಡಿ ಅವಳೊಡನೆ ಒಗೆತನಮಾಡಬೇಕು. ಅಂತಹ ಗಂಡನೊಡನೆ ಧರ್ಮಚಾರಿಣಿಯಾಗಿ ಸಂಸಾರಮಾಡಿಕೊಂಡಿರುವ ಹೆಂಗಸಿಗೆ ಈಲೋಕ ಪರಲೋಕಗಳಲ್ಲಿ ಯಥೇಚ್ಛವಾಗಿ ಸುಖವುಂಟಾಗುವುದು.

೯. ಕೈಹಿಡಿದ ಗಂಡನು ಒಂದು ವೇಳೆ ದುಶ್ಶೀಲನಾಗಿರಲಿ, ವಿಶೇಷ ಕಾಮುಕನಾಗಿರಲೀ ದುರ್ಗುಣಗಳಿಂದ ಕೂಡಿದವನಾಗಿರಲಿ ಅವನು ಹೇಗೇ ಇರಲಿ, ಪತಿವ್ರತೆಯಾದವಳು ಅವನನ್ನು ದೇವರಂತೆ ಭಾವಿಸಿ ಅವನಿಗೆ ಉಪಚಾರಮಾಡುತ್ತಿರಬೇಕು.

೧೦. ಹೆಂಗಸಾದವಳು ಪ್ರತ್ಯೇಕವಾಗಿ ಯಜ್ಞಮಾಡಬೇಕಾಗಿಲ್ಲ. ಬೇರೆ ಯಾವ ವ್ರತವನ್ನೂ ಮಾಡಬೇಕಾಗಿಲ್ಲ. ಯಾವ ದಿವಸವೂ ಉಪವಾಸವನ್ನಂತೂ ಮಾಡಬೇಕಾಗಿಯೇ ಇಲ್ಲ. ಹೆಂಗಸಾದವಳು ಪತಿಸೇವೆಯೊಂದನ್ನು ಮಾಡಿಕೊಂಡಿದ್ದರೆ ಸಾಕು. ಅವಳಿಗೆ ಸಕಲ ಧರ್ಮಗಳೂ ಕೈವಶವಾಗುವುವು.

ಪಾಣಿಗ್ರಾಹಸ್ಯಸಾಧ್ವೀ ಸ್ತ್ರೀ ಜೀವತೋ ವಾ ಮೃತಸ್ಯ ವಾ ।
ಪತಿಲೋಕಮಭೀಪ್ಸಂತೀ ನಾಚರೇತ್ಕಿಂಚಿದಪ್ರಿಯಂ ॥ ೧೧ ॥

ಕಾಮಂ ತು ಕ್ಷಪಯೇದ್ದೇಹಂ ಪುಷ್ಪಮೂಲಫಲೈಃ ಶುಭೈಃ ।
ನ ತು ನಾಮಾಽಪಿ ಗೃಹ್ಣೀಯಾತ್ಪತ್ಯೌ ಪ್ರೇತೇ ಪರಸ್ಯ ತು ॥ ೧೨ ॥

ಆಸೀತಾಮರಣಾತ್‌ಕ್ಷಾಂತಾ ನಿಯತಾ ಬ್ರಹ್ಮಚಾರಿಣೀ ।
ಯೋ ಧರ್ಮ ಏಕಪತ್ನೀನಾಂ ಕಾಂಕ್ಷಂತೀ ತಮನುತ್ತಮಂ ॥ ೧೩ ॥

ಅನೇಕಾನಿ ಸಹಸ್ರಾಣಿ ಸುಮುಗ್ಧಬ್ರಹ್ಮಚಾರಿಣಾಂ ।
ದಿವಂಗತಾನಾಂ ವಿಪ್ರಾಣಾಮಕೃತ್ವಾ ಕುಲಸಂತತಿಂ ॥ ೧೪ ॥

---

೧೧. ಮದುವೆಯಾದ ಮೇಲೆ ಹೆಂಗಸಾದವಳು ಗಂಡನು ಬದುಕಿರಲಿ ಅಥವಾ ದುರದೃಷ್ಟವಶದಿಂದ ಸತ್ತೇಹೋಗಲಿ, ಅಂತೂ ಅವಳು ಪತಿಲೋಕವನ್ನು ಬಯಸುವುದಾದರೆ ಗಂಡನಿಗೆ ಯಾವ ವಿಧವಾದ ಅಶ್ರೇಯಸ್ಸನ್ನೂ ಕೋರಕೂಡದು.

೧೨. ಗಂಡನು ಮೃತನಾದ ಮೇಲೆ ಹೆಂಡತಿಯಾದವಳು ದೇಹವನ್ನು ಪುಷ್ಪಗಂಧಮಾಲ್ಯಾದಿಗಳ ಸೇವನೆಯಿಂದ ದೂರಪಡಿಸಬೇಕು. ಗಂಡನು ಪರಲೋಕಕ್ಕೆ ಹೊರಟುಹೋದ ಮೇಲೆ ಆತನ ಪತ್ನಿಯು ಪತಿಧ್ಯಾನಪರಾಯಣಳಾಗಿರಬೇಕಲ್ಲದೆ ಪರಪುರುಷನ ನಾಮೋಚ್ಚಾರಣೆಯನ್ನೂ ಸಹ ಮಾಡಕೂಡದು.

೧೩. ಗಂಡ ಸತ್ತಮೇಲೆ ಹೆಂಡತಿಯಾದವಳು ತಾನು ಸಾಯುವತನಕ ನಿಯತ ಬ್ರಹ್ಮಚಾರಿಣಿಯಾಗಿಯೂ, ಕ್ಷಾಂತಳಾಗಿಯೂ ಜಿತೇಂದ್ರಿಯಳಾಗಿಯೂ ಇರಬೇಕು. ಆಕೆಯು ಮಹಾಪತಿವ್ರತೆಯೆನಿಸಿಕೊಂಡವಳಾಗಿ ಗಂಡನಿಗೆ ಪರಲೋಕದಲ್ಲಿ ಸುಖವುಂಟಾಗುವಂತಹ ಧರ್ಮಕಾರ್ಯಗಳಲ್ಲಿ ನಿರತಳಾಗಿರಬೇಕು.

೧೪. ಅನೇಕ ಮಂದಿ ಬ್ರಹ್ಮಚಾರಿಗಳು ಕೇವಲ ಮೂಢರಾಗಿ ತಾವು ಮದುವೆ ಮಾಡಿಕೊಂಡು ಸಂತತಿಯನ್ನು ಬೆಳೆಯಿಸದೆಯೇ ಬ್ರಹ್ಮಚರ್ಯವ್ರತದಿಂದಲೇ ಇದ್ದು ಸ್ವರ್ಗಕ್ಕೆ ಹೊರಟುಹೋಗಿರುತ್ತಾರೆ. ಕೆಲವರು ಮದುವೆಯಾದ ಮೇಲೂ ಬ್ರಹ್ಮಚರ್ಯದಿಂದಿದ್ದು ಸತ್ತುಹೋದರು.

ಮೃತೇ ಭರ್ತರಿ ಸಾಧ್ವೀ ಸ್ತ್ರೀ ಬ್ರಹ್ಮಚರ್ಯೇ ವ್ಯವಸ್ಥಿತಾ ।
ಸ್ವರ್ಗಂ ಗಚ್ಛತ್ಯಪುತ್ರಾಽಪಿ ಯಥಾ ತೇ ಬ್ರಹ್ಮಚಾರಿಣಃ ॥ ೧೫ ॥

ಅಪತ್ಯಲೋಭಾದ್ಯಾ ತು ಸ್ತ್ರೀ ಭರ್ತಾರಮತಿವರ್ತತೇ ।
ಸೇಹನಿಂದಾಮವಾಪ್ನೋತಿ ಪರಲೋಕಾಚ್ಚ ಹೀಯತೇ ॥ ೧೬ ॥

ನಾನ್ಯೋತ್ಪನ್ನಾ ಪ್ರಜಾಽಸ್ತೀಹ ನ ಚಾಪ್ಯನ್ಯ ಪರಿಗ್ರಹಾ ।
ನ ದ್ವಿತೀಯಶ್ಚ ಸಾಧ್ವೀನಾಂ ಕಶ್ಚಿದ್ಭರ್ತೋಪದಿಶ್ಯತೇ ॥ ೧೭ ॥

ಪತಿಂ ಹಿತ್ವಾ ನಿಕೃಷ್ಟಂ ಸ್ವಂ ಚೋತ್ಕೃಷ್ಟಂ ಯಾ ನಿಷೇವತೇ ।
ನಿಂದ್ಯೈವ ಲೋಕೇ ಭವತಿ ಪರಪೂರ್ವೇತಿ ಚೋಚ್ಯತೇ ॥ ೧೮ ॥

---

೧೫. ಗಂಡನು ಸತ್ತುಹೋದ ಮೇಲೆ ಪತಿವ್ರತೆಯಾದ ಅವನ ಹೆಂಡತಿಯು ಬ್ರಹ್ಮಚರ್ಯವ್ರತವನ್ನು ಕಾಪಾಡಿಕೊಂಡಿರುವುದಾದರೆ (ಜಿತೇಂದ್ರಿಯಳಾಗಿದ್ದರೆ) ಅವಳು ಅಪುತ್ರವತಿಯಾಗಿದ್ದಾಗ್ಯೂ ಸ್ವರ್ಗಲೋಕವನ್ನು ಹೊಂದಿಯೇ ಹೊಂದುತ್ತಾಳೆ.

೧೬. ಮಕ್ಕಳೇ ಆಗದೆ ಹೋದ ಸಮಯದಲ್ಲಿ ಯಾವ ಸ್ತ್ರೀಯಾದರೂ ಮಕ್ಕಳಾಗಬೇಕೆಂಬ ಆಶೆಯಿಂದ ಗಂಡನನ್ನು ಅತಿಕ್ರಮಿಸಿ ನಡೆಯುತ್ತಾಳೋ ಅವಳು ಈ ಲೋಕದ ಜನರ ನಿಂದೆಗೆ ಗುರಿಯಾಗುವಳಲ್ಲದೆ ಪರಲೋಕವನ್ನೂ ಕೆಡಿಸಿ ಕೊಳ್ಳುತ್ತಾಳೆ.

೧೭. ಅನ್ಯೋತ್ಪನ್ನವಾದ ಸಂತತಿಯು ಸಂತತಿಯೆನಿಸುವುದಿಲ್ಲ. ಅನ್ಯಪರಿಗ್ರಹ ಳಾದ ಹೆಂಗಸು ಸಾಧ್ವಿಯೆನಿಸುವುದಿಲ್ಲ. ಗಂಡನನ್ನು ಅವಳು ಪ್ರೀತಿಸುವವಳಲ್ಲ.

೧೮. ಗಂಡನನ್ನು ಬಿಟ್ಟು ಅವನಿಗಿಂತ ನಿಕೃಷ್ಟನಾದವನನ್ನಾಗಲೀ ಉತ್ಕೃಷ್ಟ ನಾದವನನ್ನಾಗಲೀ ಯಾವಳು ಪ್ರೀತಿಸುತ್ತಾಳೋ ಅವಳು ಲೋಕನಿಂದೆಗೆ ಗುರಿ ಯಾಗುವಳಲ್ಲದೆ ಅವಳು ಪರಪೂರ್ವಳೆಂದು ಹೇಳಿಸಿಕೊಳ್ಳುತ್ತಾಳೆ.

**ವ್ಯಭಿಚಾರಾತ್ತು ಭರ್ತುಃ ಸ್ತ್ರೀ ಲೋಕಾನ್ಪ್ರಾಪ್ನೋತಿ ನಿಂದಿತಾನ್ ।**
**ಶೃಗಾಲಯೋನಿಂ ಚಾಪ್ನೋತಿ ಪಾಪರೋಗೈಶ್ಚ ಪೀಡ್ಯತೇ ॥ ೧೯ ॥**

**ಪತಿಂ ಯಾ ನಾಭಿಚರತಿ ಮನೋವಾಗ್ದೇಹಸಂಯುತಾ ।**
**ಇಹಾಗ್ರ್ಯಾಂ ಕೀರ್ತಿಮಾಪ್ನೋತಿ ಪರಲೋಕೇ ಚ ಶಸ್ಯತೇ ॥ ೨೦ ॥**

**ಪತ್ಯುರಭ್ಯಧಿಕಂ ನಾರೀ ನೋಪವಾಸವ್ರತಂ ಚರೇತ್ ।**
**ಅನಾಯುಷ್ಯಂ ದ್ವಿಜಶ್ರೇಷ್ಠ ಪತ್ಯುಸ್ತಸ್ಯಾಸ್ತದುಚ್ಯತೇ ॥ ೨೧ ॥**

**ದೇವತಾರಾಧನಂ ಕುರ್ಯಾತ್ಕಾಮಂ ವಾ ಬ್ರಾಹ್ಮಣೋತ್ತಮ ।**
**ನಾರೀ ಪತಿವ್ರತಾ ರಾಮ ಪ್ರಾಪ್ತಾನುಜ್ಞಾಂ ತು ಭರ್ತೃತಃ ॥ ೨೨ ॥**

---

೧೯. ಈ ಪ್ರಕಾರವಾಗಿ ಯಾವ ದುರಾತ್ಮಳು ಗಂಡನನ್ನು ತಿರಸ್ಕರಿಸಿ ವ್ಯಭಿಚಾರಕ್ಕೆ ಮೊದಲು ಮಾಡುವಳೋ ಅವಳು ಮಹಾಪಾಪಪೂರಿತವಾದ ನರಕಕ್ಕೆ ಪ್ರವೇಶಿಸುತ್ತಾಳೆ. ಪುನಃ ಅವಳು ಪ್ರಪಂಚದಲ್ಲಿ ಹುಟ್ಟಿದಾಗ ನರಿಯ ಹೊಟ್ಟೆಯಲ್ಲಿ ಹುಟ್ಟುವಳಲ್ಲದೆ ಆ ಜನ್ಮದಲ್ಲೂ ಮಹಾಪಾಪಗಳನ್ನೂ ರೋಗಗಳನ್ನೂ ಅನುಭವಿಸುತ್ತಾಳೆ.

೨೦. ಯಾವಳು ಪಾಪಕೃತ್ಯಗಳಿಗೆ ಮನಗೊಡದೆ ಮನೋವಾಕ್ಕಾಯಗಳಿಂದಲೂ ಪತಿಶುಶ್ರೂಷೆಯನ್ನು ಮಾಡುತ್ತಾಳೋ ಅವಳು ಈ ಲೋಕದಲ್ಲಿ ಪರಮ ಶ್ರೇಷ್ಠವಾದ ಕೀರ್ತಿಯನ್ನು ಹೊಂದುವಳಲ್ಲದೆ ಪರಲೋಕದಲ್ಲೂ ಬಹಳ ಸುಖವನ್ನು ಹೊಂದುತ್ತಾಳೆ.

೨೧. ಹೆಂಗಸಾದವಳು ಗಂಡನಿಗಿಂತಲೂ ಹೆಚ್ಚಾಗಿ ಉಪವಾಸ-ವ್ರತಾದಿಗಳನ್ನು ಮಾಡಕೂಡದು. ಹಾಗೇನಾದರೂ ಅವಳು ಪತಿಗಿಂತ ಬೇರೆ ವ್ರತಾದಿಗಳನ್ನು ಮಾಡುವುದಾದರೆ ಗಂಡನಿಗೆ ಆಯುಸ್ಸು ಕ್ಷೀಣವಾಗುವುದೆಂದು ತಿಳಿಯಬೇಕು.

೨೨. ಎಲೈ ಪರಶುರಾಮನೇ! ಕೇಳು. ಹೆಂಗಸಾದವಳು ಏನಾದರೂ ಕಾಮ್ಯ ಕರ್ಮವನ್ನಾಗಲೀ, ನೈಮಿತ್ತಿಕ ಕರ್ಮಗಳನ್ನಾಗಲೀ, ದೇವತಾಪೂಜಾದಿಗಳನ್ನಾಗಲೀ ಮಾಡಬೇಕಾದರೆ ಗಂಡನ ಆಜ್ಞೆಯನ್ನು ಪಡೆದು ಮಾಡಬೇಕು. ಅದು ವಿನಹ ಇನ್ನಾವ ಹೆಚ್ಚಿಗೆ ಕೆಲಸಗಳನ್ನೂ ಮಾಡಕೂಡದು.

ನಾರೀ ಖಲ್ವನನುಜ್ಞಾತಾ ಪಿತ್ರಾ ಭರ್ತ್ರಾ ಸುತೇನ ವಾ ।
ವಿಫಲಂ ತದ್ಭವೇತ್ತಸ್ಯಾ ಯತ್ಕರೋತ್ಯೌರ್ಧ್ವದೈಹಿಕಂ ॥ ೨೩ ॥

ಸ್ತ್ರೀಣಾಂ ಪೂಜ್ಯತಮಾ ಲೋಕೇ ದೇವತಾಗೃಹವಾಸಿನಾಂ ।
ಯಾಸ್ತಾಃ ಸಂಪೂಜನೀಯಾಃ ಸ್ಯುಸ್ತಾಸಾಮೇವ ಯಥಾವಿಧಿ ॥ ೨೪ ॥

ತಾಸಾಂ ಚ ಪೂಜನಂ ಕಾರ್ಯಂ ವಿದಿತಂ ಸ್ವಾಮಿನಸ್ತಥಾ ।
ಅನ್ಯಥಾಚೇತ್ಪ್ರವರ್ತೇತ ನಿಗ್ರಾಹ್ಯಾ ಸಾ ಪ್ರಕೀರ್ತಿತಾ ॥ ೨೫ ॥

ಗತ್ವಾಽನ್ಯಪುರುಷಂ ನಾರೀ ನರಕಂ ಪ್ರತಿಪದ್ಯತೇ ।
ಕೂಟಶಾಲ್ಮಲಿಮಿತ್ಯುಕ್ತಂ ಯಾವದಾಭೂತಸಂಪ್ಲವಂ ॥ ೨೬ ॥

---

೨೩. ಕಡೆಗೆ ಔರ್ಧ್ವದೈಹಿಕಕ್ರಿಯೆಗಳನ್ನು ಮಾಡಬೇಕಾದಾಗ್ಗೂ ಹೆಂಗಸಾದವಳು ತಂದೆ, ಗಂಡ, ಮಗ ಇವರ (ಯಾರ ವಶದಲ್ಲಿರುವಳೋ ಅವರ) ಅಪ್ಪಣೆಯನ್ನು ಪಡೆಯದೆ ಮಾಡಕೂಡದು. ಹಾಗೇನಾದರೂ ಸ್ವತಂತ್ರಿಸಿ ಮಾಡಿದರೆ ಅದು ವಿಫಲವಾಗಿ-ಹೋಗುತ್ತದೆ.

೨೪. ಸ್ತ್ರೀಯಾದವಳು ದೇವರ-ಗುಡಿಗೆ ಹೋಗಿ ಅಲ್ಲಿರುವ ದೇವರನ್ನು ಯಥಾವಿಧಿಯಾಗಿ ಪೂಜಿಸುವುದಕ್ಕಿಂತ ಮನೆಯಲ್ಲಿರುವ ಪ್ರತ್ಯಕ್ಷ ದೇವರಾದ ಗಂಡನನ್ನು ಪೂಜಿಸ (ಉಪಚರಿಸ)ಬೇಕು.

೨೫. ಗಂಡನೂ ಸಹ ಅದೇ ಮೇರೆ ತನ್ನ ಧರ್ಮಚಾರಿಣಿಯನ್ನು ಗೌರವಿಸಬೇಕು. ಹೆಂಡತಿಯಂತೂ ಆವಶ್ಯವಾಗಿ ಪತಿಸೇವೆಯನ್ನು ಮಾಡಲೇಬೇಕು. ಹಾಗೆ ಮಾಡದೆಹೋದರೆ ಅವಳು ಸಂಗ್ರಾಹ್ಯಳಾಗಲಾರಳು.

೨೬. ಗಂಡನಿದ್ದಾಗ್ಗೂ ಯಾವ ಹೆಂಗಸು ಅನ್ಯಪುರುಷನ ಬಳಿಗೆ ಹೋಗುವಳೋ ಅವಳು ನರಕವಾಸವನ್ನನುಭವಿಸಬೇಕಾಗುವುದಲ್ಲದೆ ಈ ಪ್ರಪಂಚವೂ ಪಂಚಭೂತಗಳೂ ಇರುವವರಿವಿಗೂ ಕೂಟಶಾಲ್ಮಲವೆಂಬ ಭಯಂಕರ ನರಕದಲ್ಲಿ ಬಿದ್ದಿರಬೇಕಾಗಿ ಬರುವುದು.

**ಗರ್ಹಿತಾ ಚ ತಥಾ ಪತ್ಯುರ್ನರಕಂ ಯಾತಿ ಭಾರ್ಗವ ।**
**ದಶವರ್ಷಸಹಸ್ರಾಣಿ ತಥೈವಾಪ್ರಿಯವಾದಿನೀ ॥ ೨೭ ॥**

**ಸರ್ವಾವಸ್ಥಾಸ್ವಪಿ ಸ್ತ್ರೀಷು ನ ವಧೋ ವಿದ್ಯತೇ ದ್ವಿಜ ।**
**ಪರೇಣ ಶಂಕಿತಾಮೇನಾಂ ಸಂಯತಾಂ ವಾಸಯೇದ್ಗೃಹೇ ॥ ೨೮ ॥**

**ಹೃತಾಧಿಕಾರಾಂ ಮಲಿನಾಂ ಪಿಂಡಮಾತ್ರೋಪಜೀವಿನೀಂ ।**
**ಪರಿಭೂತಾಮಧಃಶಯ್ಯಾಂ ವಾಸಯೇದ್ವ್ಯಭಿಚಾರಿಣೀಂ ॥ ೨೯ ॥**

**ಮೂಲಕರ್ಮ ನ ಕರ್ತವ್ಯಂ ಕಥಂಚಿದಪಿ ಯೋಷಿತಾ ।**
**ಮೂಲಕರ್ಮರತಾ ನಾರೀ ಕಲ್ಪಂ ನರಕಮಾವಸೇತ್ ॥ ೩೦ ॥**

---

೨೭. ಪರಲೋಕದ ನರಕದ ಮಾತದಂತಿರಲಿ. ಪರಪುರುಷನನ್ನು ಕಾಮಿಸುವ ಸ್ತ್ರೀಯು ಈ ಲೋಕದಲ್ಲಿಯೇ ಜನರ ತಿರಸ್ಕಾರಕ್ಕೆ ಗುರಿಯಾಗುತ್ತಾಳೆ. ಯಾವ ಹೆಂಗಸು ಗಂಡನಿಗೆ ಅಪ್ರಿಯವನ್ನು (ಅಹಿತವಾದ ವಾಕ್ಯ) ಹೇಳುವಳೋ ಅವಳು ಹತ್ತುಸಾವಿರ ವರ್ಷಕಾಲ ನರಕದಲ್ಲಿ ವಾಸಮಾಡುತ್ತಾಳೆ.

೨೮. ಹೆಂಗಸು ಎಂತಹ ದುರವಸ್ಥೆಯಲ್ಲಿದ್ದಾಗ್ಗೂ ಎಂತಹ ಭಯಂಕರ ಪಾಪವನ್ನು ಮಾಡಿದ್ದಾಗ್ಗೂ ಅವಳನ್ನು ಕೊಲ್ಲಬಾರದು. ಒಂದು ವೇಳೆ ಹೆಂಗಸಾದವಳು ದುಷ್ಟಕಾರ್ಯಮಾಡಿ ಪರಾಪವಾದಕ್ಕೆ ಗುರಿಯಾಗುವುದಾದರೆ ಅಂತಹವಳನ್ನು ಮನೆಯನ್ನು ಬಿಟ್ಟು ಹೊರಕ್ಕೆ ಕಳುಹಿಸಿಬಿಡಬೇಕು.

೨೯. ಮನೆಯ ಅಧಿಕಾರವನ್ನು (ಪತಿವ್ರತಾಧರ್ಮ ಅಥವಾ ಗೃಹಿಣೀಧರ್ಮ) ಕಳೆದುಕೊಂಡವಳನ್ನೂ, ಸರ್ವದಾ ಮಾಲಿನ್ಯಸ್ಥಿತಿಯಲ್ಲಿರುವವಳನ್ನೂ, ಹೊಟ್ಟೆ ಹೊರೆದುಕೊಳ್ಳುವುದರಲ್ಲಿ ಮಾತ್ರ ಆಸಕ್ತಳಾದವಳನ್ನೂ, ಜನರಿಂದ ತಿರಸ್ಕಾರ ಹೊಂದಿದವಳನ್ನೂ, ನೆಲದ ಮೇಲೆ ಸರ್ವದಾ ಬಿದ್ದಿರುವವಳನ್ನೂ, ವ್ಯಭಿಚಾರವೃತ್ತಿಯಿಂದಿರುವ ಸ್ತ್ರೀಯನ್ನೂ ಮನೆಯಲ್ಲಿರಗೊಡಿಸಬಾರದು.

೩೦. ಮದ್ದು, ಮಾಟ, ತಲೆಗೊತ್ತುವುದೇ ಮುಂತಾದ (ಮಾಟ) ಕರ್ಮಗಳನ್ನು ಹೆಂಗಸು ಯಾವಾಗಲೂ ಕಲಿಯಕೂಡದು. ಇಂತಹ ಮಾಟಕುಶಲಗಳನ್ನು ಯಾವಳಾದರೂ ಕಲಿತು ಅದನ್ನು ಪ್ರಯೋಗಮಾಡುವುದಾದರೆ ಕಲ್ಪಾಂತ್ಯದವರಿಗೂ ನರಕದಲ್ಲಿ ವಾಸಮಾಡಬೇಕಾಗಿ ಬರುವುದು.

**ದೌರ್ಭಾಗ್ಯಂ ಮಹದಾಪ್ನೋತಿ ತತ್ರ ಯತ್ರಾಭಿಜಾಯತೇ ।**
**ಯಾ ಚ ನಾರೀ ಸಪತ್ನೀನಾಂ ಕುರ್ಯಾದ್ದೌರ್ಭಾಗ್ಯಕಾರಣಂ　　॥ ೩೧ ॥**
**ಕುಹಕೈಃ ಪಶ್ಯತಿ ಸಾऽಪಿ ಕಲ್ಪಾನಾಂ ನರಕೇ ದ್ವಿಜ ।**
**ಪುಂಸ್ತ್ವಮೂಲಂ ತಥಾ ಲಕ್ಷ್ಮೀಂ ಪತ್ಯುರ್ಹಿಂಸತಿ ಸಾ ತಥಾ　　॥ ೩೨ ॥**
**ಯಕ್ಷರಕ್ಷಃ ಪಿಶಾಚಾನಾಂ ಮೂಲಕರ್ಮರತಾ ಸದಾ ।**
**ವಶ್ಯೋ ಭವತಿ ಲೋಕೇಷು ಭರ್ತಾ ತಸ್ಯಾಸ್ತಥೈವ ಚ　　॥ ೩೩ ॥**
**ನಾರೀ ಕೃತ್ವಾ ಪತಿಂ ವಶ್ಯಂ ಸತತಂ ಮೂಲಕರ್ಮಣಾ ।**
**ಲಭತೇऽನ್ತೇ ತು ದೌರ್ಭಾಗ್ಯಂ ಭೂತೈರ್ವಾ ಭಕ್ಷ್ಯತೇ ಧ್ರುವಂ　　॥ ೩೪ ॥**

---

೩೧. ನರಕದಲ್ಲಿ ವಾಸವನ್ನು ಮುಗಿಸಿಕೊಂಡು ಪುನಃ ಒಂದುವೇಳೆ ಮನುಷ್ಯ ಲೋಕದಲ್ಲೆಲ್ಲಿಯಾದರೂ ಅವಳು ಹುಟ್ಟುವುದಾದರೆ ಮಹತ್ತರವಾದ ದೌರ್ಭಾಗ್ಯ ವನ್ನನುಭವಿಸಬೇಕಾಗುತ್ತದೆ. ಈ ಮಾಟ-ಮದ್ದುಗಳನ್ನು ಯಾವಳು ತನ್ನ ಸವತಿ ಯರಿಗೆ ಪ್ರಯೋಗಿಸಿ ಅವರನ್ನು ದುಃಖಕ್ಕೆ ಗುರಿಪಡಿಸುವಳೋ ಅವಳೂ ಸಹ ದೌರ್ಭಾಗ್ಯದಿಂದೊಡಗೂಡಿದ ಹೀನಜನ್ಮದಲ್ಲಿ ಹುಟ್ಟಬೇಕಾಗಿ ಬರುವುದು.

೩೨. ಯಾವಳು ಗಂಡನಿಗೆ ಮದ್ದು ಹಾಕಿ ಅವನನ್ನೂ ಅವನ ದ್ರವ್ಯವನ್ನೂ ಸ್ವಾಧೀನಪಡಿಸಿಕೊಳ್ಳಲಪೇಕ್ಷಿಸುವಳೋ ಅವಳು ಮಾಡಿದ ಪತಿಹಿಂಸೆಯಿಂದ ಲಕ್ಷ್ಮಿಯೂ ಕೈಬಿಟ್ಟುಹೋಗುವಳು. ಗಂಡನ ಸುಖವೂ ನಿರ್ಮೂಲವಾಗುವುದು. ಪರಲೋಕಗತಿಯೂ ತಪ್ಪಿಹೋಗುವುದು. ಕಲ್ಪಾಂತ್ಯ ನರಕವಾಸವೂ ಪ್ರಾಪ್ತವಾಗು ವುದು. ಅವಳು ತನ್ನ ಕುತ್ಸಿತ (ಕುಹಕ) ಭಾವಗಳಿಂದ ಇಂತಹ ಅನರ್ಥಗಳನ್ನೆಲ್ಲಾ ಅನುಭವಿಸಬೇಕಾಗಿ ಬರುವುದು.

೩೩. ಹೀಗೆ ಗಂಡನಿಗೆ ಮದ್ದು ಹಾಕುವ ಆ ಮಹಾಮಾರಿಯು ಯಕ್ಷರಾಕ್ಷಸ ಪಿಶಾಚಾದಿಗಳ ಹಿಂಸೆಗೆ ಸಿಕ್ಕಿಬೀಳುವಳಲ್ಲದೆ ಗಂಡನನ್ನೂ ಸಹ ಅವರ ಅಧೀನಮಾಡಿ ಬಿಡುತ್ತಾಳೆ. ತಾತ್ಕಾಲಿಕವಾಗಿ ತನ್ನ ಮಾತಿನಂತೆ ನಡೆಯುವ ಆ ಗಂಡನು ತನ್ನ ಸ್ವಾಧೀನನೆಂದು ಬರೀ ಭ್ರಮೆಪಡುತ್ತಾಳೆ.

೩೪. ಈ ಮೇಲ್ಕಂಡ ಪ್ರಕಾರವಾಗಿ ಮದ್ದು ಮಾಟಗಳಿಂದ ಯಾವ ಹೆಂಗಸು ತನ್ನ ಗಂಡನನ್ನು ತನ್ನ ಸ್ವಾಧೀನಕ್ಕೆ ತಂದುಕೊಂಡು ತಾನು ಹೇಳಿದಂತೆ ನಡೆಯುವ ಹಾಗೆ ಅವನನ್ನು ಮಾಡುತ್ತಾಳೋ ಅವಳು ಕೊನೆಕೊನೆಗೆ ಮಹತ್ತರವಾದ ದೌರ್ಭಾಗ್ಯಕ್ಕೆ ಗುರಿಯಾಗುತ್ತಾಳೆ. ಕೊನೆಗೆ ಅವಳನ್ನು ಯಾವುದೋ ಒಂದು ಭೂತವೋ ಪಿಶಾಚವೋ ತಿಂದುಬಿಡುತ್ತದೆ.

ತಸ್ಮಾತ್ಸರ್ವಪ್ರಯತ್ನೇನ ಮೂಲಕರ್ಮ ವಿವರ್ಜಯೇತ್ ।
ಆತ್ಮಾನಮಥ ಭರ್ತಾರಂ ನಾಶಯೇನ್ಮೂಲಕರ್ಮಣಾ ॥ ೩೫ ॥

ಬ್ರಾಹ್ಮಣೀ ನ ಪಿಬೇನ್ಮದ್ಯಂ ನ ಚ ವಿಟ್‌ಕ್ಷತ್ರಿಯಸ್ತ್ರಿಯಃ ।
ಸುರಾಂ ಪಿಬೇಯುರ್ಧರ್ಮಜ್ಞ ತತ್ಪಾನಾನ್ನಾಶಮಾಪ್ನುಯುಃ ॥ ೩೬ ॥

ತತೋ ಭವತಿ ಧರ್ಮಜ್ಞ ಜಲೌಕಾ ರಕ್ತಪಾಯಿಕಾ ।
ಕಲ್ಪಾವಶೇಷಂ ಸಕಲಂ ತೇನ ಘೋರೇಣ ಕರ್ಮಣಾ ॥ ೩೭ ॥

ಪರವೇಶ್ಮರುಚಿರ್ನ ಸ್ಯಾನ್ನ ಸ್ಯಾತ್ಕಲಹಶಾಲಿನೀ ।
ನ ಚ ತಿಷ್ಠೇತ್ತಥಾ ದ್ವಾರಿ ನ ಚ ರಾಮ ಗವಾಕ್ಷಕೇ ॥ ೩೮ ॥

---

೩೫. ಆದ್ದರಿಂದ ಪರಮ ಸಾಹಸಮಾಡಿ ತುಂಬಾ ಪ್ರಯತ್ನದಿಂದ ಹಾಳು ಮಾಟಕುಶಲದ ಕೆಲಸಗಳನ್ನು ಕಲಿತಿದ್ದರೆ ಅದನ್ನು ಖಂಡಿತ ಬಿಟ್ಟುಬಿಡಬೇಕು. ಈ ವಿಧವಾದ ಮೂಲಕರ್ಮದಿಂದ ತಾನೂ ಹಾಳಾಗುವುದಲ್ಲದೆ ಆ ಹೆಂಗಸು ತನ್ನ ಗಂಡನನ್ನೂ ಕೊಂದುಬಿಡುತ್ತಾಳೆ.

೩೬. ಬ್ರಾಹ್ಮಣಸ್ತ್ರೀಯಾಗಲೀ, ಕ್ಷತ್ರಿಯ ವೈಶ್ಯಸ್ತ್ರೀಯರಾಗಲೀ ಮದ್ಯಪಾನವನ್ನು ಮಾಡಬಾರದು. ಹಾಗೇನಾದರೂ ವರ್ಣತ್ರಯದ ಹೆಂಗಸರಲ್ಲಿ ಯಾರಾಗಲೀ ಹೆಂಡವನ್ನು ಕುಡಿಯಲು ಕಲಿತರೆ ಅವರು ಹಾಳಾಗಿ ಹೋಗುವರು.

೩೭. ಹೆಂಡ ಕುಡಿಯುವ ಹೆಂಗಸು ಇನ್ನೊಂದು ಜನ್ಮಕ್ಕೆ ರಕ್ತಹೀರುವ ಜಿಗಣೆಯಾಗಿ ಹುಟ್ಟುತ್ತಾಳೆ. ಇಂತಹ ಘೋರವಾದ ಮಹಾ ಪಾಪಕರ್ಮದಿಂದ ಅವಳು ಕಲ್ಪಾಂತ್ಯದವರಿಗೂ ಘೋರ ಸಂಕಟವನ್ನನುಭವಿಸಬೇಕಾಗುವುದು,

೩೮. ಹೆಂಗಸಾದವಳು ಪರರ ಮನೆಗೆ ಪದೇಪದೇ ಹೋಗಕೂಡದು. ಯಾವಾಗಲೂ ಜಗಳಗಂಟಿಯಾಗಿರಕೂಡದು. ಬಾಗಿಲಿನಲ್ಲಿ ನಿಂತುಕೊಂಡಿರಬಾರದು. ಕಿಟಕಿಯ ಬಳಿಯಲ್ಲಿ ನಿಂತುಕೊಂಡು ಹೊರಗೆ ನೋಡುತ್ತಿರಬಾರದು.

ಮಣ್ಡನಂ ವರ್ಜಯೇನ್ನಾರೀ ತಥಾ ಪ್ರೋಷಿತ ಭರ್ತೃಕಾ ।
ದೇವತಾರಾಧನಪರಾ ಭವೇದ್ಭರ್ತೃಹಿತೇ ರತಾ ॥ ೩೯ ॥

ಧಾರಯೇನ್ಮಂಗಲಾರ್ಥಾಯ ಕಿಂಚಿದಾಭರಣಂ ತಥಾ ।
ನ ಜಾತು ವಿಧವಾ ವೇಷಂ ಕದಾಚಿದಪಿ ಕಾರಯೇತ್ ॥ ೪೦ ॥

ಪತಿವ್ರತಾ ತು ಯಾ ನಾರೀ ಸಹ ಭರ್ತ್ರಾ ದಿವಂಗತಾ ।
ಕಲ್ಪಾವಶೇಷಂ ಮುದಿತಾ ಪೂಜ್ಯತೇ ತ್ರಿದಶಾಲಯೇ ॥ ೪೧ ॥

ಪತಿವ್ರತಾಂ ಸವರ್ಣಾಂ ಸ್ತ್ರೀಂ ದ್ವಿಜಾತಿಃ ಪೂರ್ವಮಾರಿಣೀಂ ।
ದಾಹಯೇದಗ್ನಿಹೋತ್ರೇಣ ಯಜ್ಞಪಾತ್ರೈಶ್ಚ ಧರ್ಮವಿತ್ ॥ ೪೨ ॥

---

೩೯. ಗಂಡನು ಊರನ್ನು ಬಿಟ್ಟು ಪರಸ್ಥಳಕ್ಕೆ ಹೋಗಿದ್ದಾಗ ಅಲಂಕಾರಗಳನ್ನು ಮಾಡಿಕೊಳ್ಳಬಾರದು. ಗಂಡನು ಊರಿಗೆ ಬರುವವರೆವಿಗೂ ಅವನಿಗೆ ಶ್ರೇಯಸ್ಸನ್ನು ಕೋರುತ್ತಾ ದೇವತಾರಾಧನೆಯಲ್ಲಿ ನಿರತಳಾಗಿರಬೇಕು.

೪೦. ಸುವಾಸಿನಿಯೆಂಬ ಮಂಗಳಲಾಂಛನಕ್ಕೋಸ್ಕರ ಮಾತ್ರ ತಾಳಿ, ಕರೀಮಣಿ, ಮೂಗುಬಟ್ಟು, ಓಲೆ, ಕಾಲುಂಗರ, ಮುಂತಾದ ಸ್ವಲ್ಪ ಸ್ವಲ್ಪ ಆಭರಣಗಳನ್ನು ಮಾತ್ರ ಧರಿಸಬೇಕು. ಹಾಗಲ್ಲದೆ ಗಂಡಸತ್ತವಳಂತೆ ವೇಷವನ್ನು ಮಾತ್ರ ಹಾಕಿಕೊಂಡಿರಬಾರದು.

೪೧. ಯಾವ ಹೆಂಗಸು ಗಂಡನ ಜತೆಯಲ್ಲಿಯೇ ಮೃತಳಾಗುವಳೋ ಆ ಮಹಾಪತಿವ್ರತೆಯು ಕಲ್ಪಾಂತ್ಯದವರೆಗೂ ಸ್ವರ್ಗಲೋಕದಲ್ಲಿ ಗಂಡನೊಡನೆ ಯಥೇಚ್ಛವಾಗಿ ಭೋಗಭಾಗ್ಯಗಳನ್ನನುಭವಿಸುತ್ತಾಳೆ.

೪೨. ಅಗ್ನಿಹೋತ್ರವನ್ನಿಟ್ಟಿದ್ದ ಬ್ರಾಹ್ಮಣನ ಹೆಂಡತಿಯೇನಾದರೂ ಗಂಡನಿಗಿಂತ ಮುಂಚೆ ಸತ್ತುಹೋದರೆ ಅವಳ ಹೆಣವನ್ನು ಸ್ಮಶಾನಕ್ಕೆ ಹೊತ್ತುಕೊಂಡು ಹೋಗುವಾಗಲೇ, ಅಗ್ನಿಹೋತ್ರ ಸಾಧನಗಳಾದ ಅರಣಿ, ಯಜ್ಞಪಾತ್ರಾದಿಗಳನ್ನೂ ಸಹ ಜತೆಯಲ್ಲೇ ತೆಗೆದುಕೊಂಡು ಹೋಗಬೇಕಲ್ಲದೆ ಅವಳ ಚಿತಿಯಲ್ಲಿ ಆ ಪಾತ್ರೆಗಳನ್ನೆಲ್ಲಾ ಹಾಕಿ ಅವಳ ಶವದೊಡನೆಯೇ ಸುಟ್ಟುಬಿಡಬೇಕು.

ಭಾರ್ಯಾಯೈ ಪೂರ್ವಮಾರಿಣ್ಯೈ ದತ್ವಾಗ್ನೀನಂತ್ಯಕರ್ಮಣಿ ।
ಪುನರ್ದಾರಕ್ರಿಯಾಂ ಕುರ್ಯಾತ್ಪುನರಾಧಾನಮೇವ ಚ ॥ ೪೩ ॥

ಮೃತೇ ಭರ್ತರಿ ಯಾ ಸಾಧ್ವೀ ಪುತ್ರಮಾಶ್ರಿತ್ಯ ಭಾರ್ಗವ ।
ತಪಸಾ ಶಾತಯೆದ್ದೇಹಂ ತೇನ ಸ್ವರ್ಗೇ ಮಹೀಯತೇ ॥ ೪೪ ॥

ಪತಿಪಕ್ಷೇ ನರಂ ಕಂಚಿತ್ಪುತ್ರಾಭಾವೇ ಸಮಾಶ್ರಯೇತ್ ।
ಬಿಭೃಯಾದ್ಧಿ ಸ ಚಾಪ್ಯೇನಾಂ ಭೋಜನಾಚ್ಛಾದನೈಃ ಸದಾ ॥ ೪೫ ॥

ಪತಿಪಕ್ಷೇ ಸಮುಚ್ಛಿನ್ನೇ ಪಿತೃಪಕ್ಷಃ ಪ್ರಭುಃ ಸ್ತ್ರಿಯಃ ।
ವಿಷಮಸ್ಥಾಽಪಿ ಭರ್ತವ್ಯಾ ಪಿತೃಪಕ್ಷೇ ಸ್ವಬಂಧುಭಿಃ ॥ ೪೬ ॥

---

೪೩. ಮೊದಲು ಹೆಂಡತಿ ಸತ್ತುಹೋದರೆ ಅವಳ ಅಂತ್ಯೇಷ್ಟಿಗೆ ಅಗ್ನಿಹೋತ್ರದ ಅಗ್ನಿಯನ್ನೇ ಉಪಯೋಗಿಸಬೇಕು. ಆಗ ಅವಳ ಜತೆಯಲ್ಲಿ ಅಗ್ನಿಯು ಹೊರಟು ಹೋಗುವುದರಿಂದ ಆಕೆಯ ಗಂಡನು ನಿರಗ್ನಿಕ (ವಿಧುರ) ನಾಗುವನು. ಆಗ ಬಿಟ್ಟು ಹೋದ ಅಗ್ನಿಯನ್ನು ಪುನಃ ಸಂಪಾದಿಸಬೇಕಾದರೆ ಪುನಃ ಬೇರೇ ಹೆಂಡತಿಯನ್ನು ಮದುವೆಮಾಡಿಕೊಂಡು ಆಧಾನ (ಅಗ್ನಿಕಾರ್ಯ) ಕರ್ಮವನ್ನೇ ಮಾಡಬೇಕು. (ಆಗ ಲೀಗ ಸಾಽಗ್ನಿಕನೆನಿಸಿಕೊಳ್ಳುವನು).

೪೪. ಗಂಡನು ಸತ್ತುಹೋದ ಮೇಲೆ ಯಾವ ಹೆಂಗಸು ಗಂಡುಮಕ್ಕಳನ್ನನು ಸರಿಸಿಕೊಂಡು ತಪೋಪವಾಸಾದಿಗಳಿಂದ ಜೀವಮಾನವನ್ನು ಕಳೆಯುವಳೋ ಅವಳು ಸ್ವರ್ಗಲೋಕವನ್ನು ಹೊಂದುವಳು.

೪೫. ಒಂದು ವೇಳೆ ಗಂಡ ಸತ್ತ ಹೆಂಗಸಿಗೆ ಗಂಡುಮಕ್ಕಳಿಲ್ಲದೆ ಹೋದರೆ ಗಂಡನ ಬದಲಾಗಿ ಬೇರೆಯೊಬ್ಬನನ್ನು ಪೋಷಕನನ್ನಾಗಿ ಸ್ವೀಕರಿಸಬಹುದು. ಆ ಪೋಷಕನು ಆ ಹೆಂಗಸಿಗೆ ಅನ್ನವಸ್ತ್ರಗಳನ್ನು ಕೊಟ್ಟು ಅವಳನ್ನು ಪೋಷಿಸಿಕೊಂಡಿರಬೇಕು.

೪೬. ಅಂತಹ ಪೋಷಕನು ಗಂಡನ ಸಮೀಪದ ಅನುಬಂಧಿಯಾಗಿರಬೇಕು. ಹಾಗೆ ಗಂಡನ ಸಮೀಪದ ಬಳಗದವರು ಪೋಷಕರಾಗಲು ಸಿಕ್ಕದೆ ಹೋದರೆ ತಂದೆಯ ಕಡೆಯ ಒಬ್ಬ ಪೋಷಕನನ್ನು ಗೊತ್ತುಮಾಡಿಕೊಳ್ಳಬೇಕು. ಆ ಹೆಂಗಸು ಎಂತಹ ವಿಷಮಾವಸ್ಥೆಯಲ್ಲಿದ್ದಾಗ್ಗೂ ತಾನು ಸ್ವತಂತ್ರವಾಗಿ ಮಾತ್ರ ಇರಕೂಡದು. ಯಾವನಾದರೊಬ್ಬ ತನ್ನ ತಂದೆಯ ಕಡೆ ಬಳಗದ ಯೋಗ್ಯ ಮನುಷ್ಯನನ್ನು ಪೋಷಕನನ್ನಾಗಿ ಇಟ್ಟುಕೊಳ್ಳಬೇಕು.

**ಮೃತಂ ಭರ್ತಾರಮಾದಾಯ ಯದಿ ನಾಽಥ ಪತಿವ್ರತಾ ।**
**ಪ್ರವಿಶೇದ್ದ್ವಿಜಶಾರ್ದೂಲ ಜ್ವಲಿತಂ ಜಾತವೇದಸಂ ॥ ೪೭ ॥**

**ತಿಸ್ರಃ ಕೋಟ್ಯೋಽರ್ಧಕೋಟೀ ಚ ಯಾನಿ ಲೋಮಾನಿ ಮಾನವೇ ।**
**ತಾವಂತ್ಯೇವ ಶತಾಬ್ದಾನಿ ಸ್ವರ್ಗಲೋಕೇ ಮಹೀಯತೇ ॥ ೪೮ ॥**

**ವ್ಯಾಲಗ್ರಾಹೀ ಯಥಾ ಸರ್ಪಂ ಬಿಲಾದುದ್ಧರತೇ ಬಲಾತ್ ।**
**ಏವಂ ಭರ್ತಾರಮಾದಾಯ ಸಹ ತೇನೈವ ಗಚ್ಛತಿ ॥ ೪೯ ॥**

**ಸದ್ವೃತ್ತಮುಧ್ಯಾಪಯಿತುಂ ಗತಾನಾಂ ।**
**ಸ್ತ್ರೀಣಾಂ ವಿಯೋಗಕ್ಷತಕಾತರಾಣಾಂ ।**

---

೪೭. ಎಲೈ ಪರಶುರಾಮನೇ! ಕೇಳು ಪತಿಯನ್ನು ಕಳೆದುಕೊಂಡ ಹೆಂಗಸು ಯಾವ ತಂಟೆಯೂ ಇಲ್ಲದೆ ಸುಖವಾಗಿರಬೇಕೆಂದು ಬಯಸುವುದಾದರೆ ಗಂಡನ ಚಿತಿಯಲ್ಲಿ ತಾನೂ ಮಲಗಿಕೊಂಡು ಜ್ವಲಿಸುತ್ತಿರುವ ಜಾತವೇದಸ (ಯಜ್ಞೇಶ್ವರ) ನಲ್ಲಿ ತನ್ನ ದೇಹವನ್ನು ಹೋಮ ಮಾಡಿಬಿಟ್ಟರೆ ಬಹಳ ಒಳ್ಳೆಯದು.

೪೮. ಈರೀತಿ ಗಂಡನೊಡನೆ ಸಹಗಮನ ಮಾಡಿದ ಹೆಂಗಸು ಮನುಷ್ಯನ ದೇಹದ ರೋಮಕೂಪಗಳಲ್ಲಿರುವ ಮೂರುವರೆ ಕೋಟಿ ಕೂದಲುಂಟಲ್ಲಾ ? ಅಷ್ಟು ನೂರುವರ್ಷಗಳವರಿಗೆ ಸ್ವರ್ಗಲೋಕದಲ್ಲಿ ಪ್ರಕಾಶಿಸುತ್ತಾಳೆ.

೪೯. ಗರುಡನು ಬಿಲ (ಹುತ್ತ)ದಲ್ಲಿರುವ ಹಾವನ್ನು ಹುತ್ತದೊಳಗೆ ನುಗ್ಗಿ ಹೇಗೆ ಎಳೆದುಕೊಂಡು ಮೇಲಕ್ಕೆ ಹಾರಿಹೋಗುವುದೋ ಆ ರೀತಿಯಾಗಿ ಪತಿವ್ರತಾ ಸ್ತ್ರೀಯಾದವಳು ತನ್ನ ಗಂಡನನ್ನು ಬಲಾತ್ಕಾರವಾಗಿ ಎಳೆದುಕೊಂಡು ಸ್ವರ್ಗಕ್ಕೆ ಹಾರಿ ಅಲ್ಲಿ ಬಹುವಿಧ ಭೋಗಗಳನ್ನನುಭವಿಸುತ್ತಾಳೆ.

೫೦. ಈ ಲೋಕದಲ್ಲಿ ಮಹತ್ತರವಾದ ಸಚ್ಚಾರಿತ್ರ್ಯದಿಂದ ವಿರಾಜಮಾನರಾಗಿದ್ದು ಪರಲೋಕದಲ್ಲಿರುವ ದೇವಜನರಿಗೆ ಸದ್ವೃತ್ತಗಳನ್ನು ಉಪದೇಶಮಾಡುವುದ

**ತಾಸಾಂ ಮೃತೇ ಜೀವಿತವಲ್ಲಭೇ ಹಿ**
**ನಾಗ್ನಿಪ್ರವೇಶಾದಪರೋ ಹಿ ಧರ್ಮಃ ॥ ೫೦ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಸ್ತ್ರೀಧರ್ಮೋನಾಮ ಚತುಸ್ತ್ರಿಂಶತ್ತಮೋಽಧ್ಯಾಯಃ**

---

ಕ್ಕಾಗಿ ಹೊರಟುಹೋದ ತಮ್ಮ ತಮ್ಮ ಹೆಂಡತಿಯರನ್ನು ಕಳೆದುಕೊಂಡ ಭೂಲೋಕದ ಜನರು ಅವರ ವಿಯೋಗದುಃಖದಿಂದ ಕೂಡಿ ಬದುಕಿರಲು ಸಾಧ್ಯವಿಲ್ಲದೆ ಹೋಗುವುದಾದರೆ ತಮ್ಮ ತಮ್ಮ ಹೆಂಡತಿಯರ ಜತೆಯಲ್ಲಿ ತಾವೂ ಸಹಗಮನಮಾಡಿ ಅಗ್ನಿಪ್ರವೇಶ ಮಾಡುವುದಕ್ಕಿಂತ ಬೇರೆ ಧರ್ಮವೇ ಇಲ್ಲ.

ಇಲ್ಲಿಗೆ ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಸ್ತ್ರೀಧರ್ಮವೆಂಬ ಹೆಸರಿನ ಮೂವತ್ತನಾಲ್ಕನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

## ಅಥ
## ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
### ಪಂಚತ್ರಿಂಶತ್ತಮೋಽಧ್ಯಾಯಃ

**ರಾಮ ಉವಾಚ**

**ಸ್ತ್ರೀಣಾಂ ಪೂಜ್ಯತಮಾ ಲೋಕೇ ದೇವತಾಸ್ತ್ವಂ ಪ್ರಕೀರ್ತಯ ।**
**ತಾಸಾಂ ಕಾಲಂ ವಿಧಾನಂ ಚ ಫಲಂ ಪೂಜನತಸ್ತಥಾ ॥ ೧ ॥**

**ಪುಷ್ಕರ ಉವಾಚ**

**ಶ್ರಿಯಃ ಸಂಪೂಜನಂ ಕಾರ್ಯಂ ಸ್ತ್ರೀಭಿಸ್ತು ಸತತಂ ಗೃಹೇ ।**
**ಪುಷ್ಪಾರ್ಘ್ಯಮಾಲ್ಯನೈವೇದ್ಯ ಧೂಪದೀಪಾನುಲೇಪನೈಃ ॥ ೨ ॥**

**ಗೃಹಸಮ್ಮಾರ್ಜನಂ ರಾಮ ತಥಾತಸ್ಯೋಪಲೇಪನಂ ।**
**ಪುಷ್ಪೋಪಹಾರಕರಣಂ ಸುಧಾಶುಕ್ಲತ್ವಮೇವ ಚ ॥ ೩ ॥**

---

### ಮೂವತ್ತೈದನೆಯ ಅಧ್ಯಾಯವು

೧. ಪರಶುರಾಮನು ಪ್ರಶ್ನೆಮಾಡುತ್ತಾನೆ.—ಈ ಪ್ರಪಂಚದಲ್ಲಿ ಸ್ತ್ರೀಯರು ಪೂಜೆಮಾಡಬೇಕಾದರೆ ಯಾವ ಯಾವ ದೇವತೆಯರನ್ನು ಪೂಜಿಸಬೇಕೆಂಬುದನ್ನೂ ಆರೀತಿ ಪೂಜೆಮಾಡುವುದರಿಂದಾಗುವ ಫಲವನ್ನೂ ಪೂಜಾಕಾಲವನ್ನೂ ಮತ್ತು ಆ ಪೂಜಾವಿಧಾನವನ್ನೂ ಸಹ ನನಗೋಸ್ಕರ ದಯಮಾಡಿ ತಿಳಿಸಯ್ಯಾ!

೨. ಪುಷ್ಕರನು ಅದಕ್ಕೆ ಉತ್ತರ ಹೇಳುತ್ತಾನೆ.—ಮುಖ್ಯವಾಗಿ ಹೆಂಗಸರು ಸರ್ವದಾ ಮನೆಯಲ್ಲಿ ಪುಷ್ಪಗಂಧಮಾಲ್ಯ ನೈವೇದ್ಯ ಧೂಪದೀಪ ನೀರಾಜನಾದಿಗಳಿಂದ ಲಕ್ಷ್ಮೀಪೂಜೆಯನ್ನು ಮಾಡುತ್ತಿರಬೇಕು.

೩. ಬೆಳಗ್ಗೆ ಎದ್ದೊಡನೆ ಮನೆಯ ಕಸವನ್ನು ಚೆನ್ನಾಗಿ ಗುಡಿಸಿ ಹೊರಕ್ಕೆ ಹಾಕಬೇಕು. ಆ ಬಳಿಕ ಚೆನ್ನಾಗಿ ಸಗಣಿಯಿಂದ ಸಾರಿಸಬೇಕು. ಮನೆಗೆ ಯಾವಾಗಲೂ ಸುಣ್ಣವನ್ನು ಬಳಿದು ಸ್ವಚ್ಛವಾಗಿ ಕಾಣುವಂತೆ ಮಾಡಿರಬೇಕು. ಹೊಸಿಲಿಗೆ ಅರಿಶಿನ ಕುಂಕುಮ ಪುಷ್ಪಮಂತ್ರಾಕ್ಷತೆಗಳನ್ನು ಪೂಜೆಮಾಡಬೇಕು.

**ಸರ್ವಮೇತದ್ವಿಜಾನೀಯಾಚ್ಛ್ರಿಯಃ ಸಂಪೂಜನಂ ದ್ವಿಜ ।**
**ಸ್ನಾನಾನುಲೇಪನಂ ಯಚ್ಚ ಗಂಧವರ್ಣಾವಧಾರಣಂ ॥ ೪ ॥**

**ಸುವರ್ಣತಾ ಚ ನಾರೀಣಾಂ ಶ್ರಿಯಃಸಂಪೂಜನಾದ್ಭವೇತ್ ।**
**ಅಷ್ಟಮೀಷು ಚ ಸರ್ವಾಸು ಪೂಜನೀಯಾಽಪ್ಯಶೋಕಿಕಾ ॥ ೫ ॥**

**ಗಂಧಮಾಲ್ಯನಮಸ್ಕಾರ ಧೂಪದೀಪಾದಿಭಿಸ್ತಥಾ ।**
**ತಸ್ಮಿನ್ನಹಸಿ ಯಾ ಭುಂಕ್ತೇ ನಕ್ತಂ ತೈಲವಿವರ್ಜಿತಂ ॥ ೬ ॥**

**ಭವತ್ಯಥ ವಿಶೋಕಾ ಸಾ ಯತ್ರ ಯತ್ರಾಭಿಜಾಯತೇ ।**
**ಅಷ್ಟಮೀಷು ಚ ಸರ್ವಾಸು ನ ಚೇಚ್ಛಕ್ನೋತಿ ಭಾರ್ಗವ ॥ ೭ ॥**

**ಪ್ರೋಷ್ಠಪದ್ಯಾಂ ವ್ಯತೀತಾಯಾಂ ಯಾಸ್ಯಾತ್ಕೃಷ್ಣಾಷ್ಟಮೀದ್ವಿಜ ।**
**ತಸ್ಯಾಮವಶ್ಯಂ ಕರ್ತವ್ಯಾ ದೇವ್ಯಾಃ ಪೂಜಾ ಯಥಾವಿಧಿ ॥ ೮ ॥**

---

೪. ಮೇಲೆ ವಿವರಿಸಿದ ಕೆಲಸಗಳಿಗೆಲ್ಲಾ ಲಕ್ಷ್ಮೀಪೂಜೆಯೆಂಬ ಹೆಸರು ಸಲ್ಲು ವುದು. ಈ ಪ್ರಕಾರವಾಗಿ ಯಾವ ಹೆಂಗಸರು ಲಕ್ಷ್ಮೀಪೂಜೆಯನ್ನು ಮಾಡುವರೋ, ಅವರು ಆ ಪೂಜಾಫಲವಾಗಿ ಒಳ್ಳೇ ಅಭ್ಯಂಗಸ್ನಾನ, ದಿವ್ಯಗಂಧ, ದಿವ್ಯಪುಷ್ಪಧಾರಣೆ, ಸುವರ್ಣಲಾಭವೇ ಮುಂತಾದ ಫಲಗಳನ್ನು ಹೊಂದುವರು. (ಐಶ್ವರ್ಯಶಾಲಿ ಗಳಾಗುವರೆಂದರ್ಥ.)

೫-೬. ಪ್ರತಿ ಪಕ್ಷದ ಅಷ್ಟಮೀ ದಿವಸದಲ್ಲೂ ಅಶೋಕಿಕಾ (ಲಕ್ಷ್ಮೀ)ನಾಮಕ ದೇವತೆಯನ್ನು ಗಂಧಮಾಲ್ಯ ನಮಸ್ಕಾರಧೂಪದೀಪಾದಿಗಳಿಂದ ಪೂಜೆಮಾಡಬೇಕು. ಪೂಜೆಯಾದ ಮೇಲೆ ಸಾಯಂಕಾಲದವರೆವಿಗೂ ಉಪವಾಸದಿಂದಿದ್ದು ರಾತ್ರಿ ತೈಲ ವರ್ಜಿತ (ಎಣ್ಣೆಸೋಕದ) ಭೋಜನವನ್ನು ಮಾಡಬೇಕು.

೭-೮. ಈ ರೀತಿಯಾದ ಕ್ರಮದಿಂದ ಯಾರು ಲಕ್ಷ್ಮೀಪೂಜೆಯನ್ನು ಮಾಡು ವರೋ ಅವರು ಸಕಲ ವಿಧವಾದ ದುಃಖಗಳನ್ನೂ ಕಳೆದುಕೊಂಡು ಸುಖವನ್ನನು ಭವಿಸುವರಲ್ಲದೆ ಜನ್ಮಜನ್ಮಾಂತರಗಳಲ್ಲಿಯೂ ಅವರು ಅನೇಕ ಭೋಗಭಾಗ್ಯಗಳನ್ನನು ಭವಿಸುತ್ತಾರೆ. ಒಂದು ವೇಳೆ ಪ್ರತಿಯೊಂದು ಅಷ್ಟಮಿಯ ದಿವಸವೂ ಪೂಜೆಮಾಡಲು ಸಾಧ್ಯವಾಗದೆ ಹೋದರೆ, ಭಾದ್ರಪದಮಾಸ ಕಳೆದುಹೋಗುವ ಸಮಯಕ್ಕೆ ಒದಗುವ ಬಹುಳ ಅಷ್ಟಮಿಯ ದಿವಸ (ಭಾದ್ರಪದ ಬಹುಳ ಅಷ್ಟಮೀ)ವಾದರೂ ಅವಶ್ಯವಾಗಿ ಲಕ್ಷ್ಮಿಯ ಪೂಜೆಯನ್ನು ಮಾಡಬೇಕು.

**ಅಪಾಮಿವ ತ್ರಿಲೋಕೇಷು ಪ್ರಕೃತಿಃ ಸ್ತ್ರೀಷು ಚೋಚ್ಯತೇ ।**
**ಯಾ ಪ್ರೇರಯತಿ ಕರ್ಮಾಣಿ ಲೋಕೇಷು ದ್ವಿಜಸತ್ತಮ　　॥ ೯ ॥**

**ತಸ್ಯಾಂ ಸಂಪೂಜನಂ ಕಾರ್ಯಂ ಶುಕ್ಲಾಂ ಪಂಚದಶೀಂ ತಥಾ ।**
**ಮಾಲ್ಯಾನುಲೇಪನೈಃ ಶುಕ್ಲೈರ್ಧೂಪೇನ ಚ ಸುಗಂಧಿನಾ　　॥ ೧೦ ॥**

**ನೈವೇದ್ಯೈಶ್ಚ ತಥಾ ಭಕ್ಷ್ಯೈರ್ಭೋಜ್ಯೈಶ್ಚೋಷ್ಯೈಸ್ತಥೈವ ಚ ।**
**ಪೂಜಯಿತ್ವಾ ಚ ತಾಂ ದೇವೀಂ ಭೋಕ್ತವ್ಯಂ ನಿಶಿ ಭಾರ್ಗವ　　॥ ೧೧ ॥**

**ರಕ್ತವಸ್ತ್ರಪ್ರದಾನೇನ ದೀಪದಾನೇನಚಾಪ್ಯಥ ।**
**ಯದಿಪಂಚದಶೀಂ ಸರ್ವಾಂ ನ ಶಕ್ನೋತಿ ಕದಾಚನ　　॥ ೧೨ ॥**

---

೯. ನೀರಿಗೆ ಹೇಗೆ ಅಶುಚಿಯನ್ನು ಶುದ್ಧಿಗೊಳಿಸುವ ಶಕ್ತಿಯಿದೆಯೋ ಅದೇ ಮೇರೆ ಹೆಂಗಸರಿಗೆ ಮೂರುಲೋಕವನ್ನೂ ಪವಿತ್ರಮಾಡುವ ಶಕ್ತಿಯಿದೆ. ಆ ವಿಧವಾದ ಶಕ್ತಿಗೆ ಪ್ರಕೃತಿಯೆಂದು ಹೆಸರು. ಆ ಪ್ರಕೃತಿ (ದೈವೀಶಕ್ತಿ)ಯ ಪ್ರೇರಣೆಯಿಂದಲೇ ಲೋಕದಲ್ಲಿ ಸಕಲರೂ ಕವನಗಳನ್ನು ಮಾಡುತ್ತಿರುವರು. (ಇಲ್ಲಿ ಗಾಯತ್ರಿ, ಸಾವಿತ್ರಿಯರನ್ನು ಧ್ಯಾನಮಾಡಬೇಕು. ಮತ್ತು ದೈವೀಹ್ಯೇಷಾಗುಣಮಯಿಾ ಎಂಬ ಗೀತಾಶ್ಲೋಕದ ಸಾರಾಂಶವನ್ನು ಮನನಮಾಡಬೇಕು. ಇದನ್ನು ಸಂದರ್ಭಾನುಸಾರ ವಿವರಿಸಲಾಗುವುದು.)

೧೦. ಇಂತಹ ಶಕ್ತಿ (ಲಕ್ಷ್ಮಿ)ಯ ಪೂಜೆಯನ್ನು ಪ್ರತಿಯೊಂದು ಪೂರ್ಣಿಮೆಯ ದಿವಸವೂ ಮಾಡಬೇಕು. ಗಂಧ, ಹೂವು, ಧೂಪದೀಪ ನೈವೇದ್ಯಗಳಿಂದ ಆ ತಾಯಿಯನ್ನು ತೃಪ್ತಿಪಡಿಸಬೇಕು.

೧೧. ರಕ್ತವಸ್ತ್ರಪ್ರದಾನದಿಂದಲೂ ದೀಪದಾನದಿಂದಲೂ ಭಕ್ಷ್ಯಭೋಜ್ಯ ಚೋಷ್ಯಪೇಯಗಳಿಂದಲೂ ತೃಪ್ತಿಯನ್ನುಂಟುಮಾಡಬೇಕು.

೧೨. ಈ ರೀತಿಯಾಗಿ ಲಕ್ಷ್ಮೀದೇವಿಯನ್ನು ಪ್ರತಿ ಪೂರ್ಣಿಮೆಯ ದಿವಸದಲ್ಲಿಯೂ ಪೂಜೆಮಾಡಿ ಹಗಲು ಉಪವಾಸವಾಗಿದ್ದು ರಾತ್ರಿ ಭೋಜನ ಮಾಡಬೇಕು. ಒಂದು ವೇಳೆ ಪ್ರತಿ ಪೂರ್ಣಿಮೆಯಲ್ಲಿಯೂ ಹೀಗೆ ಪೂಜೆಮಾಡಲು ಶಕ್ತಿ ಇಲ್ಲದೆ ಹೋದರೆ ಕಾರ್ತಿಕ ಶುದ್ಧ ಪೂರ್ಣಿಮೆಯ ದಿವಸವಾದರೂ ಮಾಡಬೇಕು.

**ದೇವ್ಯಾಃ ಸಂಪೂಜನಂ ಕಾರ್ಯಮವಶ್ಯಮಪಿ ಕಾರ್ತಿಕೇ ।**
**ಉಷಾರ್ತಿಂ ಪೂಜಯೇದ್ಯಾ ತು ಸಾತು ನಾರೀ ಪತಿವ್ರತಾ ॥ ೧೩ ॥**

**ಸದಾ ಧರ್ಮರತಾ ಸಾಧ್ವೀ ಲೋಕೇ ಭವತಿ ಭಾರ್ಗವ ।**
**ನಾ ಶುಭೇ ಚ ಮತಿಸ್ತಸ್ಯಾಃ ಕದಾಚಿದಪಿ ಜಾಯತೇ ॥ ೧೪ ॥**

**ಏಕಾದಶೀಂ ತಥಾ ಕೃಷ್ಣಾಂ ಫಾಲ್ಗುನೇಮಾಸಿ ಭಾರ್ಗವ ।**
**ಶುದ್ಧೇ ದೇವಸ್ಯ ಕರ್ತವ್ಯಾ ಪೂಜ್ಯಾ ಧರ್ಮಭೃತಾಂ ವರ ॥ ೧೫ ॥**

**ಪೂಜನಾಚ್ಛಂದೋದೇವಸ್ಯ ತನಯಂ ಗುಣವರ್ಜಿತಂ ।**
**ನ ಪ್ರಾಪ್ನೋತಿ ತಥಾಽಪ್ನೋತಿ ಗುಣವನ್ತಮಸಂಶಯಂ ॥ ೧೬ ॥**

---

೧೩-೧೪. ಕಾರ್ತಿಕ ಮಹಾಲಕ್ಷ್ಮಿಗೆ ಉಷಾರ್ತಿಯೆಂದು ಹೆಸರು. ಯಾರು ಈ ಮಹಾಲಕ್ಷ್ಮಿಯನ್ನು ಮಹಾಭಕ್ತಿಯಿಂದ ಪೂಜೆಗೈವರೋ ಅಂತಹ ಮಹಾ ಪತಿವ್ರತೆಯರು ಲೋಕದಲ್ಲಿ ಧರ್ಮನಿರತರಾಗಿ ಯಶಸ್ಸನ್ನು ಹೊಂದುತ್ತಾರೆ. ಮತ್ತು ಆಕೆಯ ಮನಸ್ಸು ಯಾವ ಕಾಲದಲ್ಲಿಯೂ ಅಶುಭ (ಅಮಂಗಳ ಅಥವಾ ಕುತ್ಸಿತ ಬುದ್ಧಿ)ವನ್ನು ಸ್ವಪ್ನೇಪಿ ಚಿಂತಿಸಲಾರರು.

೧೫. ಪ್ರತಿ ಫಾಲ್ಗುಣ ಬಹುಳ ಏಕಾದಶೀ ದಿವಸವೂ ಛಂದೋದೇವತೆಯೆಂಬ ಹೆಸರಿನ ದೇವತಾಪೂಜೆಯನ್ನು ತಪ್ಪದೆ ಮಾಡಬೇಕು. (ಇಲ್ಲಿ ಶುದ್ಧೇದೇವಸ್ಯ ಮತ್ತು ಛಂದೋದೇವಸ್ಯ ಎಂದು ಎರಡು ಪಾಠವಿದೆ. ಈ ಸಂದರ್ಭದಲ್ಲಿ ಛಂದೋ ದೇವಸ್ಯ ಎಂಬ ಪಾಠವೇ ಸಮಂಜವಾಗಿ ಹೊಂದುತ್ತದೆ. ಈ ರೀತಿ ಫಾಲ್ಗುಣ ಬಹುಳ ಏಕಾದಶೀ ದಿವಸ ಪೂಜೆಮಾಡಿದ ಬಳಿಕ ಚೈತ್ರ ಶುದ್ಧದಲ್ಲಿ ಬರುವ ಏಕಾದಶೀ ದಿವಸವೂ ಪೂಜೆಯನ್ನು ಬಿಡದೆ ಮಾಡಬೇಕು.

೧೬. ಛಂದೋದೇವತಾಪೂಜೆಯಿಂದಾಗುವ ಫಲವೇನೆಂದರೆ:—ಈ ಪೂಜೆ ಮಾಡಿದ ಹೆಂಗಸಿನ ಹೊಟ್ಟೆಯಲ್ಲಿ ಗುಣಹೀನನಾದ ಮಗನೆಂದಿಗೂ ಹುಟ್ಟುವುದಿಲ್ಲ. ಅಂತಹ ಪವಿತ್ರಸ್ತ್ರೀಯ ಹೊಟ್ಟೆಯಲ್ಲಿ ನಿಶ್ಚಯವಾಗಿಯೂ ಸಕಲ ಸದ್ಗುಣಭರಿತನಾದ ಮಗನೇ ಹುಟ್ಟುವನು.

**ಗಂಧಮಾಲ್ಯಾದಿಭಿರ್ಭಕ್ತ್ಯಾ ತಥಾ ವೈ ವಾಸ್ತುದೇವತಾಂ ।**
**ಏಕಾದಶೀಂ ತಥಾ ಪ್ರಾಪ್ಯ ಚೈತ್ರಶುಕ್ಲಸ್ಯ ಪೂಜಯೇತ್ ॥ ೧೭ ॥**

**ಸಂಪೂಜ್ಯ ತಾಂ ಮಹಾಭಾಗ ಗೃಹಭಂಗೋ ನ ಜಾಯತೇ ।**
**ಶುಕ್ಲಾಷ್ಟಮೀಂ ತು ಸಂಪ್ರಾಪ್ಯ ಮಾಸಿ ಭಾದ್ರಪದೇ ತಥಾ ॥ ೧೮ ॥**

**ದೂರ್ವಾಪ್ರತಾನಂ ಲುಪ್ಯೇತ್ತದುತ್ತರಾಶಾಭಿಗಾಮಿನಂ ।**
**ಪೂಜಯೇದ್ಗೃಹಮಾನೀಯ ಗಂಧಮಾಲ್ಯಾನುಲೇಪನೈಃ ॥ ೧೯ ॥**

**ಫಲಮೂಲೈಸ್ತಥಾ ರಾಮ ಧೂಪದೀಪೌ ವಿವರ್ಜಯೇತ್ ।**
**ಅಗ್ನಿಪಕ್ವಂ ತಥಾಸರ್ವಂ ನ ನಿವೇದ್ಯಂ ಕಥಂಚನ ॥ ೨೦ ॥**

---

೧೭. ಮತ್ತು ಚೈತ್ರ ಶುದ್ಧ ಏಕಾದಶೀ ದಿವಸ ವಾಸ್ತುದೇವತೆಯನ್ನು ಗಂಧ ಪುಷ್ಪಧೂಪದೀಪನೈವೇದ್ಯಾದಿಗಳಿಂದ ಭಕ್ತಿಭರಿತರಾಗಿ ಪೂಜೆಮಾಡಬೇಕು.

೧೮. ಹೀಗೆ ವಾಸ್ತುದೇವತಾ ಪೂಜೆ ಮಾಡಿದವರಿಗೆ ಗೃಹಭಂಗವುಂಟಾಗುವುದಿಲ್ಲ. (ಅಂದರೆ ಬಾಡಿಗೆ ಮನೆಯಲ್ಲಿರಬೇಕಾದ ಕಷ್ಟವು ತಪ್ಪಿ, ಸ್ವಂತ ಮನೆಯೇ ಲಭ್ಯವಾಗುವುದೆಂದು ಇಲ್ಲಿ ಭಾವಾರ್ಥ.)

೧೯. ಗೃಹಪ್ರಾಪ್ತಿಯ ವಿಷಯದಲ್ಲಿ ಇನ್ನೊಂದು ವಿಶೇಷವನ್ನಿಲ್ಲಿ ಹೇಳುವೆನು : ಸ್ವಂತ ಮನೆ ಮಾಡಬೇಕಾದವನು ಉತ್ತರ ದಿಕ್ಕಿನಲ್ಲಿ ಒಂದು ಮನೆಯನ್ನು ಗೊತ್ತು ಮಾಡಿಕೊಂಡು ಮೊದಲು ಭಾದ್ರಪದ ಶುದ್ಧ ಅಷ್ಟಮಿಯ ದಿವಸ ಅಲ್ಲಿ ವಾಸ್ತುಪುರುಷನನ್ನು ಪೂಜೆಮಾಡಿ ಅಲ್ಲಿ ಹುಲ್ಲನ್ನು (ಎಳೆಗರಿಕೆಯನ್ನು) ಬೆಳೆಯಬೇಕು. ಗಂಧ ಮಾಲ್ಯಾನುಲೇಪನಗಳಿಂದ ಮನೆಗೆ ಹೋದೊಡನೆ ಮತ್ತೊಂದು ವೇಳೆ ವಾಸ್ತು (ಗೃಹದೇವತಾ) ಪೂಜೆಯನ್ನು ಮಾಡಬೇಕು.

೨೦. ಆ ರೀತಿ ಪೂಜೆಮಾಡುವಾಗ ಫಲಮೂಲಗಳನ್ನು (ಹಣ್ಣು, ಕಾಯಿ, ಗೆಡ್ಡೆ, ಗೆಣಸು) ಮಾತ್ರವೇ ನಿವೇದನ ಮಾಡಬೇಕು. ಧೂಪದೀಪಗಳನ್ನೂ ಅಗ್ನಿ ಪಕ್ವವಾದ ನೈವೇದ್ಯವನ್ನೂ ಸಹ ವರ್ಜಿಸಬೇಕು.

ಭೋಕ್ತವ್ಯಂ ಚ ತಥಾ ರಾಮ ವಹ್ನಿಪಾಕ ವಿವರ್ಜಿತಂ ।
ದೂರ್ವಾಂಕುರಸ್ಥಾಂ ಸಂಪೂಜ್ಯ ವಿಧಿನಾ ಯೌವನಶ್ರಿಯಂ ॥ ೨೧ ॥

ಯೌವನಂ ಸ್ಥಿರಮಾಪ್ನೋತಿ ಯತ್ರಯತ್ರಾಭಿಜಾಯತೇ ।
ಸೋಽಪವಾಸಾ ತು ಯಾ ನಾರೀ ಕೃಷ್ಣಪಕ್ಷಸ್ಯ ಕಾರ್ತಿಕೇ ॥ ೨೨ ॥

ದ್ವಾದಶ್ಯಾಂ ಪೂಜಯೇದ್ವಿಷ್ಣುಂ ಗಾಂ ಸವತ್ಸಾಮನಂತರಂ ।
ಗಂಧಮಾಲ್ಯನಮಸ್ಕಾರ ಧೂಪದೀಪಾನ್ನಸಂಪದಾ ॥ ೨೩ ॥

ನೈವೇದ್ಯಂ ಗೋರಸಂ ಸರ್ವಂ ವರ್ಜನೀಯಂ ಪ್ರಯತ್ನತಃ ।
ಭೋಕ್ತವ್ಯಂ ಚ ನ ಧರ್ಮಜ್ಞ ದೋಗ್ಧವ್ಯಾ ನೈವ ಚಾರ್ಜುನೇ ॥ ೨೪ ॥

---

೨೧. ಮತ್ತು ಆ ಮನೆಗೆ ಹೋದೊಡನೆಯೇ ಅಗ್ನಿಯಲ್ಲಿ ಪಕ್ವವಾದ ಪದಾರ್ಥಗಳನ್ನು ಭುಂಜಿಸಬಾರದು. ಹಸೀ ಪದಾರ್ಥ (ಹಣ್ಣು ಹಂಪಲು) ಗಳನ್ನೇ ತಿಂದುಕೊಂಡಿರಬೇಕು. ಆ ಮನೆಯಲ್ಲಿ ಮಹಾಲಕ್ಷ್ಮಿಯು ದೂರ್ವಾಂಕುರ (ಎಳೆ ಗರಿಕೆ) ಗಳ ಮಧ್ಯದಲ್ಲಿ ಪೂರ್ಣಯೌವನದಿಂದ ವಾಸಮಾಡುತ್ತಿರುವಳಾದುದರಿಂದ ಆ ಎಳೆಗರಿಕೆಯ ಮಧ್ಯದೋಳ್ ವಿರಾಜಮಾನಳಾದ ಯೌವನ ಶ್ರೀಯನ್ನು ಪುರುಷ ಸೂಕ್ತ ವಿಧಾನದಿಂದ ಪೂಜೆಮಾಡಬೇಕಯ್ಯಾ ! ಪರಶುರಾಮ !

೨೨. ಈ ರೀತಿ ಯಾರು ಲಕ್ಷ್ಮಿಯನ್ನು ಪೂಜೆಮಾಡುವರೋ ಅವರು ಎಷ್ಟೇ ಮುದುಕರಾದಾಗ್ಯೂ ಅವರಲ್ಲಿ ಯೌವನ (ಪ್ರಾಯದ) ಶಕ್ತಿಯು ಸ್ಥಿರವಾಗಿ ನಿಂತಿರುತ್ತದೆ. ಮತ್ತು ಅವರು ಯಾವ ಯಾವ ಜನ್ಮಗಳಲ್ಲಿ ಹುಟ್ಟಿದಾಗ್ಯೂ ಯೌವನಸ್ಥರಾಗಿಯೇ ಇರುತ್ತಾರೆ.

೨೩. ಅದಾವ ನಾರಿಯು ಕಾರ್ತಿಕ ಬಹುಳ ಏಕಾದಶೀ ದಿವಸ (ಗಂಡನ ಆಜ್ಞೆ ಪಡೆದು) ಉಪವಾಸಮಾಡಿ, ಮಾರನೇ ದ್ವಾದಶೀ ದಿವಸ ಮಹಾವಿಷ್ಣುವನ್ನು ಪೂಜಿಸಿ ಆ ಬಳಿಕ ಕರುವಿನಿಂದ ಸಹಿತವಾದ ಹಸುವನ್ನು ಗಂಧ ಮಾಲ್ಯ ನಮಸ್ಕಾರ ಧೂಪದೀಪಾನ್ನ ಸಂಪತ್ತುಗಳಿಂದ ಭಕ್ತ್ಯೈಕಂಠಿತಳಾಗಿ ಪೂಜೆಮಾಡುವಳೋ,

೨೪. ಮತ್ತು ನೈವೇದ್ಯಕ್ಕೆ ಸಕಲ ವಿಧವಾದ ಗೋರಸವನ್ನೂ ಬಿಟ್ಟು ಉಳಿದ ನೈವೇದ್ಯಗಳನ್ನು ಮಾಡಿ ಆ ನಿವೇದಿತ ಭಕ್ಷ್ಯಾದಿಗಳನ್ನು ತಾನೂ ಭುಂಜಿಸುವಳೋ,

**ಗಾವಃ ಪ್ರಾಪ್ನೋತಿ ಕೃತ್ವೈವಂ ನಾತ್ರ ಕಾರ್ಯಾ ವಿಚಾರಣಾ ।**
**ಧೇನುಂ ತಾಂ ಯದಿ ವಿಪ್ರಾಯ ಪ್ರದದಾತಿ ಯಥಾವಿಧಿ ॥ ೨೫ ॥**

**ಸ್ವರ್ಗಲೋಕಮಥಾಸಾದ್ಯ ನ ತತೋ ವಿನಿವರ್ತತೇ ।**
**ಕಾರ್ತಿಕೇ ಚ ತಥಾ ಮಾಸಿ ಕೃತ್ತಿಕಾಯಾಂ ಚ ಪೂಜನಂ ॥ ೨೬ ॥**

**ಕರ್ತವ್ಯಂ ಗಂಧಕಲಶೈ ರ್ಗಂಧಮಾಲ್ಯಾನುಲೇಪನೈಃ ।**
**ಭಕ್ಷ್ಯೈಶ್ಚ ಪರಮಾನ್ನೈಶ್ಚ ಕುಲ್ಮಾಷೈಃ ಪರ್ಪಟೈಸ್ತಥಾ ॥ ೨೭ ॥**

**ಶಕ್ತ್ಯಾ ವಸ್ತ್ರೈಶ್ಚ ಧರ್ಮಜ್ಞ ಮಹಾರಂಜನರಂಜನೈಃ ।**
**ಗುಡೇನ ಮಧುನಾ ಚೈವ ಸಿತಯಾ ಲವಣೇನ ಚ ॥ ೨೮ ॥**

**ಆರ್ದ್ರ ಕೋಣೇಕ್ಷುಣಾ ಚೈವ ತಥಾ ಕಾಲೋದ್ಭವೈಃ ಫಲೈಃ ।**
**ಸರ್ವೈಶ್ಚ ವಿವಿಧೈರನ್ನೈ ರ್ಗಂಧೈರ್ನಾನಾವಿಧೈಸ್ತಥಾ ॥ ೨೯ ॥**

---

೨೫. ಅಂತಹ ಆ ಭಕ್ತಳು ಅನೇಕ ಗೋಧನ (ಹಸು) ಗಳನ್ನು ಪಡೆದು ಸುಖವಾಗಿರುತ್ತಾಳೆ. ಈ ವಿಷಯದಲ್ಲಿ ಯಾರೂ ಸಂದೇಹ ಪಡಬೇಕಾಗಿಲ್ಲ. ಮತ್ತು ಆ ರೀತಿ ಪೂಜೆ ಮಾಡಿದ ಹಸುವನ್ನು ಯಥಾ ವಿಧಿಯಾಗಿ ಪೂಜಿಸಿ ಯೋಗ್ಯ ಬ್ರಾಹ್ಮಣನಿಗೆ ದಾನಮಾಡುವುದಾದರೆ ಸ್ವರ್ಗಲೋಕದಲ್ಲಿ ಸ್ಥಿರವಾಗಿ ವಾಸಮಾಡುತ್ತಾ ಇರುತ್ತಾಳೆಯೇ ಹೊರತು ಅಲ್ಲಿಂದ ಈ ಲೋಕಕ್ಕೆ ಹಿಂತಿರುಗುವುದಿಲ್ಲ.

೨೬-೨೭. ಕಾರ್ತಿಕ ಮಾಸದಲ್ಲಿ ಕೃತ್ತಿಕಾ ನಕ್ಷತ್ರ ಯೋಗವಿದ್ದ ಸಮಯ ದಲ್ಲಿ ಪೂಜೆಮಾಡುವುದು ಬಹು ವಿಶೇಷವಾದುದು. ಆದಿನ ಯಾರು ಮಹಾಲಕ್ಷ್ಮಿ (ಕೃತ್ತಿಕಾದೇವಿ) ಯನ್ನು ಕಲಶದಲ್ಲಾವಾಹನೆ ಮಾಡಿ ಗಂಧ ಪುಷ್ಪ ಧೂಪದೀಪ ನೈವೇದ್ಯ ತಾಂಬೂಲಗಳಿಂದಲೂ, ನಾನಾವಿಧ ಭಕ್ಷ್ಯಗಳಿಂದಲೂ, ಪರಮಾನ್ನ ಮತ್ತು ಹಲಸಂದೆ ಹಪ್ಪಳಗಳಿಂದಲೂ ತೃಪ್ತಿಪಡಿಸುವರೋ,

೨೮-೨೯. ಮತ್ತು ವಸ್ತ್ರ ಸಮರ್ಪಣೆ, ನೀರಾಜನ, ಬೆಲ್ಲ, ಜೇನುತುಪ್ಪ, ಬಿಳೀ ಉಪ್ಪುಗಳನ್ನೂ, ಕಬ್ಬಿನಹಾಲು, ಆ ಕಾಲದಲ್ಲಿ ಸಿಕ್ಕುವ ಹಣ್ಣು ಹಂಪಲುಗಳು, ನಾನಾ ವಿಧ ಗಂಧಗಳು, ನಾನಾ ವಿಧ ರತ್ನಗಳನ್ನೂ ಸಹ ಸಮರ್ಪಿಸುವರೋ,

ಪಾನಕೈಶ್ಚ ತಥಾ ಹೃದ್ಯೈಃ ಪೂಜನೀಯಾಶ್ಚ ಕೃತ್ತಿಕಾಃ ।
ಸಹ ಚಂದ್ರಮಸಾ ರಾಮ ತೇನ ಸೌಭಾಗ್ಯಮಶ್ನುತೇ ॥ ೩೦ ॥

ನಾರೀ ಚ ರೂಪಲಾವಣ್ಯೇ ಧರ್ಮೇ ಚಾಗ್ರ್ಯಾಂ ತಥಾ ಮತಿಂ ।
ಅವೈಧವ್ಯಂ ಚ ಧರ್ಮಜ್ಞ ಯತ್ರ ಯತ್ರಾಭಿಜಾಯತೇ ॥ ೩೧ ॥

ಲವಣಸ್ಯ ತುಲಾಂ ಕೃತ್ವಾ ಮಹಾರಂಜನರಂಜಿತೇ ।
ವಸ್ತ್ರೇ ವಸ್ತ್ರೇಣ ತೇನಾಥ ಸಾಲಂಕಾರಾಂ ಸಿತಚ್ಛವಿಂ ॥ ೩೨ ॥

ಕೃತ್ವಾ ಪಿಂಡಂ ಹರಿದ್ರಾಕ್ತಂ ಕೃತ್ತಿಕಾನಾಂ ನಿವೇದಯೇತ್ ।
ಗ್ರಾಹಯೇದ್ಬ್ರಾಹ್ಮಣಂ ತಾಂ ಚ ಪ್ರಾಪ್ತೇ ಚಂದ್ರೋದಯೇ ತಥಾ ॥ ೩೩ ॥

---

೩೦-೩೧. ಮತ್ತು ಸೊಗಸಾದ ಬಲು ರುಚಿಕರವಾದ ಸಿಹಿ ಪಾನಕಗಳನ್ನೂ, ಇಂತಹ ಅನೇಕ ತರಹವಾದ ಪದಾರ್ಥಗಳನ್ನೂ ಕೃತ್ತಿಕಾದೇವಿಯರಿಗೆ ಯಾರು ಸಮರ್ಪಿಸುವರೋ ಅಂತಹವರು ಚಂದ್ರಲೋಕದಲ್ಲಿ ವಾಸಮಾಡುತ್ತಾ ಸಕಲ ಸೌಭಾಗ್ಯ ಪರಂಪರೆಗಳನ್ನೂ ಅನುಭವಿಸುತ್ತಾರೆ. ಮತ್ತು ಈ ರೀತಿ ಕೃತ್ತಿಕಾ ದೇವತಾ ಪೂಜೆಯನ್ನು ಮಾಡಿದ ಹೆಂಗಸು ಮುಂದಿನ ಜನ್ಮದಲ್ಲಿ ಹುಟ್ಟಿದಾಗ ಸೊಗಸಾದ ರೂಪ ಲಾವಣ್ಯ ಸಂಪತ್ತಿನಿಂದ ಜನ್ಮಗ್ರಹಣ ಮಾಡುವಳಲ್ಲದೆ, ಮಹಾ ಶ್ರೇಷ್ಠವಾದ ಧರ್ಮ ಬುದ್ಧಿಯಿಂದ ಪ್ರಕಾಶಿಸುತ್ತಿರುತ್ತಾಳೆ. ಅವಳು ಈ ಜನ್ಮದಲ್ಲಿಯಾಗಲೀ, ಮುಂದೆ ಮುಂದೆ ಯಾವ ಯಾವ ಜನ್ಮದಲ್ಲೇ ಹುಟ್ಟಲಿ ಅವಳಿಗೆ ವೈಧವ್ಯದ ಭಯವೆಂಬುದು ಇಲ್ಲವೇ ಇಲ್ಲ.

೩೨. ದೊಡ್ಡದಾಗಿರುವ ಕಲಾಬತ್ತು ಬಟ್ಟೆಯ ಮೇಲೆ ತನ್ನ ತೂಕದಷ್ಟು ಉಪ್ಪನ್ನು ಸುರಿದು, ಆ ಬಟ್ಟೆಯ ಮೇಲೆ ಮತ್ತೊಂದು ಬಟ್ಟೆಯನ್ನು ಮುಚ್ಚಿ, ಅದರ ಮೇಲೆ ಬೆಳ್ಳಗೆ ಪ್ರಕಾಶಿಸುತಲಿರುವ ಸಾಲಂಕೃತವಾದ ಒಂದು ಪ್ರತಿಮೆಯನ್ನು ಸ್ಥಾಪಿಸಬೇಕು.

೩೩. ಅಲ್ಲಿ ಒಂದು ಅರಿಶಿನದುಂಡೆಯನ್ನು ಮಾಡಿ ಇಟ್ಟು ಅಲ್ಲಿ ಕೃತ್ತಿಕಾ ದೇವಿಯನ್ನಾವಾಹಿಸಿ ಪೂಜಿಸಬೇಕು. ಆ ದಿವಸ ಚಂದ್ರೋದಯವಾದ ಸಮಯದಲ್ಲಿ ಒಬ್ಬ ಬ್ರಾಹ್ಮಣನನ್ನು ಕರೆದುಕೊಂಡು ಬಂದು ಆ ವಸ್ತ್ರಪ್ರತಿಮಾದಿಗಳನ್ನೆಲ್ಲಾ ಆ ಬ್ರಾಹ್ಮಣನಿಗೆ ದಾನಮಾಡಿಬಿಡಬೇಕು.

ಅನೇನ ಕರ್ಮಣಾ ನಾರೀ ಸೌಭಾಗ್ಯಂ ಮಹದಶ್ನುತೇ ।
ಕೃತ್ತಿಕಾ ಪ್ರತಿಪಾದೇ ತು ತಾಸಾಂ ಕೃತ್ವೈವ ಪೂಜನಂ ॥ ೩೪ ॥

ಯಾ ಭುಂಕ್ತೇ ಗೋರಸಪ್ರಾಯಂ ಕೃತ್ವಾ ಬ್ರಾಹ್ಮಣಪೂಜನಂ ।
ಸಪ್ತ ಜನ್ಮಾಂತರಾಣ್ಯೇವ ಸೌಭಾಗ್ಯಂ ರೂಪಮೇವ ಚ ॥ ೩೫ ॥

ಸ್ವರ್ಗೇ ತು ಭೋಗಾನಾಪ್ನೋತಿ ಸಹ ಭರ್ತ್ರಾ ತು ಸಾ ಶುಭಾ ॥ ೩೬ ॥

ಪ್ರಾಪ್ಯ ಪಂಚದಶೀಂ ರಾಮ ತಥಾ ಶುಕ್ಲಾಂಚ ಕಾರ್ತಿಕೀಂ ।
ಕಾರ್ತಿಕಂ ಕಾರ್ತಿಕೀಂ ರಾಮ ಗೃಹಭಿತ್ತೌ ಸಮಾಲಿಖೇತ್ ॥ ೩೭ ॥

ಉಪದ್ವಾರಂ ಗೃಹಾದ್ಬಾಹ್ಯಂ ನಾನಾ ವರ್ಣೈಸ್ತು ವರ್ಣಕೈಃ ।
ಗೃಹೋಪಕರಣಂ ಶಕ್ತ್ಯಾ ತಯೋಶ್ಚೈವಾಭಿತೋ ಲಿಖೇತ್ ॥ ೩೮ ॥

---

೩೪. ಈ ವಿಧವಾದ ಕರ್ಮವನ್ನಾವ ಹೆಂಗಸು ಮಾಡುವಳೋ ಅವಳು ಮಹತ್ತರವಾದ ಸೌಭಾಗ್ಯವನ್ನು ಹೊಂದುತ್ತಾಳೆ. ಈ ಪೂಜೆಯನ್ನೂ ದಾನವನ್ನೂ ಗಂಡನಾದವನೂ ಸಹ ಮಾಡುವುದಾದರೆ ಅವನೂ ಸೌಭಾಗ್ಯಶಾಲಿಯಾಗಿ ಬಾಳುತ್ತಾನೆ.

೩೫. ಕಾರ್ತಿಕ ಶುದ್ಧ ಪ್ರತಿಪತ್ತಿನ ದಿವಸ ಕೃತ್ತಿಕಾದೇವಿಯನ್ನು ಪೂಜೆಮಾಡಿ ಯಾವ ಹೆಂಗಸು ಬ್ರಾಹ್ಮಣರನ್ನು ಉಪಚರಿಸಿ ಮಜ್ಜಿಗೆಯನ್ನು ಮಾತ್ರ ಕುಡಿದು ಕೊಂಡಿರುವಳೋ, ಅವಳು ಏಳು ಜನ್ಮದವರಿಗೆ ಮಹತ್ತರವಾದ ಸೌಭಾಗ್ಯವನ್ನೂ ಒಳ್ಳೇ ಸೌಂದರ್ಯವನ್ನೂ ಸಹ ಹೊಂದುತ್ತಾಳೆ.

೩೬. ಮತ್ತು ಅಂತಹ ಪುಣ್ಯಶಾಲಿನಿಯಾದ ಹೆಂಗಸು ತನ್ನ ಗಂಡನೊಡನೆ ಸ್ವರ್ಗಲೋಕದಲ್ಲಿ ನಾನಾ ವಿಧವಾದ ಭೋಗಭಾಗ್ಯಗಳನ್ನನುಭವಿಸುವಳು.

೩೭. ಕಾರ್ತಿಕ ಶುದ್ಧ ಪೂರ್ಣಿಮೆಯು ದಿವಸವು ಒದಗಿದಾಗ ತಮ್ಮ ತಮ್ಮ ಮನೆಗಳ ಗೋಡೆಗಳ ಮೇಲೆಲ್ಲಾ ಕೃತ್ತಿಕಾ ದೇವತೆಯ ಚಿತ್ರವನ್ನು ಬರೆಯಬೇಕು.

೩೮. ಮತ್ತು ಮನೆಯ ಹೆಬ್ಬಾಗಿಲುಗಳ ಮೇಲೂ ಚಿಕ್ಕ ಚಿಕ್ಕ ಮನೆಯ ಬಾಗಿಲುಗಳ ಮೇಲೂ ಪ್ರತಿಕೃತಿಯನ್ನು ಬರೆಸಬೇಕಲ್ಲದೆ ಮನೆಯ ಹೊರಗೆ ಬಾಗಿಲುಗಳ ಮುಂದೆಲ್ಲಾ ನಾನಾವಿಧ ಬಣ್ಣದ ರಂಗವಲ್ಲಿಗಳಿಂದ ಪದ್ಮಚಿತ್ರವೇ ಮುಂತಾದ ನಾನಾ ಚಿತ್ರಗಳನ್ನೂ ಬರೆಯಬೇಕು. ಮನೆಯ ಒಳಗೆ ಎಲ್ಲಾ ಕಡೆಗಳಲ್ಲಿಯೂ ರಂಗವಲ್ಲಿಯಲ್ಲಿ ಚಿತ್ರಗಳನ್ನು ಬರೆಯಬೇಕು.

**ಪೀಠಖಡ್ಗಾಸನಾದ್ಯತ್ರ ಶಕಟೋಲೂಖಲಾದಿಕಂ ।**
**ತತಸ್ತೌ ಪೂಜಯೇನ್ನಾರೀ ನಾನಾಭಕ್ತಿಪರಾ ಶುಚಿಃ ॥ ೩೯ ॥**

**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।**
**ಇಕ್ಷುಣೇಕ್ಷುವಿಕಾರೈರ್ವಾ ವಿಶೇಷೇಣ ಚ ಪೂಜಯೇತ್ ॥ ೪೦ ॥**

**ತಯೋಸ್ತು ಪೂಜನಂ ಕೃತ್ವಾ ಮತ್ಸ್ಯಂ ಚ ಸಿಕತಾಯುತಂ ।**
**ಶುಕ್ತಿನೇತ್ರಂ ನ್ಯಸೇತ್ ಕ್ಷೀರೇ ತಚ್ಚ ದದ್ಯಾದ್ದ್ವಿಜಾತಯೇ ॥ ೪೧ ॥**

**ತತಶ್ಚ ನಕ್ತಂ ಭುಂಜೀತ ತಿಲತೈಲವಿವರ್ಜಿತಂ ।**
**ಅನಯೋಃ ಪೂಜನಾದ್ರಾಮ ಗೃಹಭಂಗಂ ನ ಚಾಪ್ನುಯಾತ್ ॥ ೪೨ ॥**

---

೩೯. ಮತ್ತು ಕಾರ್ತಿಕಮಾಸದ ಪೂರ್ಣಿಮೆಯ ದಿವಸ ಸಕಲ ಗೃಹೋಪಕರಣಗಳನ್ನೂ, ಮಣೆ, ಈಳಿಗೆಮಣೆ, ಒರಳು, ಬಂಡಿ ಮುಂತಾದುವುಗಳನ್ನೆಲ್ಲಾ ಶುಚಿಯಾಗಿ ಇಟ್ಟು ಅವುಗಳನ್ನೆಲ್ಲಾ ಭಕ್ತಿಯಿಂದ ಪೂಜಿಸಬೇಕು.

೪೦. ಇವುಗಳನ್ನೆಲ್ಲಾ ಪೂಜೆಮಾಡಿದ ಬಳಿಕ ಗಂಧಪುಷ್ಪ ನಮಸ್ಕಾರ ಧೂಪ ದೀಪಾನ್ನ-ಸಂಪತ್ತುಗಳಿಂದಲೂ, ಕಬ್ಬು-ಸಕ್ಕರೆಗಳಿಂದಲೂ ನಿವೇದನಮಾಡಬೇಕು.

೪೧. ಈರೀತಿ ಪೂಜೆಮಾಡಿದ ಬಳಿಕ ಮರಳಿನಲ್ಲಿ ಒಂದು ಮೀನಿನ ಆಕಾರವನ್ನು ಮಾಡಿ ಅದನ್ನು ಹಾಲಿನಲ್ಲಿ ಕಪ್ಪೆಚಿಪ್ಪಿನ ಕಣ್ಣನ್ನು ಹಾಕಿ ಅದನ್ನು ಸಹ ಪೂಜಿಸಿ ಬ್ರಾಹ್ಮಣನಿಗೆ ಕೊಡಬೇಕು.

೪೨. ಆ ದಿವಸ ರಾತ್ರಿ ಎಣ್ಣೆ ಪದಾರ್ಥಗಳನ್ನು ಊಟದಲ್ಲಿ ಉಪಯೋಗಿಸಕೂಡದು. ಹಗಲು ಉಪವಾಸವಿದ್ದು ರಾತ್ರಿಯೇ ಊಟಮಾಡಬೇಕು. ಈ ರೀತಿ ನಡೆದುಕೊಂಡರೆ ಗೃಹಭಂಗವುಂಟಾಗುವುದಿಲ್ಲ. (ಅಂದರೆ ಈ ಪೂಜೆ ಮಾಡಿದವರಿಗೆ ಮನೆಯು ವಿಚ್ಛಿತ್ತಿಯಾಗುವುದಿಲ್ಲ. ಗೃಹವೆಂದರೆ ಹೆಂಡತಿಗೂ ಮನೆಗೂ ಹೆಸರಾಗುವುದು.)

ಪತಿವ್ರತಾ ಮಹಾಭಾಗ ದೀರ್ಘಮಾಪ್ನೋತಿ ಜೀವಿತಂ ।
ಕಾರ್ತಿಕೇ ಚ ತಥಾ ಮಾಸಿ ಸಾರ್ಧಂ ಚಂದ್ರಮಸಾ ಸದಾ ॥ ೪೩ ॥

ರೋಹಿಣ್ಯಾಂ ರೋಹಿಣೀಪೂಜಾ ಕರ್ತವ್ಯಾ ವಿಧಿನಾ ದ್ವಿಜ ।
ಸರ್ವೈರವಿಧವಾಚಿಹ್ನೈರ್ಲವಣೇನ ಚ ಭೂರಿಣಾ ॥ ೪೪ ॥

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ತಥಾ ಕುಂಕುಮರಕ್ತೇನ ಶಕ್ತ್ಯಾ ಭಾರ್ಗವ ವಾಸಸಾ ॥ ೪೫ ॥

ಸೌಭಾಗ್ಯಂ ಪರಮಾಪ್ನೋತಿ ಕೃತ್ವೈತತ್ಪರಮಾಂಗನಾ ।
ಶುಕ್ಲಪಕ್ಷತ್ರಯೋದಶ್ಯಾಂ ಯಾ ಚ ನಾರೀ ಪತಿವ್ರತಾ ॥ ೪೬ ॥

---

೪೩. ಈ ರೀತಿ ಪೂಜೆಮಾಡಿದ ಹೆಂಗಸು ಮಹಾಪತಿವ್ರತೆಯಾಗಿ ದೀರ್ಘ ಕಾಲದವರೆಗೆ ಬದುಕಿರುತ್ತಾಳೆ. ಮತ್ತೊಂದು ವ್ರತವನ್ನು ಹೇಳುತ್ತೇನೆ; ಕೇಳು. ಕಾರ್ತಿಕಮಾಸದಲ್ಲಿ ರೋಹಿಣೀ ನಕ್ಷತ್ರಯೋಗವುಂಟಾದ ದಿವಸವನ್ನು ನೋಡಿ ಆ ದಿವಸ ಯಾರು ರೋಹಿಣಿಯೊಡನೆ ಕೂಡಿದ ಚಂದ್ರನನ್ನು ವಿಧಿ ಪ್ರಕಾರವಾಗಿ ಪೂಜಿಸುವರೋ ಅವರಿಗೆ ಉಂಟಾಗುವ ಫಲವನ್ನು ಹೇಳುವೆನು, ಕೇಳು.

೪೪-೪೫. ಮೊದಲು ಸಕಲ ಮಂಗಳದ್ರವ್ಯಗಳಿಂದಲೂ ರೋಹಿಣಿಯನ್ನು ಪೂಜೆಮಾಡಬೇಕು. ಉಪ್ಪಿನ ರಾಶಿಯ ಮೇಲೆ ಈ ಪೂಜೆಮಾಡಿ ಗಂಧ ಮಾಲ್ಯ ನಮಸ್ಕಾರ ಧೂಪ ದೀಪಾದ್ಯುಪಚಾರಗಳನ್ನೂ ಕುಂಕುಮಾರ್ಚನೆಯನ್ನೂ ಮಾಡಿ ಒಂದು ಸೀರೆಯನ್ನೂ ಕುಪ್ಪುಸವನ್ನೂ ಸಮರ್ಪಿಸಬೇಕು. ಈ ಕ್ರಮದಿಂದ ಪೂಜೆ ಮಾಡಿದರೆ ಅಂತಹ ಮಹಾಪತಿವ್ರತೆಯು ಯಾವ ಯಾವ ಜನ್ಮದಲ್ಲಿ ಹುಟ್ಟಿದರೂ ಸೌಭಾಗ್ಯವತಿಯಾಗಿಯೇ ಇರುತ್ತಾಳಲ್ಲದೆ ವೈಧವ್ಯ ಭಯವು ಅವಳಿಗಿರುವುದಿಲ್ಲ.

೪೬. ಮತ್ತೊಂದು ವ್ರತವನ್ನು ಹೇಳುತ್ತೇನೆ, ಕೇಳು. ಇದಕ್ಕೆ ಕಾಮದೇವ ವ್ರತವೆಂದು ಹೆಸರು. ಇದನ್ನು ಪತಿವ್ರತೆಯಾದ ಹೆಂಗಸು ಪ್ರತಿ ತಿಂಗಳೂ ಶುದ್ಧ ತ್ರಯೋದಶಿಯ ದಿವಸ ಮಾಡಬೇಕು. ಪೂಜೆಮಾಡುವ ದಿನ ಉಪವಾಸವಿರಬೇಕು.

ಪೂಜಯೇತ್ಸೋಪವಾಸಾ ಚ ಕಾಮದೇವಮತಂದ್ರಿತಾ ।
ಪಟ್ಟೆವರ್ಣಕವಿನ್ಯಾಸಂ ತಸ್ಯ ಭಾರ್ಯಾ ತಥಾ ಪತಿಂ ॥ ೪೭ ॥

ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ।
ಗುಡೇನ ಮಧುನಾ ಚೈವ ಸಿತಯಾ ಚಾರ್ದ್ರಕೇಣ ಚ ॥ ೪೮ ॥

ಲವಣೇನ ರಸೈಶ್ಚಾನ್ಯೈಃ ಗಂಧೈಃ ಸಸ್ಯೈಃ ಪೃಥಕ್ಪೃಥಕ್ ।
ಭಕ್ಷ್ಯೈರ್ನಾನಾವಿಧೈಶ್ಚೈವ ಕುಂಕುಮಾರ್ದ್ರೇಣ ವಾಸಸಾ ॥ ೪೯ ॥

ಗಂಧತೋಯಾಂಬುಪೂರ್ಣೇನ ದ್ರುಮಪಲ್ಲವಶಾಲಿನಾ ।
ಪೂರ್ಣಕುಂಭೇನ ಭವ್ಯೇನ ಮಾಲ್ಯಕಂಠೇನ ಭಾರ್ಗವ ॥ ೫೦ ॥

ಕಾಮದೇವಾಯ ನೋ ದದ್ಯಾದ್ಯದಮ್ಲಂ ಕಿಂಚಿದೇವ ತು ।
ತತಶ್ಚ ಪಶ್ಚಾದ್ಭೋಕ್ತವ್ಯಂ ಸರ್ವಮಮ್ಲವಿವರ್ಜಿತಂ ॥ ೫೧ ॥

---

೪೭. ಆ ದಿವಸ ರೇಷ್ಮೆಬಟ್ಟೆಯ ಮೇಲೆ ತನ್ನ ಪತಿಯ ಆಕಾರವನ್ನು ಬರೆದು ಅದರಲ್ಲಿ ತನ್ನ ಗಂಡನನ್ನೇ ಕಾಮದೇವನ ರೂಪದಿಂದ ಪೂಜಿಸಬೇಕು.

೪೮-೫೧. ಯಥಾಪ್ರಕಾರವಾಗಿ ಈ ಪೂಜೆಯನ್ನೂ ಸಹ ಗಂಧ, ಹೂವು, ಧೂಪ, ದೀಪ, ನೈವೇದ್ಯ, ನಮಸ್ಕಾರಗಳಿಂದ ನಡಿಸಬೇಕು. ಸ್ವಚ್ಛವಾಗಿಯೂ ತಂಪಾಗಿಯೂ ಇರುವ ಬೆಲ್ಲದ ಪಾನಕಕ್ಕೆ ಜೇನುತುಪ್ಪವನ್ನು ಬೆರಸಿ ಅದನ್ನು ನಿವೇದಿಸಬೇಕು. ಉಪ್ಪನ್ನೂ, ಇತರ ಸಕಲವಿಧ ರಸಪದಾರ್ಥಗಳನ್ನೂ ಬೇರೆ ಬೇರೆ ಶಾಕಪಾಕಗಳನ್ನೂ, ನಾನಾ ವಿಧವಾದ ಭಕ್ಷ್ಯಗಳನ್ನೂ ಮಾಡಿ ನೈವೇದ್ಯಮಾಡಬೇಕು. ಕೆಂಪಿನ ವಸ್ತ್ರವನ್ನು ಹೊದ್ದಿಸಬೇಕು. ಕಲಶಸ್ಥಾಪನೆ ಮಾಡಿ ಆ ಕಲಶದೊಳಕ್ಕೆ ಸುಗಂಧಪೂರಿತ ಜಲವನ್ನೂ ತುಂಬಿ ಪಂಚಪಲ್ಲವ (ಚಿಗುರು)ಗಳನ್ನು ಹಾಕಬೇಕು. ಆ ಪೂರ್ಣಕಲಶದ ಕತ್ತಿಗೆ ಕಟ್ಟಿದಹೂವನ್ನು ಸುತ್ತಬೇಕು. ಆ ಕಲಶದೊಳಗೆ ನಿಂಬೇಹಣ್ಣಿನ ರಸವನ್ನಾಗಲೀ ಹುಣಿಸೆಹಣ್ಣಿನ ರಸವನ್ನಾಗಲೀ ಬೆರಸಬೇಕು. ಇದು ಕಾಮದೇವನಿಗೆ ಬಹು ಇಷ್ಟ. ಈರೀತಿ ಕಲಶಸ್ಥಾಪನೆ ಮಾಡಿ ರೇಷ್ಮೆಬಟ್ಟೆಯ ಮೇಲೆ ಬರೆದಿರುವ ಪತಿ (ಕಾಮದೇವ) ಚಿತ್ರದ ಮೇಲೆ ಈ ಕಲಶವನ್ನಿಟ್ಟು ಯಥಾವಿಧಿಯಾಗಿ ಕಾಮಪೂಜೆಯನ್ನು ಮಾಡಬೇಕು. ಪೂಜಾನಂತರ ಹುಳಿ ಹಾಕಿದ ಪದಾರ್ಥವನ್ನು

ಸರ್ವಾನ್ಕಾಮಾನವಾಪ್ನೋತಿ ಕಾಮಪೂಜಾವಿಧಾಯಿನೀ ।
ಅಥ ಚೇನ್ನೈವ ಶಕ್ನೋತಿ ಸರ್ವಾಂ ರಾಮ ತ್ರಯೋದಶೀಂ ॥ ೫೨ ॥

ಚೈತ್ರಶುಕ್ಲೇನ ಸರ್ವಾಸಾಂ ಫಲಮಾಪ್ನೋತ್ಯಸಂಶಯಂ ।
ತಸ್ಮಾತ್ಸರ್ವಪ್ರಯತ್ನೇನ ಚೈತ್ರಶುಕ್ಲತ್ರಯೋದಶೀಂ ॥ ೫೩ ॥

ಕಾಮಸ್ಯ ಪೂಜಾ ಕರ್ತವ್ಯಾ ಸರ್ವಕಾಮಪ್ರದಾಯಿನೀ ।
ಕಾಮದೇವಂ ಸಮಭ್ಯರ್ಚ್ಯ ಕಾರ್ಯಮಾತ್ಮಾಭಿಪೂಜನಂ ॥ ೫೪ ॥

ಕುಂಕುಮಾಂಕೈಸ್ತಥಾ ವಸ್ತ್ರೈರ್ಗಂಧಮಾಲ್ಯವಿಭೂಷಣೈಃ ।
ಭರ್ತಾರಂ ಪೂಜಯೇತ್ಪಶ್ಚಾನ್ನಾರೀ ತು ಕೃತಮಣ್ಡನಾ ॥ ೫೫ ॥

ಕುಂಕುಮಾಂಕೇನ ವಸ್ತ್ರೇಣ ಗಂಧಮಾಲ್ಯೈರ್ಮನೋಹರೈಃ ।
ಪುರುಷೋಽಪಿ ಸಮಭ್ಯರ್ಚ್ಯ ಕಾಮದೇವಮಸಂಶಯಂ ॥ ೫೬ ॥

---

ಮಾತ್ರ ಬಿಟ್ಟು ಬಾಕಿ ಪದಾರ್ಥಗಳನ್ನೆಲ್ಲಾ ಊಟಮಾಡಬಹುದು. ಈ ಕ್ರಮದಿಂದಾವ ಪತಿವ್ರತೆಯು ಕಾಮ (ಮನ್ಮಥ) ಪೂಜೆಯನ್ನಾಚರಿಸುವಳೋ ಅವಳು ತನ್ನ ಮನಸ್ಸಿನಲ್ಲಿರುವ ಸಕಲ ಇಷ್ಟಾರ್ಥಗಳನ್ನೂ ಹೊಂದುತ್ತಾಳೆ. ಎಲೈ ಪರಶುರಾಮನೇ! ಕೇಳು. ಹನ್ನೆರಡು ತಿಂಗಳ ತ್ರಯೋದಶಿಯಲ್ಲೂ ಈ ಪೂಜೆಯನ್ನು ಮಾಡಲು ಅನನುಕೂಲವೇನಾದರೂ ಆದರೆ ಚೈತ್ರ ಶುದ್ಧತ್ರಯೋದಶೀ ದಿವಸವಾದರೂ ಈ ಪೂಜೆ ಮಾಡಬೇಕು. ಹೀಗೆ ಮಾಡೋಣದರಿಂದ ಹನ್ನೆರಡು ತ್ರಯೋದಶೀ ದಿವಸವೂ ಪೂಜೆಮಾಡಿದ ಫಲವುಂಟಾಗಲು ಸಂದೇಹವಿಲ್ಲ. ಹೇಗಾದರೂ ಸರ್ವಪ್ರಯತ್ನವನ್ನಾದರೂ ಮಾಡಿ ಚೈತ್ರ ಶುಕ್ಲ ತ್ರಯೋದಶೀ ದಿವಸ ಕಾಮಪೂಜೆಯನ್ನು ಮಾಡೋಣದರಿಂದ ಸಕಲ ಇಷ್ಟಾರ್ಥಗಳೂ ಸಿದ್ಧಿಯಾಗುವುವು. ಈರೀತಿ ಕಾಮಪೂಜೆಯನ್ನು ಮಾಡಿದ ಬಳಿಕ ಆತ್ಮ (ಪತಿ)ಪೂಜೆಯನ್ನು ಮಾಡಬೇಕು.

೫೫. ಪ್ರತ್ಯಕ್ಷ ಪತಿಪೂಜೆಯನ್ನು ಮಾಡುವಾಗ ಆ ಪತಿಗೆ ಸಂಕಲಿಕೆ ಪಂಚೆಗಳನ್ನು ಉಡಿಸಿ ಹೊದಿಸಬೇಕು. ಗಂಧಹೂವುಗಳಿಂದ ಅವನನ್ನಲಂಕರಿಸಬೇಕು. ತಾನೂ ಸಹ ಸಕಲಾಭರಣ ಭೂಷಿತಳಾಗಿರಬೇಕು.

೫೬. ಪತಿಯು ತನ್ನ ಪತ್ನಿಯಿಂದ ಪೂಜಿತನಾದ ಬಳಿಕ ಅದೇ ಸಂಕಲಿಕೆ ವಸ್ತ್ರ (ಕುಂಕುಮ ವಸ್ತ್ರ) ಗಳನ್ನು ಧರಿಸಿದ್ದಾಗಲೇ ತಾನೂ ಸಹ ಕಾಮದೇವನ ಪೂಜೆಯನ್ನು ಮಾಡಬೇಕು. ಗಂಧ ಮಾಲ್ಯ ಧೂಪದೀಪಾದಿಗಳಿಂದ ಕಾಮನನ್ನು ತೃಪ್ತಿಪಡಿಸಬೇಕು.

**ಸರ್ವಾನ್ಕಾಮಾನವಾಪ್ನೋತಿ ನಾತ್ರ ಕಾರ್ಯಾ ವಿಚಾರಣಾ ।**
**ತಥಾ ಶುಕ್ಲಚತುರ್ಥೀಷು ಗೌರೀಪೂಜಾ ಸದಾ ಭವೇತ್ ॥ ೫೭ ॥**

**ಸ್ನಾತಾಭಿಃ ಸೋಪವಾಸಾಭಿಃ ಸೂರ್ಯಸ್ಯೋದಯನಂ ಪ್ರತಿ ।**
**ಗಂಧಮಾಲ್ಯನಮಸ್ಕಾರಧೂಪದೀಪಾನ್ನಸಂಪದಾ ॥ ೫೮ ॥**

**ಗುಡೇನ ಸಿತಯಾ ಚಾಪಿ ಮಧುನಾ ಚಾರ್ದ್ರಕೇಣ ಚ ।**
**ಸರ್ವೈಶ್ಚಾವಿಧವಾಚಿಹ್ನೈರ್ಲವಣೇನ ಚ ಭೂರಿಣಾ ॥ ೫೯ ॥**

**ಚತುರ್ಥೀದ್ವಿತಯೇ ಪೂಜ್ಯಾ ಸರ್ವಶಕ್ತ್ಯಾ ವಿಶೇಷತಃ ।**
**ಆಷಾಢೇ ಸ್ಯಥವಾ ಮಾಸಿ ಮಾಘೇ ಚಾಪ್ಯಥವಾ ದ್ವಿಜ ॥ ೬೦ ॥**

---

೫೭. ಹೀಗೆ ಪೂಜೆಮಾಡೋಣದರಿಂದ ಸಕಲ ಇಷ್ಟಾರ್ಥಗಳನ್ನೂ ಹೊಂದುವ ನೆಂಬ ವಿಷಯದಲ್ಲಿ ಸಂದೇಹವೇನೂ ಇಲ್ಲ. ಇನ್ನು ಮುಂದೆ ಹೆಂಗಸರು ಮಾಡ ಬೇಕಾದ ಗೌರೀ ಪೂಜಾ ವಿಧಾನವನ್ನೀಗ ಹೇಳುತ್ತೇನೆ. ಕೇಳು. ಪ್ರತಿ ತಿಂಗಳ ಶುದ್ಧ ಚೌತೀ ದಿವಸವೂ ಗೌರೀಪೂಜೆ ಮಾಡುವ ಕ್ರಮವೇನೆಂದರೆ :—

೫೮. ಗೌರೀಪೂಜೆಯನ್ನು ಮಾಡುವ ದಿವಸ ಸ್ತ್ರೀಯರುಗಳು ಪ್ರಾತಃಕಾಲ ಎದ್ದೊಡನೆಯೇ ಸ್ನಾನಮಾಡಿ ಉಪವಾಸದಿಂದಲೇ ಇದ್ದು ಗಂಧ ಪುಷ್ಪ ಧೂಪದೀಪ ನೈವೇದ್ಯ ತಾಂಬೂಲಗಳಿಂದ ಗೌರಿಯನ್ನು ಭಕ್ತಿಯಿಂದ ಪೂಜಿಸಬೇಕು.

೫೯. ನೈವೇದ್ಯ ಮಾಡಬೇಕಾದರೆ ಬಿಳೀ ಬೆಲ್ಲವನ್ನು ತಂದು ಅದರಲ್ಲಿ ಕಾಯನ್ನ (ಗುಡಾನ್ನ) ವನ್ನು ಮಾಡಬೇಕು. ಅಥವಾ ಜೇನುತುಪ್ಪದಲ್ಲಿ ಕಲಸಿದ ಅನ್ನವನ್ನಾದರೂ ನಿವೇದನ ಮಾಡಬಹುದು. ಅಥವಾ ತುಪ್ಪಾನ್ನವನ್ನು ಮಾಡಿಸಿ ನಿವೇದನ ಮಾಡಬೇಕು. ಸುವಾಸಿನಿಯರು ಸರ್ವ ಮಂಗಳದ್ರವ್ಯಗಳಿಂದಲಂಕೃತ ರಾಗಿ ಪೂಜೆಮಾಡಬೇಕು.

೬೦. ಈ ರೀತಿ ಹನ್ನೆರಡು ತಿಂಗಳು ಕಾಲವೂ ಮಾಡುವುದಕ್ಕವಕಾಶವಿಲ್ಲದೆ ಹೋದರೆ ಆಷಾಢ ಮಾಸ ಅಥವಾ ಮಾಘ ಮಾಸದ ಶುದ್ಧ ಚೌತೀ ದಿವಸ ಈ ಎರಡು ದಿವಸವಾದರೂ ಸರ್ವಪ್ರಯತ್ನದಿಂದಲಾದರೂ ಯಥಾ ಶಕ್ತಿ ಪೂಜೆಮಾಡಬೇಕು.

ಚತುರ್ಣಾಮಪಿ ಕುಂಡಾನಾಂ ಮಧ್ಯೇ ಸೂರ್ಯಾಂಶುಸೇವಿನೀ ।
ಆಷಾಢೇ ಸೋಪವಾಸಾ ತು ತೃತೀಯಾಯಾಂ ತಥಾ ವಸೇತ್ ॥ ೬೧ ॥

ನ ತಸ್ಯಾ ದುರ್ಲಭಂ ಲೋಕೇ ಕಿಂಚಿದ್ಭವತಿ ಭಾರ್ಗವ ।
ಮಾಘೇಪ್ಯುಪೋಷಿತಾ ಮಾಸಿ ರಾತ್ರ್ಯಂತೇ ತುಹಿನೋತ್ಕರೈಃ ॥ ೬೨ ॥

ಶುಕ್ಲೀಕೃತ್ಯಾಖಿಲಾನ್ಯಂಗಾನ್ಯಧ್ಯಾಸ್ತೇ ಶಯನಂ ಯಯಾ ।
ತತಶ್ಚ ಶೀತತೋಯೇನ ಪಶ್ಚಾತ್ಸ್ನಾನಂ ಸಮಾಚರೇತ್ ॥ ೬೩ ॥

ಸಾಽಪಿ ಕಾಮಾನವಾಪ್ನೋತಿ ಯಾನ್ಯಾಮ ಮನಸೇಚ್ಛತಿ ।
ಪತಿವ್ರತಾ ಸದಾ ಲೋಲಾ ಸುಭಗಾ ರೂಪಸಂಯುತಾ ॥ ೬೪ ॥

---

೬೧. ಈ ರೀತಿ ಪೂಜೆಮಾಡುವ ನಾರಿಯು ಆಷಾಢ ಶುದ್ಧ ಚೌತಿಯ ದಿವಸ ಪೂಜೆಮಾಡುವುದಕ್ಕಿಂತ ಮುಂಚೆ ಅದರ ಹಿಂದಿನ ದಿವಸ ಹಗಲು ನಾಲ್ಕು ಅಗ್ನಿ ಕುಂಡಗಳ ಮಧ್ಯದಲ್ಲಿ ಬಿಸಿಲಿನಲ್ಲಿ ಕುಳಿತು ಉಪವಾಸ ಕಾಲಗಳೆಯಬೇಕು.

೬೨. ಆದಿನ ಹಾಗೆ ಕಾಲಗಳೆದು ಮಾರನೇ ಚತುರ್ಥೀ ದಿವಸ ಪೂಜೆ ಮಾಡಬೇಕು. ಈ ರೀತಿ ಮಾಡುವ ಹೆಂಗಸಿಗೆ ಮೂರು ಲೋಕದಲ್ಲೂ ದುರ್ಲಭ ವಾದುದೇನೂ ಇರುವುದಿಲ್ಲ. ಮಾಘಮಾಸದಲ್ಲಿಯೂ ಸಹ ಇದೇ ಮೇರೆ ಶುದ್ಧ ತೃತೀಯಾ ದಿವಸ ಉಪೋಷ್ಯವಿದ್ದು ಆ ರಾತ್ರಿ ಬಯಲಿನಲ್ಲಿ ಮಂಜಿನಲ್ಲಿ ಕುಳಿತು (ಚಳಿಯಲ್ಲಿ) ಕಾಲಗಳೆಯಬೇಕು. ಈ ರೀತಿ ಇದ್ದು ಸಕಲಾವಯವಗಳನ್ನೂ ಶುದ್ಧಿ ಮಾಡಿಕೊಂಡು ಬೆಳಗಿನ ಜಾವದಲ್ಲಿ ತಣ್ಣೀರಿನಲ್ಲಿ ಸ್ನಾನಮಾಡಬೇಕು.

೬೩. ಈ ರೀತಿ ಮಾಡಿದ ಹೆಂಗಸೂ ಸಹ ತಾನು ಬಯಸಿದ ಕೋರಿಕೆ ಗಳೆಲ್ಲವನ್ನೂ ಖಂಡಿತವಾಗಿ ಹೊಂದುತ್ತಾಳೆ. ಅಂತಹ ಹೆಂಗಸು ಈ ರೀತಿ ಮಹಾ ಪತಿವ್ರತೆಯಾಗಿಯೂ ಲೋಲಳಾಗಿಯೂ, ಸುಂದರಿಯಾಗಿಯೂ, ಸೌಭಾಗ್ಯಶಾಲಿನಿ ಯಾಗಿಯೂ ಬದುಕಿರುತ್ತಾಳೆ.

೬೪. ಈ ರೀತಿ ಗೌರೀಪೂಜಾಸಕ್ತಳಾದ ಪತಿವ್ರತೆಯು ಧರ್ಮಪರಳಾಗಿ ಯಶಸ್ಸನ್ನು ಹೊಂದುತ್ತಾಳೆ. ಗೌರೀದೇವಿಗೆ ಆಷಾಢಮಾಸದಲ್ಲಿ ದಾಳಿಂಬೇ ಹೂವಿನಿಂದ ಪೂಜೆಮಾಡಬೇಕು. ಚೈತ್ರಮಾಸದಲ್ಲಿ ಹತ್ತೀಗಿಡದ ಹೂವಿನಿಂದ ಪೂಜೆಯನ್ನು ಮಾಡಬೇಕು.

ಧರ್ಮಪ್ರಿಯಾ ಚ ಭವತಿ ಗೌರೀಪೂಜನತತ್ಪರಾ ।
ಆಷಾಢೇದಾಡಿಮಂ ಪುಷ್ಪಂ ಮಘೌ ಕರ್ಪಾಸಸಂಭವಂ ॥ ೬೫ ॥

ನಿವೇದ್ಯ ಸರ್ವಮಾರ್ಯಾಯ್ಯೈ ಸೌಭಾಗ್ಯಂ ಮಹದಶ್ನುತೇ ।
ಶಕ್ರಾಣೀ ಚ ತಥಾ ಪೂಜ್ಯಾ ಮಾಸಿ ಭಾದ್ರಪದೇ ೀಭವೇತ್ ॥ ೬೬ ॥

ಸ್ತ್ರೀಣಾಂ ಗೌರೀವಿಧಾನೇ ನ ಸರ್ವಕಾಮಪ್ರದಾ ಹಿ ಸಾ ।
ಪ್ರೋಷ್ಠಪಾದಸ್ಯ ಮಾಸಸ್ಯ ಚತುರ್ಥ್ಯಾಂ ದ್ವಿಜಸತ್ತಮ ॥ ೬೭ ॥

ಶಕ್ರಾಣೀ ಪೂಜನಂ ಕೃತ್ವಾ ನಾಕಪೃಷ್ಠೇ ಮಹೀಯತೇ ।
ಪೂಜಾತಿಥಿಷು ಸರ್ವಾಸು ರಾಮ ಬ್ರಾಹ್ಮಣಪೂಜನಂ ॥ ೬೮ ॥

ಕರ್ತವ್ಯಂ ಯಚ್ಚ ನೈವೇದ್ಯಂ ದೇಯಂ ತತ್ಸುಭಗಾಸು ಚ ।
ಅನಭ್ಯರ್ಚ್ಯ ತಥಾ ಗೌರೀಂ ಗೌರೀದೀಪಂ ಪ್ರಪಶ್ಯತಿ ॥ ೬೯ ॥

---

೬೫. ಈ ರೀತಿ ಗೌರೀದೇವಿಗೆ ಪುಷ್ಪಪೂಜೆಯನ್ನು ಮಾಡಿ ನಿವೇದನಗಳನ್ನು ಮಾಡಿದರೆ ಮಹತ್ತರವಾದ ಸೌಭಾಗ್ಯವನ್ನು ಹೊಂದುತ್ತಾಳೆ. ಇನ್ನು ಗೌರೀ ಪೂಜಾನಂತರ ಮಾಡಬೇಕಾದ ಇಂದ್ರಾಣೀ (ಶಚೀ) ಪೂಜಾಕ್ರಮವನ್ನು ಹೇಳುತ್ತೇನೆ; ಕೇಳು. ಭಾದ್ರಪದ-ಮಾಸದಲ್ಲಿ ಹೆಂಗಸಾದವಳು (ಸುವಾಸಿನಿ) ಇಂದ್ರನ ಧರ್ಮ ಪತ್ನಿಯಾದ ಶಚೀದೇವಿಯನ್ನು ಭಕ್ತಿಯಿಂದ ಪೂಜೆಮಾಡಬೇಕು.

೬೬-೬೭. ಈ ಶಚೀಪೂಜೆಯನ್ನೂ ಸಹ ಗೌರೀಪೂಜಾವಿಧಾನದಿಂದಲೇ ಮಾಡಬೇಕು. ಹೀಗೆ ಮಾಡಿದರೆ ಶಚೀದೇವಿಯು ಸಕಲ ಇಷ್ಟಾರ್ಥಗಳನ್ನೂ ಕೊಟ್ಟು ಕಾಪಾಡುವಳು. ಈ ಪೂಜೆಯನ್ನು ಭಾದ್ರಪದ ಶುದ್ಧ ಚೌತಿಯ ದಿವಸ ಮಾಡಬೇಕು.

೬೮. ಯಾವ ಹೆಂಗಸು ಶಚೀಪೂಜೆಯನ್ನು ಮಾಡುವಳೋ ಆಕೆಯು ಸ್ವರ್ಗ ಲೋಕದಲ್ಲಿ ಸುಖವಾಗಿ ವಾಸಮಾಡುತ್ತಾಳೆ. ಈ ಪೂಜೆಮಾಡಿದ ದಿವಸ ಬ್ರಾಹ್ಮಣ ಪೂಜೆಯನ್ನು ತಪ್ಪದೆ ಮಾಡಬೇಕು.

೬೯. ಭಕ್ಷ್ಯಭೋಜ್ಯಾದಿಗಳನ್ನು ನಿವೇದನ ಮಾಡಿ ಅದು ನೈವೇದ್ಯವಾದ ಬಳಿಕ ಅವುಗಳನ್ನು ಸುವಾಸಿನಿಯರಿಗೆ ಬಾಗಿನ ರೂಪವಾಗಿ ಹಂಚಬೇಕು. ಈರೀತಿ ಪೂಜೆಮಾಡದೆ ಗೌರಿಯನ್ನೂ, ಗೌರಿಯ ಮುಂದೆ ಹತ್ತಿಸಿದ ದೀಪವನ್ನೂ ನೋಡ ಬಾರದು. (ಅಂದರೆ ಭಾದ್ರಪದ ಮಾಸದಲ್ಲಿ ಮಾಡುವ ಗೌರೀಪೂಜೆಗಿಂತ ಮುಂಚೆ ಇಂದ್ರಾಣೀ ಪೂಜೆಯನ್ನು ಮಾಡಬೇಕೆಂದು ಹೇಳಿದ ಹಾಗಾಯಿತು.)

ದೌರ್ಭಾಗ್ಯಂ ಮಹದಾಪ್ನೋತಿ ವರ್ಜಿತಂ ತಸ್ಯ ದರ್ಶನಂ ।
ಗೌರೀಪೂಜನಕಾಮಾ ಸ್ತ್ರೀತಸ್ಮಿನ್ನಹನಿ ಯಾ ದ್ವಿಜ ॥ ೭೦ ॥

ಸ್ನಾನಮುಷ್ಣಾಮ್ಬುನಾ ಕುರ್ಯಾತ್ಸಾಽಪಿ ಸೌಭಾಗ್ಯಮಶ್ನುತೇ ।
ಸಂಪೂಜ್ಯ ವಿಧಿನಾ ಗೌರೀಂ ಯತ್ರಯತ್ರಾಽಭಿಜಾಯತೇ ॥ ೭೧ ॥

ರೂಪಲಾವಣ್ಯಸೌಭಾಗ್ಯ ಯುಕ್ತಾ ಭವತಿ ಚಾಪ್ಯಥ ।
ನಿತ್ಯಂ ಚಾವಿಧವಾ ರಾಮ ತಥೈವ ಚ ಪತಿವ್ರತಾ ॥ ೭೨ ॥

ಏತಾಃ ಪೂಜ್ಯತಮಾಃಸ್ತ್ರೀಷು ದೇವತಾಸ್ತಾಃ ಪ್ರಕೀರ್ತಿತಾಃ ।
ಅತಃ ಪರಂ ತು ಯಾ ಕುರ್ಯಾತ್ಸತೀಮಾರ್ಗವಿವರ್ಜನಂ ॥ ೭೩ ॥

---

೭೦. ಹಾಗೆ ಮಾಡಿದರೆ ಮಹತ್ತರವಾದ ದೌರ್ಭಾಗ್ಯವನ್ನು ಹೊಂದುತ್ತಾಳೆ. (ಯಾವ ಯಾವ ದೇಶದಲ್ಲಿ ಯಾವ ಯಾವ ಆಚಾರವೂ ಪೂರ್ವಸಂಪ್ರದಾಯವೂ ಇದೆಯೋ ಅದನ್ನನುಸರಿಸಿ ಪೂಜೆಮಾಡುವುದು ಯುಕ್ತವಾದುದೆಂದು ತಿಳಿಯಬೇಕು.) ಆದ್ದರಿಂದ ಶಚೀಪೂಜಾನಂತರವೇ ಗೌರೀಪೂಜೆಯನ್ನೂ ಸಹ ಮಾಡಬೇಕು. ಅದರ ವಿಧಾನವನ್ನೂ ಸಹ ಹೇಳುತ್ತೇನೆ.

೭೧. ಆ ದಿವಸ ಬಿಸಿನೀರಿನಲ್ಲಿ ಸ್ನಾನಮಾಡಬೇಕು. ಆ ಮೇಲೆ ಪೂಜೆ ಮಾಡಬೇಕು. ಈ ರೀತಿ ಪೂಜಾವಿಧಾನವನ್ನಾವಳು ಮಾಡುವಳೋ ಅವಳು ಯಾವ ಯಾವ ಜನ್ಮದಲ್ಲೇ ಹುಟ್ಟಿದಾಗ್ಗೂ ಸೌಭಾಗ್ಯವತಿಯಾಗಿಯೇ ಇರುತ್ತಾಳೆ.

೭೨. ಅವಳು ಹುಟ್ಟುವಾಗಲೇ ಮಹಾರೂಪಲಾವಣ್ಯಗಳಿಂದ ಕೂಡಿಯೇ ಜನಿಸುತ್ತಾಳೆ. ಅವಳು ಮಹಾಪತಿವ್ರತೆಯಾಗಿಯೂ ಸುಮಂಗಲಿಯಾಗಿಯೂ ಇದ್ದು ಬೇಕಾದ ಭೋಗಭಾಗ್ಯಗಳನ್ನನುಭವಿಸುತ್ತಾಳೆ.

೭೩. ಇದುವರಿಗೂ ನಾನು ಪೂಜ್ಯತಮವಾದ ದೇವತೆಗಳಾರೋ, ಆರಾರನ್ನು ಪೂಜೆಮಾಡಬೇಕೋ, ಅದರಿಂದಾವ ಫಲವಾಗುವುದೋ ಎಂಬ ಸಂಗತಿಯನ್ನು ನಿನಗೆ ತಿಳಿಸಿರುತ್ತೇನೆ. ಈ ದೇವತೆಯರೆಲ್ಲರನ್ನೂ ಹೆಂಗಸರು ಬಹು ಭಕ್ತಿಯಿಂದ ಅರ್ಚನೆ ಮಾಡಬೇಕು.

**ಹಿಂಸಾತ್ಮಕಮನಿರ್ದಿಷ್ಟಮಶುದ್ಧಂ ವಾ ದ್ವಿಜೋತ್ತಮ ।**
**ದೇವತಾರಾಧನಂ ಸಾತು ಚಿರಂ ನರಕಮೃಚ್ಛತಿ ॥ ೭೪ ॥**

**ತತಸ್ತು ಚಾಪ್ಯನಾಯುಷ್ಯಂ ಗ್ರಹಭೂತವಿವರ್ಧನಂ**
**ಹಿಂಸಾತ್ಮಕಾತು ಯಾ ನಾರೀ ದೇವತಾರಾಧನೇ ರತಾ ॥ ೭೫ ॥**

**ಮೂಲಕರ್ಮರತಾ ಭರ್ತ್ರಾ ಸ್ಯಾವಿವಾಹ್ಯಾ ಭೃಗೂತ್ತಮ ।**
**ಪೌಂಶ್ಚಲ್ಯಾದಪಿ ನಾರೀಣಾಂ ರಾಮ ಹಿಂಸಾ ವಿವರ್ಜಿತಾ ॥ ೭೬ ॥**

**ಸ್ತ್ರೀ ಸ್ವಭಾವಂ ಶುಭಂ ರಾಮ ಸೌಮ್ಯತ್ವಂ ಮಾರ್ದವಂ ದಯಾ ।**
**ನಿರ್ದಯಾ ರಾಕ್ಷಸೀ ರಾಮ ಪಿಶಾಚೀ ವಾ ದ್ವಿಜೋತ್ತಮ ॥ ೭೭ ॥**

---

೭೪. ನಾನು ಇದುವರಿಗೆ ಹೇಳಿದ ದೇವತೆಯರನ್ನು ಪೂಜಿಸದೆ ಯಾವ ಹೆಂಗಸು ಪಾತಿವ್ರತ್ಯಧರ್ಮವನ್ನು ತ್ಯಾಗಮಾಡಿ ಹಿಂಸಾತ್ಮಕವಾಗಿಯೂ, ಯಾರೂ ಮಾಡದೆಯೂ ನಿರ್ದಿಷ್ಟವಲ್ಲದೆಯೂ ಇರುವ ಅಶುದ್ಧಕರ್ಮವನ್ನು (ಅವಿಧಿಯಿಂದ) ಮಾಡುವಳೋ (ಅನುಕ್ತದೇವತಾಪೂಜೆಯನ್ನು ಮಾಡುವಳೋ) ಅವಳು ಬಹುಕಾಲ ನರಕವಾಸವನ್ನನುಭವಿಸುವಳು.

೭೫. ಮೇಲೆ ಹೇಳಿದ ಮಂಗಳಕರವಾದ ದೇವತೆಯರನ್ನು ಪೂಜಿಸದೆ ಯಾವಳು ಹಿಂಸಾಕರ್ಮದಿಂದ ದೇವತಾರಾಧನೆ ಮಾಡುವಳೋ ಅಂತಹವಳ ಆಯುಸ್ಸು ಕ್ಷೀಣವಾಗುವುದು. ಅವಳನ್ನು ಗ್ರಹಗಳೂ ಭೂತಗಳೂ ಹಿಡಿದು ಕೊಳ್ಳುವುವು.

೭೬. ಯಾವ ಹೆಂಗಸಾದರೂ ಚಿಕ್ಕಂದಿನಲ್ಲಿಯೇ ಮಾಟಮದ್ದುಗಳನ್ನೂ ಕುಶಲಗಳನ್ನೂ ಕಲಿತಿರುವಳೆಂದು ತಿಳಿದು ಬಂದರೆ ಅವಳನ್ನು ಯಾರೂ ಮದುವೆ ಮಾಡಿಕೊಳ್ಳಬಾರದು. ವ್ಯಭಿಚಾರಕ್ಕಿಂತ ಬೇರೆ ಹಿಂಸೆಯು ಹೆಂಗಸರಿಲ್ಲ. (ಅಂದರೆ ವ್ಯಭಿಚಾರವೃತ್ತಿಯು ಹಿಂಸಾವೃತ್ತಿಯೆಂದು ಭಾವ.) ಆದ್ದರಿಂದ ಈ ವೃತ್ತಿಯು ಹೆಂಗಸರನ್ನು ಕೆಡಿಸುವುದು.

೭೭. ಅಯ್ಯಾ! ಪರಶುರಾಮ! ಮುಖ್ಯವಾಗಿ ಹೆಂಗಸರ ಸ್ವಭಾವವು ಹೇಗಿರ ಬೇಕೆನ್ನುವಿಯೋ, ಅದನ್ನು ಹೇಳುತ್ತೇನೆ ;—ಸೌಮ್ಯ, ಮೃದುತ್ವಭಾವಗಳು ಮುಖ್ಯ ವಾಗಿ ಹೆಂಗಸರಲ್ಲಿರಬೇಕು. ಹಾಗಲ್ಲದೆ ನಿರ್ದಯ, ಕಾಠಿಣ್ಯಗಳೇನಾದರೂ ಹೆಂಗಸ ರಲ್ಲಿದ್ದರೆ ಅವಳು ಹೆಂಗಸೇ ಅಲ್ಲ. ಅವಳೊಬ್ಬಳು ರಕ್ಕಸಿ ಮತ್ತು ಪಿಶಾಚಿ.

ಅಥವಾ ಸರ್ವಮುತ್ಸೃಜ್ಯ ಪತಿಪೂಜನತತ್ಪರಾ ।
ಕೇಶವಾರಾಧನಂ ಕುರ್ಯಾಚ್ಛ್ರಿಯಶ್ಚ ಪುರುಷರ್ಷಭ ॥ ೭೮ ॥

ತೇನೈವ ಸರ್ವಮಾಪ್ನೋತಿ ಯತ್ಕಿಂಚಿತ್ಪರಮೃಚ್ಛತಿ ।
ಅಫಲಂ ಸರ್ವಮೇವಸ್ಯಾದ್ಭರ್ತ್ರನುಜ್ಞಾಂ ವಿನಾ ಕೃತಂ ॥ ೭೯ ॥

ಕೇಶವಾರಾಧನಂ ರಾಮಾ ತಥಾಪಿ ಸಫಲಂ ಸ್ತ್ರಿಯಃ ।
ಸರ್ವಭೂತಾನಿ ಗೋವಿಂದೋ ಭರ್ತಾನಾನ್ಯಸ್ತು ಯೋಷಿತಃ ।
ಭರ್ತ್ರನುಜ್ಞಾಂ ವಿನಾ ತಸ್ಮಾತ್ತತಃ ಪೂಜಾ ವಿಧೀಯತೇ ॥ ೮೦ ॥

ನಾರಾಯಣಃ ಪೂಜ್ಯತಮೋ ಹಿ ಲೋಕೇ
ನಾರಾಯಣಃ ಸರ್ವಗತಃ ಪ್ರಧಾನಃ ।

---

೭೮. ನಾನು ಇದುವರಿಗೆ ಎಷ್ಟೋ ಮಂದಿ ದೇವತೆಯರ ಪೂಜೆಯನ್ನು ಹೇಳಿದೆನಷ್ಟೆ? ಯಾವಳು ಇದನ್ನೊಂದನ್ನೂ ಮಾಡದೆ ಸರ್ವದಾ ಪತಿಪೂಜಾಪರಳಾಗಿ ಅವನ ಹಿತವನ್ನೇ ಬಯಸುತ್ತಾ ಲಕ್ಷ್ಮೀನಾರಾಯಣರನ್ನು ಸರ್ವದಾ ಪೂಜೆ ಮಾಡುತ್ತಾ ಬರುವಳೋ,

೭೯. ಆ ಲಕ್ಷ್ಮೀನಾರಾಯಣ ಸ್ವರೂಪನಾದ ಪತಿಯ ಪೂಜೆಯಿಂದ ಸಕಲ ಸಂಪತ್ತನ್ನೂ ಇಹಪರಭೋಗಗಳನ್ನೂ ಹೊಂದುತ್ತಾಳೆ. ಹೀಗಲ್ಲದೆ ಗಂಡನ ಅಭಿಪ್ರಾಯವನ್ನೇ ತೆಗೆದುಕೊಳ್ಳದೆ ಯಾವಳು ಅವನ ಲಕ್ಷ್ಯವಿಲ್ಲದೆ ಪೂಜಾಸಕ್ತಳಾಗುವಳೋ ಅದೊಂದೂ ಸಫಲವಾಗುವುದದಿರಲಿ ;—ಎಲ್ಲವೂ ನಿಷ್ಫಲವೇ ಆಗಿಹೋಗುತ್ತದೆ.

೮೦. ಸಕಲ ಭೂತಗಳಲ್ಲೂ ಪರಮಾತ್ಮ (ಗೋವಿಂದ) ನಿರುವನು. ಹೆಂಗಸಿಗೆ ಗಂಡನೇ ಗೋವಿಂದ (ಪರಮಾತ್ಮ) ಸ್ವರೂಪನು. ಆದ್ದರಿಂದ ಭರ್ತೃವಿನ ಆಜ್ಞೆ ವಿನಹ ಯಾವ ಕೆಲಸವನ್ನೂ ಕೈಗೊಳ್ಳಬಾರದು.

೮೧. ಗಂಡನ ಅಭಿಪ್ರಾಯದಿಂದಲೇ ಯಾವ ಪೂಜೆಯನ್ನಾದರೂ ಮಾಡಬೇಕು. ಲೋಕದಲ್ಲಿ ನಾರಾಯಣಸ್ವಾಮಿಯೇ ಪೂಜ್ಯತಮನಾದ ದೇವರೆಂದರಿಯು

**ನಾರಾಯಣಾರಾಧನತತ್ಪರಾ ಸ್ತ್ರೀ**
**ಕಾಮಾನವಾಪ್ನೋತಿ ನ ಸಂಶಯೋಽತ್ರ ॥ ೮೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರವಾಕ್ಯೇ ಸ್ತ್ರೀದೇವತಾ ಪೂಜನ ನಿರೂಪಣಂ ನಾಮ ಪಂಚತ್ರಿಂಶತ್ತಮೋಽಧ್ಯಾಯಃ**

---

ಬೇಕು. ನಾರಾಯಣನು ಸಕಲ ಭೂತಗಳಲ್ಲೂ ಪ್ರಧಾನವಾಗಿ ವಾಸಮಾಡುತಲಿರುವನು. ನಾರಾಯಣನೇ ಪತಿಯು. ಪತಿಯೇ ನಾರಾಯಣನು. ಈರೀತಿ ತಿಳಿದು ಯಾವ ಹೆಂಗಸು ಲೋಕದಲ್ಲಿ ನಾರಾಯಣಾರಾಧನ-ತತ್ಪರಳಾಗುವಳೋ ಅವಳು ಸಕಲ ಇಷ್ಟಾರ್ಥಗಳನ್ನೂ ಹೊಂದುವುದರಲ್ಲೇನೂ ಸಂಶಯವಿಲ್ಲ.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ ವಜ್ರ ಸಂವಾದರೂಪವಾದ ಸ್ತ್ರೀದೇವತಾಪೂಜಾನಿರೂಪಣವೆಂಬ ಹೆಸರಿನ ಮೂವತ್ತೈದನೆಯ ಅಧ್ಯಾಯ ಮುಗಿಯಿತು.



॥ ಶ್ರೀ ॥

---

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಷಟ್ತ್ರಿಂಶತ್ತಮೋಽಧ್ಯಾಯಃ

---

ಪುಷ್ಕರ ಉವಾಚ

ವೈಲೋಮ್ಯಂ ಧರ್ಮರಾಜೋಽಪಿ ನಾಚರತ್ಯಥ ಯೋಷಿತಾಂ ।
ಪತಿವ್ರತಾನಾಂ ಧರ್ಮಜ್ಞ ಪೂಜ್ಯಾಸ್ತಸ್ಯಾಪಿ ತಾಸ್ಸದಾ ॥ ೧ ॥

ಅತ್ರತೇ ವರ್ಣಯಿಷ್ಯಾಮಿ ಕಥಾಂ ಪ್ರಾಪಪ್ರಣಾಶಿನೀಂ ।
ಯಥಾವಿನೋಕ್ಷಿತೋ ಭರ್ತಾ ಮೃತ್ಯುಪಾಶಾವೃತಃ ಸ್ತ್ರಿಯಾ ॥ ೨ ॥

---

## ಮೂವತ್ತಾರನೆಯ ಅಧ್ಯಾಯವು.

೧. ಪುಷ್ಕರನು ಪರಶುರಾಮನೊಡನೆ ಹೇಳುತ್ತಾನೆ.—ಅಯ್ಯಾ! ಪರಶು ರಾಮನೇ! ಕೇಳು. ಪತಿವ್ರತಾಸ್ತ್ರೀಯರ ವಿಷಯದಲ್ಲಿ ಯಾವನೂ ಸಹ ಯಾವ ವಿರೋಧವನ್ನೂ ಮಾಡಲಾರನು. ಆದ್ದರಿಂದ ಪತಿವ್ರತಾಸ್ತ್ರೀಯರು ಯಮಧರ್ಮ ರಾಜನಿಂದಲೂ ಸಹ ಪೂಜಿಸಲ್ಪಡುತ್ತಿರುವರೆಂದು ತಿಳಿದುಕೊ!

೨. ಈ ವಿಷಯದಲ್ಲಿ ಮಹಾಪಾಪಪರಿಹಾರಕವಾದೊಂದು ಇತಿಹಾಸವನ್ನು ನಿನ್ನೊಡನೆ ಹೇಳುವೆನು, ಕೇಳು. ಮೃತ್ಯುವಿನ ಪಾಶದಿಂದ ಬಿಗಿಯಲ್ಪಟ್ಟು ಪ್ರಾಣ ಕಳೆದುಕೊಂಡ ಒಬ್ಬ ಮಹಾತ್ಮನು ತನ್ನ ಹೆಂಡತಿಯಿಂದ ಹೇಗೆ ಬದುಕಿಕೊಂಡನೆಂಬ ಆ ಕಥೆಯನ್ನು ಈಗ ವಿವರವಾಗಿ ಹೇಳುತ್ತೇನೆ.

ಮದ್ರೇಷು ಶಾಕಲೇ ರಾಜಾ ಬಭೂವಾಶ್ವಪತಿಃ ಪುರಾ ।
ಅಪುತ್ರಸ್ತಪ್ಯಮಾನೋಽಸೌ ಪುತ್ರಾರ್ಥೇ ಸರ್ವಕಾಮದಂ ॥ ೩॥

ಸಾವಿತ್ರ್ಯಾಃ ಕಾರಯಾಮಾಸ ಲಕ್ಷಹೋಮಂ ದ್ವಿಜೋತ್ತಮೈಃ ।
ಸಿದ್ಧಾರ್ಥಕೈರ್ಹೂಯಮಾನಾ ಸಾವಿತ್ರೀ ಪ್ರತ್ಯಹಂ ದ್ವಿಜ ॥ ೪ ॥

ಶತಸಂಖ್ಯೈಶ್ಚತುರ್ಥ್ಯಾಂ ತು ಮಾಸಾದ್ದಶದಿನೇ ಗತೇ ।
ಕಾಲೇ ತು ದರ್ಶಯಾಮಾಸ ಸ್ವಾಂ ತನುಂ ಮನುಜೇಶ್ವರೇ ॥ ೫ ॥

ಸಾವಿತ್ರ್ಯುವಾಚ

ರಾಜನ್ಭಕ್ತೋಽಸಿ ಮೇ ನಿತ್ಯಂ ಪ್ರಾಪ್ಸ್ಯಸೇ ತನಯಾಂ ಶುಭಾಂ ।
ಮದ್ದತ್ತಾಂ ಯತ್ಪ್ರಸಾದಾಚ್ಚ ಪುತ್ರಾನ್‌ಪ್ರಾಪ್ಸ್ಯಸಿ ಶೋಭನಾಂ ॥ ೬ ॥

---

೩. ಪೂರ್ವದಲ್ಲಿ ಮದ್ರದೇಶಕ್ಕೆ ಸೇರಿದ ಶಾಕಲವೆಂಬ ನಗರದಲ್ಲಿ ಅಶ್ವಪತಿಯೆಂಬ ಮಹಾರಾಜನಿದ್ದನು. ಅವನಿಗೆ ಮಕ್ಕಳಿರಲಿಲ್ಲ. ಇದರಿಂದ ಆ ರಾಜನು ಮಹಾಸಂತಾಪಪಡುತ್ತಾ ಮಕ್ಕಳಾಗುವುದಕ್ಕೋಸ್ಕರ ಏನು ಮಾಡಬೇಕೆಂದು ಯೋಚಿಸಿದವನಾಗಿ,

೪. ಬ್ರಾಹ್ಮಣರನ್ನು ಕರೆಯಿಸಿ ಅವರ ಮೂಲಕ ಸಕಲೇಷ್ಟಾರ್ಥಪ್ರದವಾದ ಗಾಯಿತ್ರೀ (ಸಾವಿತ್ರೀ) ಹೋಮವನ್ನು ಲಕ್ಷಸಂಖ್ಯಾಕವಾಗಿ ಮಾಡಲು ಪ್ರಯತ್ನ ಮಾಡಿದನು. ಈರೀತಿ ಸಂಕಲ್ಪಮಾಡಿ ಸಾಸುವೆ ಕಾಳುಗಳಿಂದ ಲಕ್ಷಹೋಮವನ್ನು ಮಾಡಿಸಿದ ಬಳಿಕ ತಾನೇ ಸ್ವಂತವಾಗಿ ಪ್ರತಿದಿನವೂ ಗಾಯತ್ರೀ ಹೋಮಕ್ಕಾರಂಭಿಸಿದನು.

೫. ಚತುರ್ಥೀ ವಿಭಕ್ತ್ಯಂತವಾಗಿ (ಸಾವಿತ್ರ್ಯೈಸ್ವಾಹಾ) ಪ್ರತಿದಿವಸವೂ ನೂರುನೂರು ಹೋಮಗಳನ್ನು ಮಾಡುತ್ತಿರಲು ಒಂದು ತಿಂಗಳು ಹತ್ತು ದಿವಸ ಕಳೆದ ಮೇಲೆ ಸಾವಿತ್ರಿ (ಗಾಯಿತ್ರಿ) ಯು ರಾಜನಿಗೆ ದರ್ಶನಕೊಟ್ಟಳು.

೬. ಸಾವಿತ್ರಿಯು ಅಶ್ವಪತಿಯನ್ನು ಕುರಿತು ಹೇಳಿದುದೇನೆಂದರೆ ;— ಅಯ್ಯಾ! ಮಹಾರಾಜನೆ! ನನ್ನ ಪರಮಭಕ್ತನಾದ ನಿನ್ನ ಸೇವೆಗೆ ಮೆಚ್ಚಿದೆನು. ನಿನಗೆ ಮಂಗಳಾಂಗಿಯಾದೋರ್ವ ಕುಮಾರಿಯು ಹುಟ್ಟಿದ ಬಳಿಕ ಅವಳ ಪುಣ್ಯ ವಿಶೇಷದಿಂದ ಒಂದುನೂರುಮಂದಿ ಗಂಡುಮಕ್ಕಳನ್ನೂ ಸಹ ನೀನು ಪಡೆಯುತ್ತೀಯೆ.

## ಪುಷ್ಕರ ಉವಾಚ

ಏತಾವದುಕ್ತ್ವಾ ಸಾ ರಾಜ್ಞಃ ಪ್ರಣತಸ್ಯೈವ ಭಾರ್ಗವ ।
ಜಗಾಮಾದರ್ಶನಂ ದೇವೀ ಖೇ ಯಥಾ ರಾಮ ಚಂಚಲಾ ॥ ೭ ॥

ಮಾಲವ್ಯಾ ನಾಮ ತಸ್ಯಾಸ್ತಿ ರಾಜ್ಞಃ ಪತ್ನೀ ಪತಿವ್ರತಾ ।
ಸುಷಾವ ತನಯಾಂ ಕಾಲೇ ಸಾವಿತ್ರೀಮೇವ ರೂಪತಃ ॥ ೮ ॥

ಸಾವಿತ್ರ್ಯಾ ಹುತಯಾ ದತ್ತಾ ತದ್ರೂಪಸದೃಶಾ ತತಃ ।
ಸಾವಿತ್ರ್ಯೇವ ಭವೇದೇಷಾ ಜಗಾದ ನೃಪತಿರ್ದ್ವಿಜಾನ್ ॥ ೯ ॥

ಕಾಲೇನ ಯೌವನಂ ಪ್ರಾಪ್ತಾಂ ದದೌ ಸತ್ಯವತೇ ಪಿತಾ ।
ನಾರದಸ್ತು ತತಃ ಪ್ರಾಹ ರಾಜಾನಂ ದೀಪ್ತತೇಜಸಂ ॥ ೧೦ ॥

---

೭. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ:—ಕೇಳಯ್ಯಾ! ಪರಶುರಾಮ! ಈ ರೀತಿಯಾಗಿ ಸಾವಿತ್ರಿದೇವಿಯು ತನಗೆ ನಮಸ್ಕಾರಮಾಡಿದ ತನ್ನ ಭಕ್ತನಾದ ಅಶ್ವಪತಿಗೆ ವರವನ್ನನುಗ್ರಹಿಸಿ ಆ ಕೂಡಲೇ ಅಲ್ಲಿಯೇ ಮಾಯವಾದಳು.

೮. ಅಶ್ವಪತಿಯ ಹೆಂಡತಿಗೆ ಮಾಳವೀ ಎಂದು ಹೆಸರು. ಈ ಮಹಾಪತಿವ್ರತೆಯು ತನ್ನ ಗಂಡನು ವರವನ್ನು ಪಡೆದೊಡನೆಯೇ ಗರ್ಭಿಣಿಯಾಗಿ ರೂಪದಲ್ಲಿ ಸಾವಿತ್ರಿಯನ್ನೇ ಹೋಲುವ ಒಬ್ಬಳು ಮಗಳನ್ನು ಪ್ರಸುವಿಸಿದಳು.

೯. ಆ ಮಗಳನ್ನು ನೋಡಿದೊಡನೆಯೇ ರಾಜನು ಪರಮಸಂತೋಷಭರಿತನಾಗಿ ಸಕಲ ಬ್ರಾಹ್ಮಣರನ್ನೂ ರಾಜಸಭೆಗೆ ಕರೆಯಿಸಿ ಅವರೊಡನೆ ಹೇಳಿದುದೇನೆಂದರೆ;—ಸ್ವಾಮೀ! ವಿಪ್ರೋತ್ತಮರೇ! ನಾನು ಸಾವಿತ್ರೀ ಪ್ರೀತಿಯಾಗಿ ಮಾಡಿದ ಹೋಮಕ್ಕಾಗಿ ಆ ಮಹಾತಾಯಿಯು ಮೆಚ್ಚಿ ನನಗೆ ಒಬ್ಬಳು ಪುತ್ರಿಯನ್ನನುಗ್ರಹ ಮಾಡಿರುವಳು. ಈ ಮಗುವಿನ ಸೌಂದರ್ಯವನ್ನು ನೋಡಿದರೆ ಆ ಸಾವಿತ್ರಿಯೇ ಪ್ರತ್ಯಕ್ಷಳಾಗಿ ಉದಯಿಸಿರುವಂತೆ ನನಗೆ ತೋರುತ್ತದೆ.

೧೦. ಸಾವಿತ್ರಿಯು ದಿನೇ ದಿನೇ ಬೆಳೆಯುತ್ತಾ ಬಂದು ಯೌವನಾವಸ್ಥೆಯನ್ನು ಹೊಂದಿದಳು. ಆ ರೂಪಯೌವನಶಾಲಿಯಾದ ಮಗಳನ್ನು ಅಶ್ವಪತಿಯು ಸತ್ಯವಂತನೆಂಬ ವರನಿಗೆ ಮದುವೆಮಾಡಿಕೊಟ್ಟನು. ಮದುವೆಯಾದ ಮೇಲೆ ನಾರದರು ರಾಜನ ಬಳಿಗೆ ಬಂದು ಆ ತೇಜಸ್ವಿಯಾದ ರಾಜನಿಗೆ ಹೀಗೆ ಹೇಳಿದರು. ಅದೇನೆಂದರೆ;—

ಕ್ಷೀಣಾಯುರೇಕ ವರ್ಷೇಣ ಭವಿಷ್ಯತಿ ನೃಪಾತ್ಮಜಃ ।
ಪ್ರದೀಯತೇ ಸಕೃತ್ಕನ್ಯಾ ಚಿಂತಯಿತ್ವಾ ನರಾಧಿಪಃ ॥ ೧೧ ॥

ತಥಾಽಪಿ ಪ್ರದದೌ ಕನ್ಯಾಂ ದ್ಯುಮತ್ಸೇನಾತ್ಮಜೇ ಶುಭಾಂ ।
ಸಾವಿತ್ರ್ಯಪಿ ಚ ಭರ್ತಾರಮಾಸಾದ್ಯ ನೃಪನಂದನಂ ॥ ೧೨ ॥

ನಾರದಸ್ಯ ತು ವಾಕ್ಯೇನ ದೂಯಮಾನೇನ ಚೇತಸಾ ।
ಶುಶ್ರೂಷಾಂ ಪರಮಾಂ ಚಕ್ರೇ ಭರ್ತೃಶ್ವಶುರಯೋರ್ವನೇ ॥ ೧೩ ॥

ರಾಜ್ಯಭ್ರಷ್ಟಸ್ಸಭಾರ್ಯಸ್ತು ನಷ್ಟಚಕ್ಷುರ್ನರಾಧಿಪಃ ।
ತುತೋಷತಾಂ ಸಮಾಸಾದ್ಯ ರಾಜಪುತ್ರೀಂ ಸದಾ ಸ್ನುಷಾಂ ॥ ೧೪ ॥

---

೧೧. ಅಯ್ಯಾ! ಅಶ್ವಪತಿಯೇ! ನಿನ್ನ ಮಗಳನ್ನು ನೀನು ಈ ಸತ್ಯವಂತನಿಗೆ ಮದುವೆಮಾಡಿಕೊಡುತಲಿದೀಯೆ! ಅದನ್ನು ನಿಲ್ಲಿಸಿ ಬೇರೊಬ್ಬ ವರನನ್ನು ಗೊತ್ತು ಮಾಡು. ಇವನು ಅಲ್ಪಾಯುವು. ಇವನಿಗೆ ಇನ್ನು ಒಂದೇ ವರ್ಷ ಆಯುಸ್ಸಿದೆ. ನಿನ್ನ ಯೋಚನೆಯನ್ನು ಬದಲಾಯಿಸು.

೧೨. ಈ ರೀತಿ ಲಗ್ನಕಾಲದಲ್ಲಿ ನಾರದರು ಬಂದು ಹೇಳಿದಾಗ್ಯೂ ಅವರ ಮಾತನ್ನು ಲಕ್ಷ್ಯಮಾಡದೆ ಅಶ್ವಪತಿಯು ತನ್ನ ಕುವರಿಯನ್ನು ದ್ಯುಮತ್ಸೇನನ ಮಗನಾದ ಆ ಸತ್ಯವಂತನಿಗೆ ಲಗ್ನಮಾಡಿಯೇ ಬಿಟ್ಟನು. ಸಾವಿತ್ರಿಯೂ ಸಹ ಆ ರಾಜಕುಮಾರನನ್ನು ವರಿಸಿ ಮದುವೆಮಾಡಿಕೊಂಡವಳಾದಳು.

೧೩. ತನ್ನ ತಂದೆಗೆ ನಾರದರು ಹೇಳಿದ ಮಾತು ಸಾವಿತ್ರಿಯ ಕಿವಿಗೆ ಬಿದ್ದಿತು. ಇದರಿಂದ ಅವಳ ಮನಸ್ಸಿನಲ್ಲಿ ಒಳಗೇ ವ್ಯಸನವು ತುಂಬಿ ಕವಿಯುತ್ತಿತ್ತು. ಇದಕ್ಕಾಗಿ ಆ ಸಾವಿತ್ರಿಯು ಕಾಡಿನಲ್ಲಿ ವಾಸಮಾಡುತ್ತಿದ್ದ ತನ್ನ ಗಂಡನ ಮತ್ತು ತನ್ನ ಮಾವನ ಸೇವೆಯನ್ನು ಎಡೆಬಿಡದೆ ಮಾಡುತ್ತ ಬಂದಳು.

೧೪. ಸಾವಿತ್ರೀ ಕಥೆಯನ್ನು ತಿಳಿಯದವರೇ ವಿರಳರಾಗಿರುವಾಗ ಸಾವಿತ್ರಿಯ ಮಾವನಾದ ದ್ಯುಮತ್ಸೇನನು ಶತ್ರುಗಳಿಂದ ಜಿತನಾಗಿ ರಾಜ್ಯವನ್ನು ಕಳೆದುಕೊಂಡು ತನ್ನ ಪತ್ನೀಪುತ್ರರೊಡನೆ ಅರಣ್ಯದಲ್ಲಿ ವಾಸವಾಗಿದ್ದನೆಂಬ ಸಂಗತಿಯನ್ನು ಇಲ್ಲಿ ವಿವರಿಸಬೇಕಾಗಿಲ್ಲ. ಈ ವಿಚಾರವನ್ನು ಈ ಪುರಾಣದಲ್ಲಿ ವಿಸ್ತಾರವಾಗಿ ತಿಳಿಸದೆ

**ಚತುರ್ಥೇಽಹನಿ ಮರ್ತವ್ಯಂ ಯದಾ ಸತ್ಯವತಾ ದ್ವಿಜ ।**
**ಶ್ವಶುರೇಣಾಭ್ಯನುಜ್ಞಾತಾ ತದಾ ರಾಜ್ಞಾ ತು ಸಾ ಸ್ನುಷಾ　　॥ ೧೫ ॥**

**ಚಕ್ರೇ ತ್ರಿರಾತ್ರಂ ಧರ್ಮಜ್ಞಾ ಪ್ರಾಪ್ತೇ ತಸ್ಮಿಂಸ್ತದಾ ದಿನೇ ।**
**ಚಾರುಪುಷ್ಪಫಲಾಹಾರಂ ಸತ್ಯವಾನ್ಪ್ರಯಯೌ ವನಂ　　॥ ೧೬ ॥**

**ಶ್ವಶುರೇಣಾಭ್ಯನುಜ್ಞಾತಾ ಯಾಚನಾಭಂಗಭೀರುಣಾ ।**
**ಸಾವಿತ್ರ್ಯಪಿ ಜಗಾಮಾಶು ಸಹ ಭರ್ತ್ರಾ ಮಹದ್ವನಂ　　॥ ೧೭ ॥**

---

ರಾಜ್ಯಭ್ರಷ್ಟನಾದ ದ್ಯುಮತ್ಸೇನನು ಕಣ್ಣುಗಳನ್ನು ಕಳೆದುಕೊಂಡು ಪತ್ನೀಪುತ್ರ ಸಹಿತನಾಗಿ ಕಾಡಿನಲ್ಲಿ ವಾಸವಾಗಿದ್ದನೆಂದು ಮಾತ್ರ ಹೇಳಿದಾರೆ. ಜಗದ್ವಿದಿತವಾದ ಈ ಸಾವಿತ್ರೀ ಚರಿತ್ರೆಯನ್ನು ನಾನೂ ಸಹ ಇಲ್ಲಿಂದಲೇ ಕಥಾಸರಣಿಯನ್ನು ಆರಂಭಿಸಿ ಮೂಲ ಗ್ರಂಥದಲ್ಲಿರುವಂತೆಯೇ ಬರೆದುಕೊಂಡು ಹೋಗುತ್ತೇನೆ. ದ್ಯುಮತ್ಸೇನನು ತನ್ನ ಮಗನನ್ನು ಮದುವೆಯಾದ ಸಾವಿತ್ರಿಯು ತನ್ನ ಮನೆಗೆ ಬಂದೊಡನೆಯೇ ಆ ಸೊಸೆ ತನ್ನ ಸೇವೆ ಮಾಡುತ್ತಿದ್ದುದಕ್ಕಾಗಿ ಪರಮಸಂತೋಷಪಟ್ಟನು.

೧೫. ಇನ್ನೇನು ? ಸತ್ಯವಂತನು ಸಾಯುವುದು ನಾಲ್ಕು ದಿನ ಮಾತ್ರ ಉಳಿದಿದೆ ಯೆನ್ನುವಾಗ ಆ ಸಾವಿತ್ರಿಯು ತನ್ನ ಗಂಡನ ಮರಣ ದಿನವನ್ನು ಲೆಖ್ಖಮಾಡಿಕೊಂಡಿದ್ದು ಆ ನಾಲ್ಕು ದಿವಸಕ್ಕೆ ಮುಂಚಿತವಾಗಿ ತನ್ನ ಮಾವನ ಅಪ್ಪಣೆಯನ್ನು ಪಡೆದು ತನ್ನ ಗಂಡನನ್ನು ಕರೆದುಕೊಂಡು ಕಾಡಿಗೆ ಹೊರಟುಹೋದಳು. ದ್ಯುಮತ್ಸೇನನು ಮಗನನ್ನೂ ಸೊಸೆಯನ್ನೂ ಕಾಡಿಗೆ ಕಳುಹಿಸಿಕೊಟ್ಟನು.

೧೬. ಕಾಡಿಗೆ ಹೋದಮೇಲೆ ಮೂರು ದಿವಸ ಕಳೆದು ನಾಲ್ಕನೇ ದಿವಸವೂ ಪ್ರಾಪ್ತವಾಯಿತು. ಆ ನಾಲ್ಕನೇ ದಿವಸ ಬೆಳಗ್ಗೆ ಎದ್ದೊಡನೆಯೇ ಹೂವು ಹಣ್ಣುಗಳನ್ನು ತರಲು ಸತ್ಯವಂತನು ವನಮಧ್ಯವನ್ನು ಪ್ರವೇಶಮಾಡಿದನು.

೧೭. ಸಾವಿತ್ರಿಗೆ ಆ ಕಾಡಿನಲ್ಲಿ ತನ್ನ ಮಾವನ ಅಪ್ಪಣೆ ಮೊದಲೇ ಸಿಕ್ಕಿದುದರಿಂದ ತನ್ನ ಯೋಚನೆಯು ಭಂಗವಾಗದೆ ಹೋಗಲು ತಾನೂ ಸಹ ತನ್ನ ಗಂಡನೊಡನೆ ಭಯಂಕರವಾದ ವನಮಧ್ಯವನ್ನು ಪ್ರವೇಶಮಾಡಿದಳು.

**ಚೇತಸಾ ದೂಯಮಾನೇನ ಗೂಹಮಾನಾ ಚ ತದ್ಭಯಂ ।**
**ವನೇಽಪಪ್ರಚ್ಛ ಭರ್ತಾರಂ ದ್ರುಮಾಂಶ್ಚ ಸಮೃಗಾಂಸ್ತಥಾ । ॥ ೧೮ ॥**

**ಆಶ್ವಾಸಯಾಮಾಸ ಸ ರಾಜಪುತ್ರೀಂ**
**ಕ್ಲಾಂತಾಂ ವನೇ ಪದ್ಮಪಲಾಶನೇತ್ರಾಂ ।**
**ಸಂದರ್ಶನೇನಾಥ ಮೃಗದ್ವಿಜಾನಾಂ**
**ತಥಾ ದ್ರುಮಾಣಾಂ ವಿಪಿನೇ ನೃವೀರಃ ॥ ೧೯ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ರಾಮಂ ಪ್ರತಿ ಪುಷ್ಕರೋಪಾಖ್ಯಾನೇ ಸಾವಿತ್ರ್ಯುಪಾಖ್ಯಾನೇ ವನಪ್ರವೇಶೋ ನಾಮ ಷಟ್‌ತ್ರಿಂಶತ್ತಮೋಽಧ್ಯಾಯಃ**

---

೧೮. ಸಾವಿತ್ರಿಯ ಮನಸ್ಸಿನಲ್ಲಿ ಪತಿಯ ಮರಣ-ಭಯವು ಇದ್ದುದರಿಂದ ಅವಳು ಬಹಳವಾಗಿ ಆ ಅಂತರಂಗ ವ್ಯಥೆಯನ್ನನುಭವಿಸುತ್ತಿದ್ದಾಗ್ಯೂ ಹೊರಗೆ ಮಾತ್ರ ಅದನ್ನು ತೋರ್ಪಡಿಸಿಕೊಳ್ಳದೆ ಅದನ್ನು ಮುಚ್ಚಿಕೊಂಡವಳಾಗಿ ವನದಲ್ಲಿ ಸಿಂಹ ವ್ಯಾಘ್ರಾದಿಗಳ ಭಯವೂ ಮುಳ್ಳುಪೊದೆಗಳ ಭಯವೂ ಬಹಳವಾಗಿದೆಯಲ್ಲಾ ? ಏನು ಮಾಡಲೆಂದು ಗಂಡನನ್ನು ಪ್ರಶ್ನೆಮಾಡಿದಳು.

೧೯. ಈ ರೀತಿ ಹೆದರುತ್ತಾ ಬಳಲುತ್ತಾ ಕ್ರೂರಮೃಗಗಳನ್ನು ನೋಡಿ ಅಂಜುತ್ತಾ ತನ್ನ ಜತೆಯಲ್ಲಿ ಬರುತ್ತಿರುವ ತನ್ನ ಪತ್ನಿಯಾದ ಪದ್ಮಪಲಾಶಲೋಚನೆ ಯಾದ ಸಾವಿತ್ರಿಯನ್ನು ಸತ್ಯವಂತನು ಪದೇ ಪದೇ ಸಂತೈಸುತ್ತಾ ಘೋರಾರಣ್ಯ ಮಧ್ಯದಲ್ಲಿ ಸಂಚರಿಸಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ದ್ವಿತೀಯಖಂಡದಲ್ಲಿ ಸಾವಿತ್ರೀ ಚರಿತ್ರೆಯಲ್ಲಿ ವನಪ್ರವೇಶವೆಂಬ ಹೆಸರಿನ ಮೂವತ್ತಾರನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಸಪ್ತತ್ರಿಂಶತ್ತಮೋಽಧ್ಯಾಯಃ

### ಸತ್ಯವಾನುವಾಚ

ವನೇಽಸ್ಮಿನ್ ಷಟ್ಪದಾಕೀರ್ಣಂ ಸಹಕಾರಂ ಮನೋಹರಂ ।
ಶ್ರೋತ್ರಘ್ರಾಣಸುಖಂ ಪಶ್ಯ ವಸಂತೇ ರತಿವರ್ಧನಂ ॥ ೧ ॥

ವನೇ ಸಪುಷ್ಪಂ ದೃಷ್ಟ್ವೈವೃಷಾ ರಕ್ತಾಶೋಕಂ ಮನೋಹರಂ ।
ಹಸತೀವ ಮನಃ ಸೇರ್ಷ್ಯಂ ತ್ವಾಮಿವಾಯತಲೋಚನೇ ॥ ೨ ॥

ದಕ್ಷಿಣೇ ದಕ್ಷಿಣೇನೈತಾಂ ಪಶ್ಯ ರಮ್ಯಾಂ ವನಸ್ಥಲೀಂ ।
ಪುಷ್ಪಿತೈಃ ಕಿಂಶುಕೈರ್ಯುಕ್ತಾಂ ಜ್ವಲತಾಮಿವ ಸಪ್ರಭೈಃ ॥ ೩ ॥

---

### ಮೂವತ್ತೇಳನೆಯ ಅಧ್ಯಾಯವು

೧. ಸತ್ಯವಂತನು ತನ್ನ ಪತ್ನಿಯಾದ ಸಾವಿತ್ರಿಯೊಡನೆ ಹೇಳುತ್ತಾನೆ.— ಎಲೌ ಪ್ರಾಣಕಾಂತೆಯೇ! ರತಿವರ್ಧನವಾದೀ ವಸಂತಋತುವಿನಲ್ಲಿ ಭ್ರಮರಗಳಿಂದ ಸುತ್ತುವರೆಯಲ್ಪಟ್ಟಿರುವ, ಕಿವಿಗಳಿಗೂ ಮೂಗುಗಳಿಗೂ ಸುಖವನ್ನುಂಟುಮಾಡುತ ಲಿರುವ ಮನೋಹರವಾದ ಸಿಹಿಮಾವಿನ ಮರವನ್ನು ನೋಡು.

೨. ಎಲೌ ಆಯತಲೋಚನೆಯೇ! ಕೆಂಪಗೆ ಹೂವನ್ನು ಬಿಟ್ಟು ಇರುವ ಮನೋಹರವಾದೀ ರಕ್ತಾಶೋಕ ಪುಷ್ಪಗಳನ್ನು ನೋಡಿದರೆ, ಈರ್ಷ್ಯೆಯಿಂದೊಡ ಗೂಡಿದ ಮನಸ್ಸಿನಿಂದ ಅವು ನಿನ್ನನ್ನು ಹಾಸ್ಯಮಾಡುತಲಿರುವಂತೆ ತೋರುತಲಿದೆ.

೩. ಎಲೌ ಮಂಗಳಾಂಗಿಯೇ! ಈ ದಕ್ಷಿಣಭಾಗದಲ್ಲಿ ವಿರಾಜಿಸುತಲಿರುವ ಮನೋಹರವಾಗಿಯೂ ಕೆಂಪಗೂ ಹೂಗಳನ್ನು ಬಿಟ್ಟಿರುವ ಈ ಮುತ್ತುಗದ ಮರಗಳನ್ನೊಳಗೊಂಡ ವನಸ್ಥಲಿಯನ್ನು ನೋಡಿದರೆ ನೆಲದ ಮೇಲಕ್ಕೆ ಎಲ್ಲೆಲ್ಲೂ ಬೆಂಕಿಯ ಉರಿಯು ಹೊರಟಂತೆ ಕಾಣುತ್ತಿರುವುದು.

**ಸುಗಂಧಿಕುಸುಮಾಮೋದೀ ವನರಾಜಿವಿನಿರ್ಗತಃ ।**
**ಕರೋತಿ ವಾಯುರ್ದಾಕ್ಷಿಣ್ಯಾ ದಾವಯೋಃ ಕ್ಲಮನಾಶನಂ ॥ ೪ ॥**

**ಪಶ್ಯೋತ್ಪಲಂವಿಶಾಲಾಕ್ಷಿ ಕರ್ಣಿಕಾರೈಃ ಸುಪುಷ್ಪಿತೈಃ ।**
**ಕಾಂಚನೈರಿವ ಭಾತ್ಯೇಷಾ ವನರಾಜೀ ಮನೋಹರಾ ॥ ೫ ॥**

**ಅತಿಮುಕ್ತಲತಾಜಾಲರುದ್ಧಮಾರ್ಗವನಸ್ಥಲೀಃ ।**
**ಪಶ್ಯೋಚ್ಚೈಶ್ಚಾರುಸರ್ವಾಂಗಿ ಕುಸುಮೋತ್ಕರಭೂಷಣಾ ॥ ೬ ॥**

**ಮಧುಮತ್ತಾಲಿಝುಂಕಾರವ್ಯಾಜೇನ ವರವರ್ಣಿನಿ ।**
**ಚಾಪಯಷ್ಟಿಂ ಕರೋತೀವ ಕಾಮಃ ಪಾಂಥಜಿಘಾಂಸಯಾ ॥ ೭ ॥**

---

೪. ಈ ವನರಾಜಿಯಿಂದ ಹೊರಟು ಮೆಲ್ಲಗೆ ಬೀಸುತಲಿರುವ ಗಾಳಿಯನ್ನು ನೋಡಿದರೆ ಇದು ನಮ್ಮ ಆಯಾಸ ಪರಿಹಾರಮಾಡುತ್ತಾ ನಮ್ಮ ಮೇಲಿನ ದಾಕ್ಷಿಣ್ಯ ದಿಂದ ಸುಗಂಧಕುಸುಮಪರಿಮಳಯುಕ್ತವಾಗಿ ನಮ್ಮ ಮೈಮೇಲೆ ಬೀಸುತಲಿರುವಂತೆ ಕಾಣುತಲಿದೆ.

೫. ಕನ್ನೈದಿಲೆ ಹೂವಿನಂತೆ ವಿಶಾಲವಾದ ನೇತ್ರವುಳ್ಳ ಎಲೌ ಪ್ರೇಯಸಿಯೇ! ಮನೋಹರವಾದೀ ವನಪಂಕ್ತಿಯಲ್ಲಿ ಪುಷ್ಪಗಳಿಂದ ವ್ಯಾಪ್ತವಾದ ಕರ್ಣಿಕಾರ ವೃಕ್ಷಗಳನ್ನು ನೋಡಿದರೆ ಈ ಜಾಗದಲ್ಲೆಲ್ಲಾ ಚಿನ್ನವನ್ನು ಹರಡಿರುವಂತೆ ಕಾಣುತ ಲಿರುವುದಲ್ಲವೆ ?

೬. ಎಲೌ ವರವರ್ಣಿನಿಯೇ! ಮಧುಪಾನಮಾಡಿ ಮತ್ತವಾದ ಭ್ರಮರಗಳ ಝೇಂಕಾರಗಳೆಂಬ ವ್ಯಾಜದಿಂದ ಮನ್ಮಥನು ಪಾಂಥಜನ (ಮಾರ್ಗಸ್ಥ)ರನ್ನು ಹಿಂಸೆ ಮಾಡುವುದಕ್ಕಾಗಿ ಧನುಸ್ಸಿನಿಂದ ಬಾಣಗಳನ್ನು ಬಿಟ್ಟು ಹೊಡೆಯುತ್ತಿರುವಂತೆ ಕಾಣುತಲಿರುವುದಲ್ಲವೆ ?

೭. ಎಲೌ ಪ್ರಾಣಕಾಂತೆಯೇ! ಈ ಮಾಧನೀಲತಾಜಾಲಗಳಿಂದ ತಡೆಯ ಲ್ಪಟ್ಟ ಈ ವನಸ್ಥಲವನ್ನು ನೋಡಿದರೆ ಕುಸುಮಗಳೆಂಬ ಭೂಷಣಗಳಿಂದ ಭೂಷಿತಳಾದ ವನಶ್ರೀಯು ಎತ್ತರವಾಗಿ ನಿಂತಿರುವಂತೆ ಕಾಣುವುದಲ್ಲವೆ ?

ಫುಲ್ಲಚಂಪಕಸದ್ವಕ್ತ್ರಾ ಪುಂಸ್ಕೋಕಿಲವಿನಾದಿನೀ ।
ವಿಭಾತಿ ಚಾರುತಿಲಕಾ ತ್ವಮಿವೈಷಾ ವನಸ್ಥಲೀ ॥ ೮ ॥

ಕೋಕಿಲಶ್ಚೂತಶಿಖರೇ ಮಂಜರೀರೇಣುಪಿಂಜರಃ ।
ಗದಿತೈರ್ವ್ಯಕ್ತತಾಮೇತಿ ಕುಲೀನಶ್ಚೇಷ್ಟಿತೈರಿವ ॥ ೯ ॥

ಪುಷ್ಪರೇಣ್ವನುಲಿಪ್ತಾಂಗಃ ಪ್ರಿಯಾಮನುಸರನ್ವನೇ ।
ಕುಸುಮಾತ್ಕುಸುಮಂ ಯಾತಿ ಕೂಜನ್ಕಾಮೀವ ಶಿಲೀಮುಖಃ ॥ ೧೦ ॥

ಮಂಜರೀಂ ಸಹಕಾರಸ್ಯ ಕಾಂತಾಚಂಚ್ವಗ್ರಖಂಡಿತಾಂ ।
ಸ್ವಾದಯತ್ಯತಿಪುಷ್ಪೇಽಪಿ ಪುಂಸ್ಕೋಕಿಲಯುವಾ ದ್ರುಮೇ ॥ ೧೧ ॥

---

೮. ಅರಳಿದ ಸಂಪಿಗೆ ಹೂವಿನಂತೆ ರಾರಾಜಿಸುವ, ಮುಖವುಳ್ಳ, ಗಂಡು ಕೋಗಿಲೆಯ ಗಾನದಿಂದ ಆನಂದಪಡುತ್ತಿರುವ, ಮನೋಹರವಾದೀ ತಿಲಕವೃಕ್ಷವನ್ನು ನೋಡಿದುದೇ ಆದರೆ ಈ ವನಸ್ಥಲಿಯು ನಿನ್ನಂತೆಯೇ ಸೌಂದರ್ಯದಿಂದ ಕೂಡಿರುವಂತೆ ತೋರುತಲಿರುವುದು.

೯. ಮಾವಿನ ಮರದ ಶಿಖರದ ಮೇಲೆ ಮಾವಿನ ಚಿಗುರೆಲೆಯ ಮರೆಯಲ್ಲಿ ಕುಳಿತು ಅದರ ಪುಷ್ಪರಸವನ್ನು ಪಾನಮಾಡಿ ಕಿವಿಗಿಂಪಾಗಿ ಹಾಡುತ್ತಿರುವ ಕೋಗಿಲೆಯ ಧ್ವನಿಯನ್ನು ಕೇಳಿದರೆ, ಸದ್ವಂಶದಲ್ಲಿ ಹುಟ್ಟಿದ ಮನುಷ್ಯನು ಅವನ ನಡೆನುಡಿಗಳಿಂದಲೇ ಸತ್ಕುಲೀನನೆಂದು ಹೇಳುವಂತೆ ಕಾಣುತ್ತಿರುವುದು.

೧೦. ಭ್ರಮರಗಳು ಪುಷ್ಪರಸಗಳನ್ನು ಪಾನಮಾಡಿ ಒಂದು ಹೂವಿನಿಂದ ಮತ್ತೊಂದು ಹೂವಿನ ಬಳಿಗೆ ಹಾರಾಡುತ್ತಾ ಹೋಗುತ್ತಿರುವುದನ್ನು ನೋಡಿದರೆ ಕಾಮುಕನೊಬ್ಬನು ಪ್ರಿಯೆಯನ್ನು ಅನುಸರಿಸಿಕೊಂಡು ಹೋಗುವಂತೆ ತೋರುತಲಿದೆ.

೧೧. ತನ್ನ ಪ್ರಾಣಕಾಂತೆಯು ತನ್ನ ಕೊಕ್ಕಿನಿಂದ ಕುಕ್ಕಿ ಸ್ವಲ್ಪ ತಿಂದು ಬಿಟ್ಟುಹೋದ ಮಾವಿನ-ಹೂ ಗೊಂಚಲನ್ನು ಪುಂಸ್ಕೋಕಿಲೆ (ಗಂಡು ಕೋಗಿಲೆ)ಯು ರುಚಿನೋಡುತ್ತಿರುವ ಈ ಮಾವಿನಮರದ ದೃಶ್ಯವನ್ನು ನೋಡಿದರೆ ಕಾಮುಕನಾದ ಯುವಕನು ತನ್ನ ಕಾಂತೆಯ ಅಧರಪಾನ ಮಾಡುವಂತೆ ತೋರುತಲಿದೆ.

ಕಾಕಃ ಪ್ರಸೂತಾಂ ವೃಕ್ಷಾಗ್ರೇ ಸಾಮಿಷಾಗ್ರೇಣ ಚಂಚುನಾ ।
ಕಾಕೀಂ ಸಂಪಾಯಯತ್ಯೇಷ ಪಕ್ಷಾಚ್ಛಾದಿತಪುತ್ರಕಾಂ ॥ ೧೨ ॥

ಭೂಭಾಗಂ ನಿಮ್ನಮಾಸಾದ್ಯ ದಯಿತಾ ಸಹಿತೋ ಯುವಾ ।
ನಾಹಾರಮಪಿ ಚಾದತ್ತೇ ಕಾಮೀ ಕಾಮಂ ಕಪಿಂಜಲಃ ॥ ೧೩ ॥

ಕಲವಿಂಕಸ್ತು ವಿರುತೈಃ ಸಪ್ರಿಯೋ ವಿಟಪೇ ಸ್ಥಿತಃ ।
ಮುಹುರ್ಮುಹುರ್ವಿಶಾಲಾಕ್ಷಿ ಉತ್ಕಂಠಯತಿ ಕಾಮಿನಃ ॥ ೧೪ ॥

ಕ್ಷುದ್ರಶಾಖಾಂ ಸಮಾರೂಢಃ ಶುಕೋಽಯಂ ಕಾಂತಯಾ ಸಹ ।
ಭಾರೇಣ ನಮಯನ್ಶಾಖಾಂ ಕರೋತಿ ಸಫಲಾಮಿವ ॥ ೧೫ ॥

---

೧೨. ಆಗತಾನೇ ಹುಟ್ಟಿದ ಮರಿಯನ್ನು ತನ್ನ ರೆಕ್ಕೆಗಳಲ್ಲಿ ಮುಚ್ಚಿಕೊಂಡು ಮರದ ತುದಿಯಲ್ಲಿ ಕುಳಿತಿರುವ ತನ್ನ ಪ್ರೇಯಸಿಯಾದ ಹೆಣ್ಣುಕಾಗೆಯ ಬಾಯಿಗೆ ತನ್ನ ಕೊಕ್ಕಿನಿಂದ ಮಾಂಸದ ಚೂರನ್ನು ತಂದುಹಾಕಿ ಅದನ್ನು ಪ್ರೀತಿಯಿಂದ ಪೋಷಿಸುತ್ತಿರುವ ಈ ಗಂಡುಕಾಗೆಯನ್ನು ನೋಡಿದೆಯಾ?

೧೩. ಈ ಕಪಿಂಜಲ ಪಕ್ಷಿಯು ತನ್ನ ದಯಿತೆಯನ್ನು ತನ್ನ ಜತೆಯಲ್ಲಿ ಕರೆದುಕೊಂಡು ಆಳವಾದ ಹಳ್ಳದ ಬಳಿಗೆ ಹೋಗಿ ತನ್ನ ಕಾಮವನ್ನು ತೃಪ್ತಿಪಡಿಸಿ ಕೊಳ್ಳುವ ಸಡಗರದಲ್ಲಿ ಆಹಾರವನ್ನೂ ಸಹ ಮರೆತು ಕ್ರೀಡಿಸುತ್ತಿರುವುದು.

೧೪. ತನ್ನ ಪ್ರಿಯನಿಂದೊಡಗೂಡಿದ ಗುಬ್ಬಚ್ಚಿಯು ಮರದ ಮೇಲೆ ಕುಳಿತು ತನ್ನ ಪ್ರಿಯನೊಡನೆ ಪದೇ ಪದೇ ವಿಹರಿಸುತ್ತಿರುವುದನ್ನು ನೋಡಿದರೆ ಕಾಮಿಗಳ ಮನಸ್ಸನ್ನೂ ಸೂರೆಗೊಳ್ಳುತ್ತಿರುವಂತೆ ಕಾಣುವುದು.

೧೫. ಒಂದು ಭಾರವಿಲ್ಲದ ಕೊಂಬೆಯ ಮೇಲೆ ತನ್ನ ಪ್ರಿಯೆಯೊಡನೆ ಕುಳಿತು ತನ್ನ ಭಾರದಿಂದ ಆ ಕೊಂಬೆಯನ್ನು ಜಗ್ಗಿಸುತ್ತಿರುವ ಗಿಳಿಯನ್ನು ನೋಡಿದರೆ ಆಶಾಖೆಯು ಹಣ್ಣನ್ನೇನಾದರೂ ಬಿಟ್ಟಿರುವುದೋ ಎಂದು ತೋರುತಲಿರುವುದು.

ವನೇಭಪಿಶಿತಾಸ್ವಾದತೃಪ್ತೋ ನಿದ್ರಾಮುಪಾಗತಃ ।
ಶೇತೇ ಸಿಂಹಯುವಾ ಕಾಂತಾಚರಣಾವರಣಾನನಃ ॥ ೧೬ ॥

ವ್ಯಾಘ್ರಯೋರ್ಮಿಥುನಂ ಪಶ್ಯ ಶೈಲಕಂದರಸಂಸ್ಥಿತಂ ।
ಯಯೋರ್ನೇತ್ರಪ್ರಭಾಲೋಕೈರ್ಗುಹಾ ಭಿನ್ನೇವ ಲಕ್ಷ್ಯತೇ ॥ ೧೭ ॥

ಅಯಂ ದ್ವೀಪೀ ಪ್ರಿಯಾಂ ಲೇಢಿ ಜಿಹ್ವಾಗ್ರೇಣ ಪುನಃ ಪುನಃ ।
ಪ್ರೀತಿಮಾಯಾತಿ ಮಹತೀಂ ಲಿಹ್ಯಮಾನಶ್ಚ ಕಾಂತಯಾ ॥ ೧೮ ॥

ಉತ್ಸಂಗಕೃತಮೂರ್ಧಾನಂ ನಿದ್ರಾಪಹೃತಚೇತಸಂ ।
ಜಂತೂದ್ಧರಣತಃ ಕಾಂತಂ ಸುಖಯತ್ಯೇವ ವಾನರೀ ॥ ೧೯ ॥

---

೧೬. ಕಾಡಾನೆಯ ಕುಂಭಸ್ಥಳವನ್ನು ಬಗೆದು ತಿಂದು ತೃಪ್ತವಾದ ಸಿಂಹ ಯುವಕನು ತನ್ನ ಕಾಂತೆಯ ಚರಣಗಳೆಂಬ ಆವರಣದಲ್ಲಿ ತನ್ನ ಮುಖವನ್ನು ಹಾಕಿಕೊಂಡು ಮಲಗಿ ನಿದ್ದೆಮಾಡುವ ಸೊಬಗನ್ನು ನೋಡು! ಸಾವಿತ್ರಿ!

೧೭. ಬೆಟ್ಟಗಳ ಬುಡದಲ್ಲಿ ಬಿದ್ದಿರುವ ಆನೆಯ ಜೋಡಿಗಳನ್ನು ನೋಡು. ಅವುಗಳ ನೇತ್ರಪ್ರಭೆಯನ್ನು ಜನರು ನೋಡಿದುದೇ ಆದರೆ ಬೆಟ್ಟದ ಬುಡದಲ್ಲಿರುವ ಗುಹೆಗಳೆಂದು ಊಹಿಸುವುದಕ್ಕೆ ಅವಕಾಶವಾಗುವಂತೆ ಕಾಣುತ್ತವೆ.

೧೮. ತನ್ನ ಪ್ರಿಯೆಯನ್ನು ತನ್ನ ಸೊಂಡಲಿನ ತುದಿಯಿಂದ ಪದೇ ಪದೇ ನೆಕ್ಕುತ್ತಿರುವ ಈ ಆನೆಯನ್ನು ನೋಡು. ತನ್ನ ಗಂಡನು ತನ್ನನ್ನು ನೆಕ್ಕುವುದನ್ನು ನೋಡಿ ಹೆಣ್ಣಾನೆಯೂ ಸಹ ತನ್ನ ಗಂಡನನ್ನು ನೆಕ್ಕುತ್ತಿರುವುದು. ಪ್ರೇಯಸಿಯು ತನ್ನನ್ನು ನೆಕ್ಕುವುದನ್ನು ನೋಡಿ ಗಂಡಾನೆಯು ಎಷ್ಟು ಪ್ರೀತಿಯಿಂದಿರುವುದು; ಕಂಡೆಯಾ?

೧೯. ತನ್ನ ತೊಡೆಯ ಮೇಲೆ ಮಲಗಿಕೊಂಡು ಆನಂದದಿಂದ ಮೈಮರೆತು ನಿದ್ದೆಮಾಡುತಲಿರುವ ತನ್ನ ಪ್ರಿಯ (ಗಂಡುಕಪಿ)ನ ತಲೆಯಲ್ಲಿರುನ ಹೇನನ್ನು ತೆಗೆಯುತ್ತಾ ತನ್ನ ಪತಿಯನ್ನು ಮತ್ತೂ ಸುಖಪಡಿಸುತ್ತಿರುವ ಆ ಹೆಣ್ಣುಕಪಿಯನ್ನು ನೋಡು.

ಭೂಮೌನಿಪತಿತಾ ಕಾಂತಂ ಮಾರ್ಜಾರೀ ದರ್ಶಿತೋದರಾ ।
ನಖೈರ್ದಂತೈಸ್ತುದತ್ಯೇಷಾ ನ ಚ ಪೀಡಯತೇ ತಥಾ ॥ ೨೦ ॥

ಶಶಕಃ ಶಶಿಕಾ ಚೋಭೇ ಸಂಸುಪ್ತೇ ಪೀಡಿತೇ ಇಮೇ ।
ಸಂಲೀನಗಾತ್ರಚರಣೇ ಕರ್ಣೈರ್ವ್ಯಕ್ತಿಮುಪಾಗತೇ ॥ ೨೧ ॥

ಸ್ನಾತಂ ಸರಸಿ ಪದ್ಮಾಢ್ಯೇ ವಾರಣಂ ಮದಮಂಥರಂ ।
ಸಂಭಾವಯತಿ ತನ್ವಂಗಿ ಮೃಣಾಲಶಕಲೈರ್ವಶಾ ॥ ೨೨ ॥

ಕಾಂತಪೋತ್ರಸಮುತ್ಖಾತೈಃ ಕಾಂತಾ ಮಾರ್ಗಾನುಸಾರಿಣೀ ।
ಕರೋತಿ ಕವಲಂ ಮುಸ್ತೈರ್ವರಾಹೀ ಪೋತಕಾನನೇ ॥ ೨೩ ॥

---

೨೦. ಹೆಣ್ಣುಬೆಕ್ಕು ನೆಲದ ಮೇಲೆ ಮಲಗಿಕೊಂಡು ತನ್ನ ಕಾಂತನಿಗೆ ತನ್ನ ಹೊಟ್ಟೆಯನ್ನು ತೋರಿಸುತ್ತಿರುವುದು. ಮತ್ತು ತನ್ನ ಗಂಡನನ್ನು ಉಗುರುಗಳಿಂದಲೂ ಹಲ್ಲುಗಳಿಂದಲೂ ಪರಚುತ್ತಲೂ ಕಚ್ಚುತ್ತಲೂ ಇದ್ದಾಗ್ಯೂ ಸ್ವಲ್ಪವೂ ಹಿಂಸೆಯಾಗದಂತೆ ಮಾಡುತ್ತಿರುವ ನೋಟವನ್ನು ನೋಡು

೨೧. ಗಂಡುಹೆಣ್ಣುಮೊಲಗಳೆರಡೂ ಒಂದಕ್ಕೊಂದು ಹೊಂದಿಕೊಂಡು ಕರಚರಣಾದ್ಯವಯವಗಳನ್ನು ತಮ್ಮಲ್ಲಿಯೇ ಅಡಗಿಸಿಕೊಂಡು ಕಿವಿಗಳನ್ನು ಮಾತ್ರ ಹೊರಗೆ ಕಾಣುವಂತೆ ಮಾಡಿ ಮಲಗಿರುವ ಈ ನೋಟವನ್ನು ನೋಡು.

೨೨. ಪದ್ಮಗಳಿಂದ ತುಂಬಿರುವ ಸರೋವರದಲ್ಲಿ ಸ್ನಾನಮಾಡಿ ಮೇಲಕ್ಕೆದ್ದು ನಿಂತಿರುವ ಮದಗಜವು ಮದೋದಕ ಧಾರೆಯನ್ನು ಸುರಿಸುತ್ತಾ ತಾವರೆದಂಟುಗಳಿಗೆ ವಶವಾಗಿ ತನ್ನನ್ನು ತಾನೇ ಸಂಭಾವಿಸಿಕೊಂಡು ಸಂತೋಷವಾಗಿರುವುದನ್ನು ನೋಡಿದೆಯಾ ? ಸಾವಿತ್ರಿ !

೨೩. ಗಂಡುಹಂದಿಯು ತನ್ನ ಮೂತಿಯಿಂದ ಕೆರೆದುಕೊಂಡು ಹೋಗುತ್ತಿರುವ ನೆಲದ ಜಾಡನ್ನೇ ನೋಡಿಕೊಂಡು ಹೋಗುತ್ತಾ ತನ್ನ ಮರಿಗಳಿಗೆ ಆ ದಾರಿಯಲ್ಲಿ ದೊರೆಯುವ ಕೊನ್ನಾರಿಗೆಡ್ಡೆಯನ್ನು ಆಹಾರವಾಗಿ ಒದಗಿಸುತ್ತಿರುವ ಹೆಣ್ಣುಹಂದಿಯನ್ನು ನೋಡಿದೆಯಾ ?

ದೃಢಾಂಗಸಂಧಿರ್ಮಹಿಷಃ ಕರ್ದಮಾರ್ದ್ರತನುರ್ವನೇ ।
ಅನುವ್ರಜತಿ ಧಾವಂತೀಂ ಪ್ರಿಯಾಂ ಬದ್ಧಚತುಷ್ಕಕಃ　　॥ ೨೪ ॥

ಪಶ್ಯ ಚಾರ್ವಂಗಿ ಸಾರಂಗಂ ತ್ವತ್ಕಟಾಕ್ಷನಿಭಂ ವನೇ ।
ಸಭಾರ್ಯಾಂ ಮಾಂ ತು ಪಶ್ಯಂತಂ ಕೌತೂಹಲಸಮನ್ವಿತಂ　　॥ ೨೫ ॥

ಪಶ್ಯ ಪಶ್ಚಿಮಪಾದೇನ ರೋಹೀ ಕಂಡೂಯತೇ ಮುಖಂ ।
ಸ್ನೇಹಾರ್ದ್ರಭಾವಃ ಕಷತಿ ಭರ್ತ್ರಾ ಶೃಂಗಾಗ್ರಕೋಟಿನಾ　　॥ ೨೬ ॥

ದಾಡಿಮೇ ಚಮರೀಂ ಪಶ್ಯ ಸಿತವಾಲಾಮಗಚ್ಛತೀಂ ।
ಅನ್ವಾಸ್ತೇ ಚಮರಃ ಕಾಮೀ ವೀಕ್ಷತೇ ಮಾಂ ಚ ಗರ್ವಿತಃ　　॥ ೨೭ ॥

---

೨೪. ಒರಟಾದ ಮೈಯುಳ್ಳ ಕೋಣವು ಕೆಸರನ್ನೆಲ್ಲಾ ಮೈಗೆ ಬಳಿದುಕೊಂಡು ಕೆಸರುಕುಂಟೆಯಲ್ಲಿ ಬಿದ್ದು ಹೊರಳಾಡುತ್ತಾ ಮೇಲೆ ಓಡಿಹೋಗುತ್ತಿರುವ ಎಮ್ಮೆಯನ್ನು ನೋಡಿ ಪ್ರೇಮಾವೇಶದಿಂದ ಆ ಕುಂಟೆಯನ್ನು ಬಿಟ್ಟು ಮೇಲಕ್ಕೆದ್ದು ಎಮ್ಮೆಯ ಹಿಂದೆ ಓಡಿಹೋಗುತ್ತಿರುವುದನ್ನು ನೋಡು.

೨೫. ಸಾವಿತ್ರೀ! ಸಾವಿತ್ರೀ! ಇಲ್ಲಿ ನೋಡು. ನಿನ್ನ ಕಡೆ ಕಣ್ನೋಟದಂತಿರುವ ತನ್ನ ಕಟಾಕ್ಷದಿಂದ ಬಹು ಕುತೂಹಲದಿಂದ ಕೂಡಿ ನಿನ್ನನ್ನೂ ನಿನ್ನೊಡನಿರುವ ನನ್ನನ್ನೂ ನೋಡುತ್ತ ನಿಂತಿರುವ ಈ ಜಿಂಕೆಯನ್ನು ನೋಡು.

೨೬. ತನ್ನ ಹಿಂಗಾಲಿನಿಂದ ಅಲ್ಲಿ ನಿಂತಿರುವ ಹುಲ್ಲೆಯು ತನ್ನ ಮುಖವನ್ನು ಹೇಗೆ ಕೆರೆದುಕೊಳ್ಳುತ್ತಾ ನಿಂತಿದೆ. ನೋಡು, ಅದನ್ನು ನೋಡಿ ಸ್ನೇಹಾರ್ದ್ರಭಾವದಿಂದ ಮತ್ತೊಂದು ಹುಲ್ಲೆಮರಿಯು ತನ್ನ ಕೊಂಬಿನ ತುದಿಯಿಂದ ಅದನ್ನು ಕೆರೆಯುತ್ತಿರುವುದನ್ನು ನೋಡು.

೨೭. ಬೆಳ್ಳಗಿರುವ ಬಾಲವುಳ್ಳ ಈ ಹೆಣ್ಣು ಚಮರೀಮೃಗವು ಎಲ್ಲೂ ಹೋಗದೆ ಸುಮ್ಮನೆ ನಿಂತಿರುವುದನ್ನು ನೋಡು. ಅದರ ಬಳಿಯಲ್ಲಿ ಕಾಮಿಯಾದೊಂದು ಗಂಡು ಚಮರೀಮೃಗವು ಹೆಣ್ಣು ಚಮರಿಯನ್ನು ಅನುಸರಿಸಿಕೊಂಡು ಅದನ್ನು ನೋಡುತ್ತಿರುವಾಗ ಮಧ್ಯ ಮಧ್ಯದಲ್ಲಿ ಬಹು ಗರ್ವದಿಂದ ನನ್ನನ್ನೂ ಒಮ್ಮೆ ನೋಡುತ್ತಿರುವುದನ್ನು ನೋಡಿದೆಯಾ?

**ಆತಪೇ ಗವಯಃ ಪಶ್ಯ ನಿವಿಷ್ಟೋ ಭಾರ್ಯಯಾ ಸಹ ।**
**ರೋಮಂಥಮಾಸ್ಯೇ ಕುರ್ವಾಣಃ ಕಾಕಂ ಕಕುದಿ ಧಾರಯನ್ ॥ ೨೮ ॥**

**ಪಶ್ಯಾಜಂ ಭಾರ್ಯಯಾ ಸಾರ್ಧಂ ನ್ಯಸ್ತಾಗ್ರಚರಣದ್ವಯಂ ।**
**ವಿಪುಲೇ ಬದರೀಸ್ಕಂಧೇ ತಚ್ಛದಗ್ರಾಸಕಾಮ್ಯಯಾ ॥ ೨೯ ॥**

**ಹಂಸಂ ಸಭಾರ್ಯಂ ಸರಸಿ ವಿಚರಂತಂ ಸುನಿರ್ಮಲೇ ।**
**ಸುಶುಕ್ಲಸ್ಯೇಂದುಬಿಂಬಸ್ಯ ಪಶ್ಯೈನಂ ಸದೃಶಶ್ರಿಯಂ ॥ ೩೦ ॥**

**ಸಭಾರ್ಯಶ್ಚಕ್ರವಾಕೋಽಯಂ ಕಮಲಾಕರಮಧ್ಯಗಃ ।**
**ಕರೋತಿ ಪದ್ಮಿನೀಂ ಕಾಂತಾಂ ಸಪುಷ್ಪಾಮಿವ ಸುಂದರಿ ॥ ೩೧ ॥**

---

೨೮. ಇಲ್ಲಿ ತನ್ನ ಕಾಂತೆಯೊಡನೆ ಕೂಡಿ ಮಲಗಿರುವ ಕಾಡೆತ್ತನ್ನು ನೋಡು. ಇದು ಉರಿಬಿಸಿಲಿನಲ್ಲಿ ಮಲಗಿ ಮೆಲ್ಲಮೆಲ್ಲಗೆ ಮೆಲಕು ಹಾಕುತ್ತಾ ತನ್ನ ಹೆಗ್ಗತ್ತಿನ ಮೇಲೆ ಕಾಗೆಯೊಂದನ್ನು ಕೂಡಿಸಿಕೊಂಡು ಎಷ್ಟು ಆನಂದದಿಂದ ಮಲಗಿದೆ; ನೋಡಿದೆಯಾ ?

೨೯. ಈ ಎಲಚೀಮರದ ವಿಸ್ತಾರವಾದ ಕೊಂಬೆಯ ಮೇಲಿರುವ ಸಪ್ಪನ್ನು ತಿನ್ನುವುದಕ್ಕಾಗಿ ಕಾಂತೆಯೊಡನೆ ತನ್ನೆರಡು ಕಾಲನ್ನೂ ಮೇಲಕ್ಕೆತ್ತಿಕೊಂಡು ನಿಂತಿರುವ ಆಡನ್ನು ನೋಡು.

೩೦. ಬಹು ಶುಭ್ರವಾದ ಚಂದ್ರಬಿಂಬದಂತೆ ಪ್ರಕಾಶಿಸುತ್ತಿರುವ ಈ ಹಂಸವು ತನ್ನ ಕಾಂತೆಯೊಡನೆ ಸೇರಿ ನಿರ್ಮಲೋದಕವುಳ್ಳ ಸರೋವರದಲ್ಲಿ ಹೇಗೆ ಈಜುತ್ತಿರುವುದು ; ನೋಡು !

೩೧. ಈ ಕಮಲಾಕರ (ಕೊಳ)ದ ಮಧ್ಯದಲ್ಲಿ ಕಾಂತೆಯೊಡನೆ ಕೂಡಿಕೊಂಡಿರುವ ಚಕ್ರವಾಕಪಕ್ಷಿದ್ವಯವನ್ನು ನೋಡಿದರೆ ಮನೋಹರಳಾದ ಪದ್ಮಿನಿಯೆಂಬ ಕಾಂತೆಯನ್ನು ಪುಷ್ಪಸಹಿತಳನ್ನಾಗಿ (ಪುಷ್ಪಿಣಿ) ಮಾಡುತ್ತಿರುವಂತೆ ತೋರುವುದಲ್ಲವೆ? (ಅಂದರೆ ಅರಳಿರುವ ಕಮಲದ ಹೂವಿನಿಂದ ಪ್ರಕಾಶಿಸುತ್ತಿರುವ ತಾವರೇಗಿಡವನ್ನು ಕುರಿತು ಕವಿಯು ಇಂತು ಉತ್ಪ್ರೇಕ್ಷಿಸಿರುವನೆಂದು ತಿಳಿಯಬೇಕು.)

ಮಯಾ ಫಲೋಚ್ಚಯಃ ಸುಭ್ರು ತ್ವಯಾ ಪುಷ್ಪೋಚ್ಚಯಃ ಕೃತಃ ।
ಇಂಧನಂ ನ ಕೃತಂ ಕಿಂಚಿತ್ತತ್ಕರಿಷ್ಯಾಮಿ ಸಾಂಪ್ರತಂ　　॥ ೩೨ ॥

ತ್ವಮಸ್ಯ ಸರಸಸ್ತೀರೇ ದ್ರುಮಚ್ಛಾಯಾಮುಪಾಶ್ರಿತಾ ।
ಕ್ಷಣಮಾತ್ರಂ ಪ್ರತೀಕ್ಷಸ್ವ ವಿಶ್ರಮಸ್ವ ಚ ಭಾಮಿನಿ　　॥ ೩೩ ॥

ಸಾವಿತ್ರ್ಯುವಾಚ

ಏವಮೇತತ್ಕರಿಷ್ಯಾಮಿ ಮಮ ದೃಷ್ಟಿಪಥಾತ್ತ್ವಯಾ ।
ದೂರೇ ಕಾಂತ ನ ಗಂತವ್ಯಂ ಬಿಭೇಮಿ ಗಹನೇ ವನೇ　　॥ ೩೪ ॥

---

೩೨. ಸಾವಿತ್ರಿ ! ಇದುವರಿಗೆ ನಾನು ಫಲೋಚ್ಚಯವನ್ನು ಮಾಡಿಯಾಯಿತು. (ಹಣ್ಣು ಕುಯ್ದುದ್ದಾಯಿತು). ನೀನು ಪುಷ್ಪೋಚ್ಚಯವನ್ನು ಮಾಡಿದೀಯೆ? (ಹೂಗಳನ್ನು ಸಂಪಾದಿಸಿದ್ದೀಯೆ). ಪುಷ್ಪಿಣಿಯಾದ (ಪುಷ್ಪವತಿ) ಸ್ತ್ರೀಯಲ್ಲಿ ಫಲೋತ್ಪತ್ತಿ ಮಾಡುವ ಒಂದು ಧ್ವನಿಯು ಇಲ್ಲಿ ಭಾವದಿಂದ ತೋರುತ್ತದೆ. ಸಾವಿತ್ರೀ! ಹೂವು ಹಣ್ಣುಗಳೆರಡರ ಕೆಲಸವಾದಂತಾಯಿತು. ನಾನು ಇನ್ನು ಸ್ವಲ್ಪ ಸೌದೆಯನ್ನು ತರಬೇಕಾಗಿದೆ.

೩೩. ಸಾವಿತ್ರೀ! ನೀನು ಇಲ್ಲೇ ಸಮೀಪದಲ್ಲಿನ ಈ ಕೊಳದ ದಡದಲ್ಲಿರುವ ಮರದ ನೆರಳಿನಲ್ಲಿ ಒಂದು ಕ್ಷಣಕಾಲ ವಿಶ್ರಮಿಸಿಕೊಳ್ಳುತ್ತಾ ನಾನು ಬರುವುದನ್ನೇ ಎದುರುನೋಡುತ್ತಿರು.

೩೪. ಸಾವಿತ್ರಿಯು ಹೇಳುತ್ತಾಳೆ.—ಪ್ರಾಣಕಾಂತ! ನೀನು ಹೇಳಿದಂತೆ ನಾನು ವಿಶ್ರಮಿಸಿಕೊಳ್ಳುತ್ತಾ ಕುಳಿತಿರುವೆನು. ಆದರೆ ನೀನು ಬಲುದೂರ ಹೋಗಕೂಡದು. ನನ್ನ ಕಣ್ಣಿಗೆ ಕಾಣಿಸುವಷ್ಟು ದೂರದಲ್ಲಿಯೇ ನೀನು ಸೌದೆಯನ್ನು ತರಬೇಕು. ನೀನು ದೂರ ಹೊರಟುಹೋದರೆ ಈ ಕಗ್ಗಾಡಿನಲ್ಲಿ ನನಗೆ ಬಲು ದಿಗಿಲಾಗುತ್ತದೆ.

ಪುಷ್ಕರ ಉವಾಚ

ತಸ್ಯ ಪಾತಯತಃ ಕಾಷ್ಠಂ ಜಜ್ಞೇ ಶಿರಸಿ ವೇದನಾ ।
ಸ ವೇದನಾರ್ತಃ ಸಂಗಮ್ಯ ಭಾರ್ಯಾಂ ವಚನಮಬ್ರವೀತ್ ॥ ೩೫ ॥

ಸತ್ಯವಾನುವಾಚ

ಆಯಾಸೇನ ಮಮಾನೇನ ಜಾತಾ ಶಿರಸಿ ವೇದನಾ ।
ತಮಶ್ಚ ಪ್ರವಿಶಾಮೀವ ನ ಚ ಜಾನಾಮಿ ಕಿಂಚನ ॥ ೩೬ ॥

ತ್ವದುತ್ಸಂಗೇ ಶಿರಃ ಕೃತ್ವಾ ನಿದ್ರೋಪಹತಲೋಚನಃ ।

ಪುಷ್ಕರ ಉವಾಚ

ತದುತ್ಸಂಗ ಶಿರಃ ಕೃತ್ವಾ ಸುಷ್ವಾಪಗತಚೇತನಃ ॥ ೩೭ ॥

---

೩೫. ಪುಷ್ಕರನು ಪರಶುರಾಮನೊಡನೆ ಹೇಳಿದುದೇನೆಂದರೆ ;—ಕೇಳಯ್ಯಾ ! ಪರಶುರಾಮ ! ಸತ್ಯವಂತನು ತನ್ನ ಹೆಂಡತಿಯನ್ನು ಕುರಿತು ನೀನು ಹೇಳಿದಂತೆಯೇ ಆಗಲೆಂದು ಅವಳನ್ನೊಡಂಬಡಿಸಿ ಸೌದೆಯನ್ನು ತರುವುದಕ್ಕಾಗಿ ಹೊರಟನು. ಮರದಲ್ಲಿ ಸೌದೆಯನ್ನು ಮುರಿಯುತ್ತಿರುವಾಗ ಅವನಿಗೆ ಇದ್ದಕ್ಕಿದ್ದ ಹಾಗೆಯೇ ತಲೆನೋವಿಗೆ ಆರಂಭವಾಯಿತು. ತಲೆನೋವನ್ನು ತಡೆಯಲಾರದೆ ಹಿಂದಕ್ಕೆ ಬಂದು ಸಾವಿತ್ರಿಯೊಡನೆ ಇಂತು ಹೇಳಿದನು.

೩೬. ಸತ್ಯವಂತನು ಹೇಳುತ್ತಾನೆ.—ಸಾವಿತ್ರಿ ! ಏಕೋ ನನಗೆ ಬಹು ಆಯಾಸವಾಗುತ್ತಲಿದೆ. ತಲೆನೋವು ಬಹು ಹೆಚ್ಚಾಗಿದೆ. ಕಣ್ಣುಗತ್ತಲೆ ಹಿಡಿದಂತಾಗಿದೆ ; ಏನೇನೂ ಕಾಣಿಸುವುದಿಲ್ಲ.

೩೭. ಸ್ವಲ್ಪಹೊತ್ತು ನಿನ್ನ ತೊಡೆಯಮೇಲೆ ಮಲಗಿ ನಿದ್ದೆಮಾಡುತ್ತೇನೆ. ಕಣ್ಣುಬಿಗಿಯುತ್ತಾ ಇದೆ. ಹೀಗೆಂದು ಹೇಳಿ ಸಾವಿತ್ರಿಯ ತೊಡೆಯ ಮೇಲೆ ತನ್ನ ತಲೆಯನ್ನಿಟ್ಟುಕೊಂಡು ಸತ್ಯವಂತನು ಮಲಗಿಕೊಂಡೊಡನೆಯೇ ಅವನ ಪ್ರಾಣವಾಯುವು ಹಾರಿಹೋಯಿತು. ಕೇಳಿದೆಯೇನಯ್ಯಾ ! ಪರಶುರಾಮ ! ಹೀಗೆಂಬುದಾಗಿ ಪುಷ್ಕರನು ಸತ್ಯವಂತನ ಮರಣಕ್ಕೆ ಆಶ್ಚರ್ಯವನ್ನು ಸೂಚಿಸುತ್ತಾ ಮುಂದಿನ ಕಥೆಯನ್ನು ವಿವರಿಸಿದ ಬಗೆಯದೆಂತನೆ:—

ಪತಿವ್ರತಾ ಮಹಾಭಾಗಾ ತತಸ್ಸಾ ರಾಜಕನ್ಯಕಾ ।
ದದರ್ಶ ಧರ್ಮರಾಜಂ ತು ಸ್ವಯಂ ತಂ ದೇಶಮಾಗತಂ ॥ ೩೮ ॥

ನೀಲೋತ್ಪಲದಲಶ್ಯಾಮಂ ಪೀತಾಂಬರಧರಂ ಪ್ರಭುಂ ।
ವಿದ್ಯುಲ್ಲತಾನಿಬದ್ಧಾಂಗಂ ಸತೋಯಮಿವ ತೋಯದಂ ॥ ೩೯ ॥

ಕಿರೀಟೇನಾರ್ಕವರ್ಣೇನ ಕುಂಡಲಾಭ್ಯಾಂ ವಿರಾಜಿತಂ ।
ಹಾರಭಾರಾರ್ಪಿತೋರಸ್ಕಂ ತಥಾಂಗದವಿಭೂಷಿತಂ ॥ ೪೦ ॥

ತಥಾನುಗಮ್ಯಮಾನಂ ಚ ಕಾಲೇನ ಸಹ ಮೃತ್ಯುನಾ ।
ಸ ತು ಸಂಪ್ರಾಪ್ಯ ತಂ ದೇಶಂ ದೇಹಾತ್ಸತ್ಯವತಸ್ತದಾ ॥ ೪೧ ॥

---

೩೮. ಪರಶುರಾಮ! ಮುಂದಿನ ವಿಚಿತ್ರವನ್ನು ಕೇಳು. ಆ ಸಾವಿತ್ರಿಯು ಸಾಮಾನ್ಯಳೆಂದು ಭಾವಿಸಬೇಡ. ಆಕೆಯು ಮಹಾರಾಜನ ಮಗಳು, ಮತ್ತು ಮಹಾ ಪತಿವ್ರತೆಯು. ಆಕೆಯ ಕಣ್ಣಿಗೆ ಆಗ ತನ್ನ ಗಂಡನ ಪ್ರಾಣವನ್ನು ತೆಗೆದುಕೊಂಡು ಹೋಗಲು ತಾನೇ ಸಾಕ್ಷಾತ್ತಾಗಿ ಅಲ್ಲಿಗೆ ಬಂದಿದ್ದ ಯಮಧರ್ಮರಾಜನ ಸಂದರ್ಶನ ವಾಯಿತು.

೩೯-೪೦. ಆ ಯಮನು ಹೇಗಿದ್ದನೆಂದರೆ:—ನೀಲೋತ್ಪಲ ದಳದಂತೆ ಶ್ಯಾಮಲ ವರ್ಣದಿಂದ ಕೂಡಿದ್ದನು. ಪೀತಾಂಬರವನ್ನು ಧರಿಸಿದ್ದನು. ನೀರಿನಿಂದ ತುಂಬಿದ ಮೋಡದಂತೆ ಅವನು ವಿದ್ಯುಲ್ಲತೆಗಳಿಂದ ತನ್ನ ಅಂಗಗಳನ್ನು ಬಿಗಿದುಕೊಂಡಿದ್ದನು. ಸೂರ್ಯನಂತೆ ಹೊಳೆಹೊಳೆಯುತ್ತಿರುವ ಕಿರೀಟವನ್ನು ಧರಿಸಿದ್ದನು. ವಜ್ರಖಚಿತವಾದ ಕುಂಡಲಗಳು ಕರ್ಣಗಳಲ್ಲಿ ಶೋಭಿಸುತಲಿದ್ದುವು. ಅವನ ವಕ್ಷಸ್ಥಳದಲ್ಲಿ ಅನೇಕ ವಿಧವಾದ ಹಾರಗಳು ಶೋಭಿಸುತ್ತಿದ್ದುವು. ಮತ್ತು ಅಂಗದಗಳೂ ಪ್ರಕಾಶಿಸುತ ಲಿದ್ದುವು.

೪೧-೪೩. ಹೀಗೆ ಪ್ರಕಾಶಿಸುತ್ತಿದ್ದ ಯಮನು ತನ್ನ ಜತೆಯಲ್ಲಿ ಕಾಲಮೃತ್ಯು ವನ್ನು ಕರೆದುಕೊಂಡು ಅಲ್ಲಿಗೆ ಬಂದು ಸತ್ಯವಂತನ ದೇಹದೊಳಡಗಿದ್ದ ಒಂದು ಅಂಗುಲ ಮಾತ್ರದ ಒಂದು ಬೊಂಬೆಯಂತಿದ್ದ ಸೂಕ್ಷ್ಮದೇಹವನ್ನು ಈಚೆಗೆ ಎಳೆದು ಅದನ್ನು

ಅಂಗುಷ್ಠಮಾತ್ರಂ ಪುರುಷಂ ಪಾಶಬದ್ಧಂ ವಶಂಗತಂ ।
ಆಕೃಷ್ಯ ದಕ್ಷಿಣಾಮಾಶಾಂ ಪ್ರಯಯೌ ಸತ್ವರಂ ತದಾ ॥ ೪೨ ॥

ಸಾವಿತ್ರ್ಯಪಿ ವರಾರೋಹಾ ತ್ಯಕ್ತ್ವಾ ತಂ ಗತಜೀವಿತಂ ।
ಅನುವವ್ರಾಜ ಗಚ್ಛಂತಂ ಧರ್ಮರಾಜಮತಂದ್ರಿತಾ ॥ ೪೩ ॥

ತಾಮುವಾಚ ಯಮೋ ಗಚ್ಛ ಯಥಾಗತಮನಿಂದಿತೇ ।
ಔರ್ಧ್ವದೈಹಿಕಕಾರ್ಯೇಷು ಯುಕ್ತಾ ಭರ್ತುಃ ಸಮಾಚರ ॥ ೪೪ ॥

ನಾನುಗಂತುಮಸೌ ಶಕ್ಯಸ್ತ್ವಯಾ ಲೋಕಾಂತರಂ ಗತಃ ।
ಪತಿವ್ರತಾಽಸಿ ತೇನ ತ್ವಂ ಮುಹೂರ್ತಮನುಪಶ್ಯಸಿ ॥ ೪೫ ॥

---

ತಾನು ತಂದಿದ್ದ ಹಗ್ಗದಿಂದ ಬಿಗಿದು ಕಟ್ಟಿಹಾಕಿದನು. ಆ ಬಳಿಕ ಆ ದೇಹವನ್ನು ಎತ್ತಿಕೊಂಡು ದಕ್ಷಿಣದಿಕ್ಕಿನ ಕಡೆಗೆ ಬೇಗಬೇಗನೆ ಹೆಜ್ಜೆಹಾಕುತ್ತಾ ಹೊರಟೇಬಿಟ್ಟನು.

೪೩. ಯಮನು ಮಾಡಿದ ಈ ಕೆಲಸವನ್ನೆಲ್ಲಾ ಆ ಮಹಾಪತಿವ್ರತಾ ಶಿರೋಮಣಿಯಾದ ಸಾವಿತ್ರಿಯು ತನ್ನ ಪಾತಿವ್ರತ್ಯಪ್ರಭಾವದಿಂದ ಕಣ್ಣಾರೆನೋಡಿದಳು. ಯಮನು ಆ ಪ್ರದೇಶದಿಂದ ದಕ್ಷಿಣದ ಕಡೆ ಹೊರಟೊಡನೆಯೇ ಪ್ರಾಣಹೋದ ಗಂಡನ ದೇಹವನ್ನು ಅಲ್ಲಿಯೇ ನೆಲದ ಮೇಲೆ ಮಲಗಿಸಿ ಆ ಧರ್ಮರಾಜನ ಹಿಂದೆ ಆ ಸಾವಿತ್ರಿಯೂ ಸಹ ಸ್ಥೂಲದೇಹದಿಂದಲೇ ಅವನನ್ನನುಸರಿಸಿ ಹೊರಟುಬಿಟ್ಟಳು.

೪೪. ಸಾವಿತ್ರಿಯು ಮನುಜದೇಹದಿಂದಲೇ ತನ್ನನ್ನನುಸರಿಸಿ ಹಿಂದೆ ಬಂದುದನ್ನು ನೋಡಿ ಯಮಧರ್ಮರಾಯನು ಇಂತು ಹೇಳಿದನು :—ಓ ಸಾಧ್ವಿಯೆ ! ನನ್ನ ಹಿಂದೆ ನನ್ನನ್ನನುಸರಿಸಿ ನೀನು ಬರಬೇಡ. ಹಿಂದಕ್ಕೆ ಹೊರಟುಹೋಗು. ನಿನ್ನ ಗಂಡ ಸತ್ತುಹೋಗಿದಾನೆ. ಅವನ ದೇಹಕ್ಕೆ ಸಂಸ್ಕಾರಮಾಡಿ ಅಪರಕರ್ಮಗಳನ್ನು ಮಾಡು, ಹೋಗು.

೪೫. ನಿನ್ನ ಗಂಡನಿಗೆ ಭೂಲೋಕಸಂಬಂಧವು ತಪ್ಪಿ ಲೋಕಾಂತರಕ್ಕೆ ಬಂದುಬಿಟ್ಟಿದಾನೆ. ಅವನನ್ನನುಸರಿಸಿ ಬರಲು ನಿನ್ನಿಂದ ಸಾಧ್ಯವಿಲ್ಲ. ನೀನು ಮಹಾ ಪತಿವ್ರತೆಯಾದ್ದರಿಂದ ನಿನಗೆ ಒಂದು ಮುಹೂರ್ತಕಾಲದವರಿಗೆ ಈ ದೃಶ್ಯವನ್ನು ನೋಡಲು ಸಾಧ್ಯವಾಯಿತೇ ಹೊರತು ಇತರರಾರಿಗೂ ಇದು ಸಾಧ್ಯವಾದುದಲ್ಲ.

**ಗುರುಶುಶ್ರೂಷಣಾದ್ಭದ್ರೇ ತಥಾ ಸತ್ಯವತೋ ಮಹತ್ ।**
**ಪುಣ್ಯಂ ಸಮುರ್ಜಿತಂ ಯೇನ ನಯಾಮ್ಯೇನಮಹಂ ಸ್ವಯಂ ॥ ೪೬ ॥**

**ಏತಾವದೇವ ಕರ್ತವ್ಯಂ ಪುರುಷಸ್ಯ ವಿಜಾನತಃ ।**
**ಮಾತುಃ ಪಿತುಶ್ಚ ಶುಶ್ರೂಷಾ ಗುರೋಶ್ಚ ವರವರ್ಣಿನಿ ॥ ೪೭ ॥**

**ಗುರುತ್ರಿತಯಮೇತಚ್ಚ ಸದಾ ಸತ್ಯವತಾ ವನೇ ॥ ೪೮ ॥**

**ಪೂಜಿತಂ ಪೂಜಿತಸ್ಸ್ವರ್ಗಸ್ತದಾಽನೇನ ಚಿರಂ ಶುಭೇ ।**
**ತಪಸಾ ಬ್ರಹ್ಮಚರ್ಯೇಣ ತ್ವಗ್ನಿಶುಶ್ರೂಷಯಾ ತಥಾ ॥ ೪೯ ॥**

---

೪೬. ಸಾವಿತ್ರೀ! ಕೇಳು. ಯಾರಾದರೂ ಸತ್ತರೆ ನಾನೇ ಬಂದು ತೆಗೆದು ಕೊಂಡು ಹೋಗಬೇಕಾದುದಿಲ್ಲ. ಅದಕ್ಕಾಗಿ ಕಾಲಮೃತ್ಯುವನ್ನು ನೇಮಿಸಿದ್ದೇನೆ. ಈಗ ನನಗೆ ಇಲ್ಲಿಗೆ ಬರಬೇಕಾದ ಕೆಲಸವಿಲ್ಲವಾದರೂ, ಮಹಾಪುಣ್ಯವಂತರಾದ ಜನರನ್ನು ತೆಗೆದುಕೊಂಡು ಹೋಗಲು ಕಾಲಮೃತ್ಯುವೂ ಸಹ ಹೆದರುವುದರಿಂದ ನಾನು ಅಂತಹ ಪುಣ್ಯವಂತರ ಜೀವವನ್ನು ತೆಗೆದುಕೊಂಡು ಹೋಗುವಾಗ ಇವನ (ಕಾಲಮೃತ್ಯುವಿನ) ಜತೆಯಲ್ಲಿ ಬರಬೇಕಾಗುತ್ತದೆ. ಈ ನಿನ್ನ ಗಂಡನಾದ ಸತ್ಯವಂತನು ಗುರುಶುಶ್ರೂಷೆಯಿಂದ ಮಹತ್ತರವಾದ ಪುಣ್ಯವನ್ನು ಸಂಪಾದಿಸಿರುವನಾದ್ದರಿಂದ ನಾನೇ ಪ್ರತ್ಯಕ್ಷವಾಗಿ ಬಂದು ಇವನ ಜೀವವನ್ನು ಸ್ವಾಧೀನಮಾಡಿಕೊಂಡು ಹೋಗುತಲಿದೇನೆ.

೪೭. ಪುಣ್ಯವನ್ನು ಸಂಪಾದಿಸಬೇಕಾದ ಮನುಷ್ಯನು ಮಾಡಬೇಕಾದ ಕರ್ತವ್ಯ ವೇನೆಂದರೆ:—ಕೇಳು, ಸಾವಿತ್ರಿ! ಮಾತಾಪಿತೃಗಳ ಮತ್ತು ಗುರುಗಳ ಶುಶ್ರೂಷೆ ಯನ್ನು ಯಾರು ಭಕ್ತಿಯಿಂದ ಮಾಡುವರೋ ಅವರು ಬೇರೇ ಪುಣ್ಯಕೆಲಸ ಮಾಡ ಬೇಕಾದ್ದಿಲ್ಲ.

೪೮. ಈ ಮೂವರೂ ಗುರುತ್ರಿತಯರೆಂದು ಹೇಳಿಸಿಕೊಳ್ಳುವರು. ಇಂತಹ ಗುರುಶುಶ್ರೂಷೆಯನ್ನು ಈ ಸತ್ಯವಂತನು ಈ ಕಾಡಿನಲ್ಲಿ ಚೆನ್ನಾಗಿ ಮಾಡಿರುವನು.

೪೯. ಮತ್ತು ನಿನ್ನ ಗಂಡನಾದ ಸತ್ಯವಂತನು ಅನೇಕ ದೇವತೆಗಳನ್ನು ಪೂಜಿಸಿರುವನು. ಆ ಪೂಜಾಫಲದಿಂದ ಬಹುಕಾಲ ಸ್ವರ್ಗದಲ್ಲಿ ಅವನು ವಾಸಮಾಡು ವುದರಲ್ಲಿ ಸಂದೇಹವಿಲ್ಲ.

ಪುರುಷಾಃ ಸ್ವರ್ಗಮಾಯಾಂತಿ ಗುರುಶುಶ್ರೂಷಣೇನ ಚ ।
ಆಚಾರ್ಯಶ್ಚ ಪಿತಾ ಚೈವ ಮಾತಾ ಭ್ರಾತಾ ಚ ಪೂರ್ವಜಃ ॥ ೫೦ ॥

ನಾರ್ತೇನಾಪ್ಯವಮಂತವ್ಯಾ ಬ್ರಾಹ್ಮಣೇನ ವಿಶೇಷತಃ ।
ಆಚಾರ್ಯೋ ಬ್ರಹ್ಮಣೋ ಮೂರ್ತಿಃ ಪಿತಾ ಮೂರ್ತಿಃ ಪ್ರಜಾಪತೇಃ ॥

ಮಾತಾ ಪೃಥಿವ್ಯಾ ಮೂರ್ತಿಶ್ಚ ಭ್ರಾತಾ ವೈ ಮೂರ್ತಿರಾತ್ಮನಃ ।
ಯನ್ಮಾತಾಪಿತರೌ ಕ್ಲೇಶಂ ಸಹೇತೇ ಸಂಭವೇ ನೃಣಾಂ ॥ ೫೨ ॥

ನ ತಸ್ಯ ನಿಷ್ಕೃತಿಃ ಶಕ್ಯಾ ಕರ್ತುಂ ವರ್ಷಶತೈರಪಿ ।
ತಯೋರ್ನಿತ್ಯಂ ಪ್ರಿಯಂ ಕುರ್ಯಾದಾಚಾರ್ಯಸ್ಯ ಚ ಸರ್ವದಾ ॥ ೫೩ ॥

---

೫೦. ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಯಜ್ಞಯಾಗಾದಿಗಳಿಂದಲೂ ಗುರುಶುಶ್ರೂಷೆಯಿಂದಲೂ ಗಂಡಸರು ಸ್ವರ್ಗವನ್ನು ಹೊಂದುತ್ತಾರೆ. ಆಚಾರ್ಯನೂ ಮಾತಾಪಿತೃಗಳೂ ಜ್ಯೇಷ್ಠಭ್ರಾತೃವೂ ಸಹ ಪೂಜ್ಯರೆಂದು ಹೇಳಿಸಿಕೊಳ್ಳುವರು.

೫೧. ಎಂತಹ ಕಷ್ಟಕಾಲದಲ್ಲಿದ್ದಾಗ್ಯೂ ಮೇಲ್ಕಂಡವರನ್ನು ಪೂಜಿಸಲೇಬೇಕು. ಅದರಲ್ಲೂ ಬ್ರಾಹ್ಮಣನಾದವನಂತೂ ಅವಶ್ಯವಾಗಿ ಈ ನಾಲ್ವರನ್ನೂ ಪೂಜಿಸಲೇಬೇಕು. ಆಚಾರ್ಯನೇ ಪರಮಾತ್ಮಸ್ವರೂಪನು, ತಂದೆಯು ಬ್ರಹ್ಮಸ್ವರೂಪನು.

೫೨. ತಾಯಿಯು ಭೂಮಾತೆಗೆ ಸಮನಾದ ಪ್ರತ್ಯಕ್ಷ ಭೂದೇವಿಯು ಹಿರಿಯಣ್ಣನೂ ಸಹ ಆತ್ಮಸ್ವರೂಪನೇ ಸರಿ. ಮನುಷ್ಯರು ತಮ್ಮ ಉತ್ಪತ್ತಿಗೆ ಕಾರಣರಾದ ತಾಯಿತಂದೆಗಳು ತಮ್ಮ ಜನ್ಮಗ್ರಹಣಕ್ಕೋಸ್ಕರ ಎಷ್ಟೊಂದು ಕ್ಲೇಶವನ್ನನುಭವಿಸುತ್ತಾರೆಂಬುದನ್ನು ಯೋಚಿಸಬೇಕು.

೫೩. ಅವಳು ನಮಗೆ ಮಾಡಿರುವ ಉಪಕಾರವನ್ನು ನಮ್ಮ ಪರಮಾವಧಿಯ ಜೀವಿತಕಾಲದ ಒಂದು ನೂರು ವರ್ಷಗಳವರೆಗೆ ಕಷ್ಟಪಟ್ಟು ತೀರಿಸಿದರೂ ಅದೂ ಸಾಲದೇ ಇದೆ.

ತೇಷ್ವೇವ ತ್ರಿಷು ತುಷ್ಟೇಷು ತಪಃ ಸತ್ಯಂ ಸಮಾಪ್ಯತೇ ।
ತೇಷಾಂ ತ್ರಯಾಣಾಂ ಶುಶ್ರೂಷಾ ಪರಮಂ ತಪ ಉಚ್ಯತೇ ॥ ೫೪ ॥

ನ ತೈರನಭ್ಯನುಜ್ಞಾತೋ ಧರ್ಮಮನ್ಯಂ ಸಮಾಚರೇತ್ ।
ತ ಏವ ಹಿ ತ್ರಯೋ ಲೋಕಾಸ್ತ ಏವ ತ್ರಯ ಆಶ್ರಮಾಃ ॥ ೫೫ ॥

ತ ಏವ ಚ ತ್ರಯೋ ವೇದಾಸ್ತ ಏವೋಕ್ತಾಸ್ತ್ರಯೋಽಗ್ನಯಃ ।
ಪಿತಾ ವೈ ಗಾರ್ಹಪತ್ಯೋಽಗ್ನಿರ್ಮಾತಾಽಗ್ನಿರ್ದಕ್ಷಿಣಃ ಸ್ಮೃತಃ ॥ ೫೬ ॥

ಗುರುರಾಹವನೀಯಸ್ತು ಅಗ್ನಿತ್ರೇತಾ ಗರೀಯಸೀ ।
ತ್ರಿಷ್ವ ಪ್ರಮಾದ್ಯನ್ನೇತ್ರೇಷು ತ್ರೀಁಲ್ಲೋಕಾನ್ಜಯತೇ ಗೃಹೀ ॥ ೫೭ ॥

ಸ ಹಿ ದಿವ್ಯೇನ ವಪುಷಾ ದೇವವದ್ದಿವಿ ಮೋದತೇ ।
ಇಮಂ ಲೋಕಂ ಮಾತೃಭಕ್ತಃ ಪಿತೃಭಕ್ತಸ್ತು ಮಧ್ಯಮಂ ॥ ೫೮ ॥

---

೫೪. ಆದ್ದರಿಂದ ತಂದೆತಾಯಿಗಳಿಗೆ ಸರ್ವದಾ ಪ್ರಿಯವಾದ ಕೆಲಸವನ್ನೇ ಮಾಡಬೇಕಾದುದು ಧರ್ಮ. ಮೇಲೆ ವಿವರಿಸಿದಂತೆ ಮಾತಾಪಿತೃಗಳೂ ವಿದ್ಯಾಪ್ರದಾತನಾದ ಆಚಾರ್ಯನೂ ಸೇರಿ ಈ ಮೂವರೂ ತೃಪ್ತರಾದರೆ ಅದು ನಾವು ತಪಸ್ಸು ಮಾಡಿದಂತೆಯೇ ಫಲವನ್ನು ಕೊಡುತ್ತದೆಯಾದುದರಿಂದ ಆ ಮೂವರ ಶುಶ್ರೂಷೆಗೇ ಅತ್ಯುತ್ತಮವಾದ ತಪಸ್ಸೆಂದು ಹೆಸರು.

೫೫. ಇವರ ಅಪ್ಪಣೆ ಪಡೆಯದೆ ನಾವು ಯಾವ ಮತ್ತೊಂದು ಧರ್ಮ ಕಾರ್ಯವನ್ನೂ ಮಾಡಕೂಡದು. ಆಚಾರ್ಯ ಮಾತಾಪಿತೃಗಳೇ ಮೂರುಲೋಕ ವೆಂದು ತಿಳಿಯಬೇಕು. ಈ ಮೂವರೇ ಮೂರು ಆಶ್ರಮಗಳು.

೫೬. ಅವರೇ ಮೂರು ವೇದಗಳು. ಅವರೇ ತ್ರೇತಾಗ್ನಿಗಳೂ ಸಹ, ಅದು ಹೇಗೆಂದರೆ ;—ತಂದೆಯೇ ಗಾರ್ಹ್ಯಪತ್ಯಾಗ್ನಿಯು. ತಾಯಿಯೇ ದಕ್ಷಿಣಾಗ್ನಿಯು.

೫೭. ಗುರುವೇ ಆಹವನೀಯಾಗ್ನಿಯು. ಇವೇ ಆ ಶ್ರೇಷ್ಠವಾದ ಅಗ್ನಿತ್ರಯಗಳು. ಈ ಮೂರು ಅಗ್ನಿಗಳನ್ನು ಸರಿಯಾಗಿ ಉಪಾಸನೆಮಾಡಿದರೆ ಅಂತಹ ಗೃಹಸ್ಥನು ಮೂರು ಲೋಕಗಳನ್ನೂ ಜಯಿಸಬಲ್ಲನು.

೫೮. ಆ ಗೃಹಸ್ಥನು ಈ ಲೋಕವನ್ನು ಬಿಟ್ಟುಹೋದ ಬಳಿಕ ದಿವ್ಯದೇಹವನ್ನು ಧರಿಸಿ ದೇವತೆಗಳಂತೆ ಸ್ವರ್ಗಲೋಕದಲ್ಲಿ ಸುಖಪಡುತ್ತಾನೆ.

**ಗುರುಶುಶ್ರೂಷಯಾ ತ್ವೇವಂ ಬ್ರಹ್ಮಲೋಕಂ ಸಮಶ್ನುತೇ ।**
**ಸರ್ವೇ ತಸ್ಯಾದೃತಾ ಧರ್ಮಾ ಯಸ್ಯೈತೇ ತ್ರಯ ಆದೃತಾಃ ॥ ೫೯ ॥**

**ಅನಾದೃತಾಸ್ತು ಯಸ್ಯೈತೇ ಸರ್ವಾಸ್ತಸ್ಯಾಫಲಾಃ ಕ್ರಿಯಾಃ ।**
**ಯಾವತ್ತ್ರಯಸ್ತೇ ಜೀವೇಯುಸ್ತಾವನ್ನಾನ್ಯತ್ಸಮಾಚರೇತ್ ॥ ೬೦ ॥**

**ತನುಂ ನಿವೇದಯೇತ್ತೇಭ್ಯೋ ಮನೋವಚನಕರ್ಮಭಿಃ ।**
**ತ್ರಿಷ್ವೇತೇಷ್ವಿತಿಕೃತ್ಯಂ ಹಿ ಪುರುಷಸ್ಯ ಸಮಾಪ್ಯತೇ ॥ ೬೧ ॥**

**ಏಷ ಧರ್ಮಃ ಪರಃ ಸಾಕ್ಷಾದುಪಧರ್ಮೋಽನ್ಯ ಉಚ್ಯತೇ ।**
**ಗುರುಪೂಜಾರತಿರ್ಭರ್ತಾರ್ ತ್ವಂ ಚ ಸಾಧ್ವೀ ಪತಿವ್ರತಾ ॥ ೬೨ ॥**

---

೫೯. ಮಾತೃಭಕ್ತನಾದವನು ಈ ಲೋಕದಲ್ಲಿ ಸುಖಪಡುತ್ತಾನೆ. ಪಿತೃಭಕ್ತನು ಮಧ್ಯಮಲೋಕ ಸುಖವನ್ನನುಭವಿಸುತ್ತಾನೆ. ಗುರುಭಕ್ತನು ಬ್ರಹ್ಮಲೋಕದಲ್ಲಿ ಸುಖಪಡುತ್ತಾನೆ. ಯಾರು ಈ ಮೂವರನ್ನು ಭಕ್ತಿಯಿಂದಾದರಿಸುವರೋ ಅವರಿಗೆ ಮೂರು ಲೋಕಗಳೂ ವಶವಾಗುತ್ತವೆ.

೬೦. ಈ ರೀತಿ ಮಾಡದೆ ಮುಖ್ಯವಾದೀ ಧರ್ಮವನ್ನು ಬಿಟ್ಟು ಯಾರು ಈ ಮೂವರು ಪೂಜ್ಯರನ್ನೂ ಅನಾದರಣೆ ಮಾಡುತ್ತಾರೆಯೋ ಅವರ ಸಕಲ ಧರ್ಮ ಕರ್ಮಗಳೂ ನಿಷ್ಫಲವಾಗಿ ಹೋಗುವುವು. ಈ ಮೂವರೂ ಎಲ್ಲಿಯವರಿವಿಗೆ ಬದುಕಿರುವರೋ ಅದುವರಿಗೆ ಬೇರೆ ಮತ್ತೊಂದು ಧರ್ಮವನ್ನು ಮಾಡಬೇಕಾಗಿಯೇ ಇಲ್ಲ.

೬೧. ಮನೋವಾಕ್ಕಾಯಕರ್ಮಗಳಿಂದ ಈ ದೇಹವನ್ನು ಅವರಿಗಾಗಿ ತೆತ್ತು ಬಿಡಬೇಕಾದುದೇ ಧರ್ಮ. ಈ ಧರ್ಮವೊಂದನ್ನು ಮಾತ್ರ ಪಾಲಿಸಿಬಿಟ್ಟರೆ ಇನ್ನಾವ ಸತ್ಕರ್ಮಾನುಷ್ಠಾನವನ್ನೂ ಅವನು ಮಾಡಬೇಕಾಗಿ ಇಲ್ಲ.

೬೨. ಇದನ್ನೇ ಸಾಕ್ಷಾತ್ತಾದ ಮುಖ್ಯಧರ್ಮವೆಂದು ಕರೆಯಬೇಕು. ಇದನ್ನು ಬಿಟ್ಟು ಉಳಿದ ಧರ್ಮಗಳೆಲ್ಲವೂ ಉಪಧರ್ಮಗಳೆನಿಸಿಕೊಂಡಿವೆ. ಎಲೌ ಸಾವಿತ್ರಿಯೇ! ನೀನು ಗುರುಪೂಜಾನಿರತಳು. ಭರ್ತೃಭಕ್ತಳಾದ ಮಹಾಪತಿವ್ರತೆಯು.

ವಿನಿವರ್ತಸ್ವ ಧರ್ಮಜ್ಞೇ ಗ್ಲಾನಿರ್ಭವತಿ ತೇಽಧುನಾ ।

ಸಾವಿತ್ರ್ಯುವಾಚ

ಪತಿರ್ಹಿ ದೈವತಂ ಸ್ತ್ರೀಣಾಂ ಪತಿರೇವ ಪರಾಯಣಂ ॥ ೬೩ ॥

ಅನುಗಮ್ಯಃ ಸ್ತ್ರಿಯಾ ಸಾಧ್ವ್ಯಾ ಪತಿಃ ಪ್ರಾಣಧನೇಶ್ವರಃ ।
ಮಿತಂ ದದಾತಿ ಹಿ ಪಿತಾ ಮಿತಂ ಭ್ರಾತಾ ಮಿತಂ ಸುತಃ ॥ ೬೪ ॥

ಅಮಿತಸ್ಯ ಹಿ ದಾತಾರಂ ಭರ್ತಾರಂ ಕಾ ನ ಪೂಜಯೇತ್ ।
ನೀಯತೇ ಯತ್ರ ಭರ್ತಾ ಮೇ ಸ್ವಯಂ ವಾ ಯತ್ರ ಗಚ್ಛತಿ ॥ ೬೫ ॥

ಮಯಾಪಿ ತತ್ರ ಗಂತವ್ಯಂ ಯಥಾಶಕ್ತಿ ಸುರೋತ್ತಮ ।
ಪತಿಮಾದಾಯ ಗಚ್ಛಂತಮನುಗಂತುಮಹಂ ಯದಾ ॥ ೬೬ ॥

---

೬೩. ನೀನು ಸಕಲ ಧರ್ಮವನ್ನೂ ತಿಳಿದ ಧರ್ಮಜ್ಞಳು. ನೀನು ನನ್ನ ಜತೆಯಲ್ಲಿ ಬರಲಾರೆ. ಈಗಲೇ ನೀನು ಬಹಳವಾಗಿ ಬಳಲಿದೀಯೆ! ಆದ್ದರಿಂದ ಹಿಂತಿರುಗಿ ಹೊರಟುಹೋಗಮ್ಮ! ಹೀಗೆಂದು ಯಮಧರ್ಮರಾಜನು ಹೇಳಲು ಸಾವಿತ್ರಿಯು ಅವನನ್ನು ಕುರಿತು ಹೇಳಿದುದೇನೆಂದರೆ :—ಅಯ್ಯಾ! ಧರ್ಮರಾಯ! ಹೆಂಗಸರಿಗೆ ಪತಿಯೇ ದೇವರು. ಪತಿಯೇ ಪರಾಯಣನು (ಗತಿಯು.)

೬೪. ಹೆಂಗಸರ ಪ್ರಾಣಧನ ಮತ್ತು ಮಾನಧನಕ್ಕೂ ಸಹ ಗಂಡನೇ ಸರ್ವಾಧಿಕಾರಿಯು. ಹೆಂಗಸಾದವಳಿಗೆ ತಂದೆಯು ಮಿತವಾದ ಸುಖವನ್ನುಂಟು ಮಾಡುತ್ತಾನೆ. ಅಣ್ಣತಮ್ಮಂದಿರೂ ಮಕ್ಕಳೂ ಸಹ ಮಿತವಾದ ಸುಖವನ್ನೇ ಕೊಡಬಲ್ಲರು.

೬೫. ಗಂಡನು ಕೊಡತಕ್ಕ ಸುಖವನ್ನು ಮಾತ್ರ ಮತ್ತಾವನೂ ಕೊಡಲಾರನಾದ್ದರಿಂದ ಅಂತಹ ಅಮಿತಸುಖದಾತೃವಾದ ಗಂಡನನ್ನು ಯಾವಳು ತಾನೇ ಪೂಜಿಸದೆ ಇದ್ದಾಳು? ಆದ್ದರಿಂದೆಲೈ ಯಮನೇ! ನನ್ನ ಗಂಡನನ್ನು ನೀನೆಲ್ಲಿಗೆ ಕೊಂಡೊಯ್ಯುತ್ತಿರುವೆಯೋ ನನ್ನ ಗಂಡನೀಗ ಎಲ್ಲಿಗೆ ಹೋಗುತ್ತಿರುವನೋ ನಾನೂ ಸಹ ಅಲ್ಲಿಗೇ ಹೋಗುತ್ತೇನೆ.

೬೬. ಯಮಧರ್ಮರಾಯನೇ! ಕೇಳು. ನನಗೆ ನನ್ನ ಗಂಡನೊಂದಿಗೆ ಬರಲು ಶಕ್ತಿಯಿಲ್ಲವೆಂದು ನೀನು ಹೇಳಿದೆಯಲ್ಲವೆ? ಆಗಲಿ, ನೋಡುತ್ತೇನೆ. ನನಗೆ ಎಲ್ಲಿಯ ವರೆವಿಗೆ ಶಕ್ತಿಯಿದೆಯೋ ಅಷ್ಟುದೂರವೂ ಸಹ ಗಂಡನಮಾರ್ಗವನ್ನನುಸರಿಸುತ್ತೇನೆ

ತ್ವಾಂ ದೇವ ನ ಹಿ ಶಕ್ಷ್ಯಾಮಿ ತದಾ ತ್ಯಕ್ಷ್ಯಾಮಿ ಜೀವಿತಂ ।
ಮನಸ್ವಿನೀ ತಥಾ ಕಾ ಚ ವೈಧವ್ಯಾಕ್ಷರದೂಷಿತಾ ॥ ೬೭ ॥

ಮುಹೂರ್ತಮಪಿ ಜೀವೇತ ಮಂಡನಾಹಾಪ್ಯಮಂಡಿತಾ ।

ಯಮ ಉವಾಚ

ಪತಿವ್ರತೇ ಮಹಾಭಾಗೇ ಪರಿತುಷ್ಟೋಽಸ್ಮಿ ತೇ ಶುಭೇ ॥ ೬೮ ॥
ವಿನಾ ಸತ್ಯವತಃ ಪ್ರಾಣಾನ್ವರಂ ವರಯ ಮಾ ಚಿರಂ ।

ಸಾವಿತ್ರ್ಯುವಾಚ

ವಿನಷ್ಟಚಕ್ಷುಷೋ ರಾಜ್ಯಂ ಚಕ್ಷುಷಾ ಸಹ ಕಾಮಯೇ ।
ಚ್ಯುತರಾಜ್ಯಸ್ಯ ಧರ್ಮಜ್ಞ ಶ್ವಶುರಸ್ಯ ಮಹಾತ್ಮನಃ ॥ ೬೯ ॥

---

೬೭ ನನ್ನ ಗಂಡನನ್ನು ಕರೆದುಕೊಂಡು ನೀನು ಹೋಗುತಲಿದೀಯೆ! ನಿನ್ನ ಹಿಂದೆಯೇ ನಾನೂ ಬರುತ್ತೇನೆ. ಒಂದುವೇಳೆ ನಿನ್ನ ಜೊತೆಯಲ್ಲಿ ಬರಲು ನನಗೆ ಶಕ್ತಿಯಿಲ್ಲದೆ ಹೋಗುವುದಾದರೆ ಆಗ ನೆಲದಮೇಲೆ ಬಿದ್ದು ನನ್ನ ಪ್ರಾಣಗಳನ್ನು ತೊರೆದುಬಿಡುತ್ತೇನೆ. ಗಂಡಸತ್ತ ವೈಧವ್ಯವೆಂಬ ಮೂರಕ್ಷರಗಳಿಂದ ದೂಷಿತಳಾಗುವುದಕ್ಕಿಂತಲೂ ಸ್ವೇಚ್ಛೆಯಿಂದ ಪ್ರಾಣಬಿಡುವುದೇ ಲೇಸು.

೬೮. ಒಂದು ಮುಹೂರ್ತಕಾಲ ಬದುಕಿದ್ದಾಗ್ಲೂ ಸುವಾಸಿನಿಯಾಗಿಯೇ ಬದುಕಿರುತ್ತೇನೆ. ಆ ಸೌಮಂಗಲ್ಯವು ಹೋದಮೇಲೆ ನನಗೆ ಯಾವ ಭೂಷಣವೂ ಖಂಡಿತವಾಗಿ ಬೇಕಾಗಿಲ್ಲವೆನಲು ಯಮನು ಸಾವಿತ್ರಿಯ ಸ್ಥೈರ್ಯವನ್ನು ನೋಡಿ ಹೇಳಿದುದೇನೆಂದರೆ :—

೬೯. ಎಲೌ ಮಂಗಳಾಂಗಿಯಾದ ಪುಣ್ಯವತಿಯಾದ ಪರಮಸಾಧ್ವಿ ಸಾವಿತ್ರಿಯೇ! ನಿನ್ನ ದೃಢಭಕ್ತಿಗೆ ಮೆಚ್ಚಿದೆನು. ನಿನ್ನ ಗಂಡನ ಪ್ರಾಣವೊಂದನ್ನು ಮಾತ್ರ ಬಿಟ್ಟು ನಿನಗೆ ಬೇಕಾದ ಒಂದು ವರವನ್ನು ಕೇಳಿಕೋ; ಕೊಡುವೆನೆಂದು ಹೇಳಲು; ಸಾವಿತ್ರಿಯು ಇಂತು ಪ್ರಾರ್ಥಿಸಿದಳು. ಎಲೈ ಧರ್ಮರಾಜನೇ! ಮಹಾತ್ಮನಾದ ನನ್ನ ಮಾವನಿಗೆ ದೃಷ್ಟಿಗಳೂ ರಾಜ್ಯವೂ ಸಹ ಹೋಗಿವೆ. ಅವನಿಗೆ ರಾಜ್ಯಲಾಭದೊಡನೆ ದೃಷ್ಟಿಲಾಭವೂ ಆಗುವಂತೆ ವರವನ್ನು ಕರುಣಿಸು.

## ಯಮ ಉವಾಚ

ಕೃತೇನ ಕಾಮೇನ ನಿವರ್ತ ಭದ್ರೇ
ಭವಿಷ್ಯತೀದಂ ಸಕಲಂ ತ್ವಯೋಕ್ತಂ ।
ಮಮೋಪರೋಧಃ ತವ ಚ ಕ್ಲಮಸ್ಸ್ಯಾ
ತ್ತಥಾಽಧ್ವನಾ ತೇನ ತವ ಬ್ರವೀಮಿ ॥ ೭೦ ॥

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರ ಸಂವಾದೇ ಸಾವಿತ್ರ್ಯುಪಾಖ್ಯಾನೇ ಸಪ್ತತ್ರಿಂಶತ್ತಮೋಽಧ್ಯಾಯಃ**

---

೭೦. ಸಾವಿತ್ರಿಯ ಮಾತನ್ನು ಕೇಳಿ ಯಮನು ಆ ಪರಮಪತಿವ್ರತೆಗೆ ವರವನ್ನಿಂತು ಕರುಣಿಸಿದನು:—ಓ! ಸಾವಿತ್ರೀದೇವಿಯೇ! ನಿನ್ನ ಇಷ್ಟಾರ್ಥವು ನೆರವೇರುವುದು. ನೀನು ಇನ್ನು ಹಿಂತಿರುಗಿಹೊರಡು. ನಿನ್ನ ಬಾಯಲ್ಲಿ ಈಗ ಏನೇನು ಹೊರಟಿದೆಯೋ ಅವೆಲ್ಲವೂ ಖಂಡಿತವಾಗಿ ನಡೆದೇ ನಡೆಯುವುದು. ಇನ್ನು ನಿನಗೆ ಅಪ್ಪಣೆಕೊಟ್ಟಿದೇನೆ. ನಿನಗೆ ಇನ್ನೂ ಬಹಳ ಆಯಾಸವಾಗುತ್ತದಮ್ಮಾ! ಒಳ್ಳೇ ಮಾತಿನಿಂದ ನಿನಗೆ ಹೇಳುತ್ತೇನೆ. ನೀನಿನ್ನು ಹಿಂತಿರುಗಿ ಹೊರಡಬಹುದಮ್ಮಾ! ಹೀಗೆಂದು ಯಮಧರ್ಮರಾಯನು ಸಾವಿತ್ರಿಗೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ದ್ವಿತೀಯಖಂಡದಲ್ಲಿ ಮಾರ್ಕಂಡೇಯ
ವಜ್ರ ಸಂವಾದರೂಪವಾದ ಸಾವಿತ್ರೀ ಉಪಾಖ್ಯಾನವೆಂಬ ಹೆಸರಿನ
ಮೂವತ್ತೇಳನೆಯ ಅಧ್ಯಾಯ ಮುಗಿಯಿತು.

|| ಶ್ರೀಃ ||

# ಅಥ

## ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

### ಅಷ್ಟತ್ರಿಂಶತ್ತಮೋಽಧ್ಯಾಯಃ

ಸಾವಿತ್ರ್ಯುವಾಚ

ಕುತಃ ಕ್ಲಮಃ ಕುತೋ ದುಃಖಂ ಸದ್ಭಿಃ ಸಹ ಸಮಾಗಮೇ ।
ಸತಾಂ ತಸ್ಮಾನ್ನ ಮೇ ಗ್ಲಾನಿಸ್ತ್ವತ್ಸಮೀಪೇ ಸುರೋತ್ತಮ || ೧ ||

ಸಾಧೂನಾಂ ವಾಪ್ಯಸಾಧೂನಾಂ ಸಂತ ಏವ ಪರಾ ಗತಿಃ ।
ನೈವಾಸತಾಂ ನೈವ ಸತಾಮಸಂತೋ ನೈವಚಾತ್ಮನಃ || ೨ ||

ವಿಷಾಗ್ನಿಸರ್ಪಶಸ್ತ್ರೇಭ್ಯೋ ನ ತಥಾ ಜಾಯತೇ ಭಯಂ ।
ಅಕಾರಣಜಗದ್ವೈರಿಖಲೇಭ್ಯೋ ಜಾಯತೇ ಯಥಾ || ೩ ||

---

### ಮೂವತ್ತೆಂಟನೆಯ ಅಧ್ಯಾಯವು

೧. ಸಾವಿತ್ರಿಯು ಯಮನನ್ನು ಕುರಿತು ಮತ್ತೂ ಹೇಳುತ್ತಾಳೆ:— ಸಜ್ಜನರು ಸಜ್ಜನರೊಡನೆ ಕೂಡಿದ್ದರೆ ಬಳಲಿಕೆಯೆಂದರೇನು ? ಆಯಾಸವೆಂದರೇನು ? ದುಃಖವೆಂದರೇನು ? ಎಲೈ ಧರ್ಮರಾಜನೆ ! ನೀನು ಪರಮದಯಾಳುವಾದ ಸಾಧುವಾದ್ದರಿಂದ ನಿನ್ನ ಸಮೀಪದಲ್ಲಿರುವ ನನಗೆ ಯಾವ ಬಳಲಿಕೆಯೂ ಇಲ್ಲ.

೨. ಸಾಧುಗಳಿಗಾಗಲೀ ಅಸಾಧುಗಳಿಗಾಗಲೀ ಸತ್ಪುರುಷರೇ ಮುಖ್ಯವಾದ ಗತಿಯು. ಹಾಗಲ್ಲದೆ ದುಷ್ಟರು ಸಜ್ಜನರಿಗಾಗಲೀ ದುಷ್ಟರಿಗಾಗಲೀ ಸಹಾಯಕರಾಗಿರಲಾರರು. ದುಷ್ಟನಾದವನು ತನ್ನ ಹಿತವನ್ನೂ ಪರಹಿತವನ್ನೂ ನಾಶಗೊಳಿಸುವನು.

೩. ಕಾರಣವಿಲ್ಲದೆ ಜಗತ್ತನ್ನು ದ್ವೇಷಿಸುವ ಖಲರಿಗೆ ಭಯಪಡುವಂತೆ, ವಿಷಕ್ಕಾಗಲೀ ಶಸ್ತ್ರಾಸ್ತ್ರಗಳಿಗಾಗಲೀ ಭಯಪಡುಬೇಕಾದುದಿಲ್ಲ. (ಅಂದರೆ ದುಷ್ಟರ ಸಂಗತಿಯು ಅಷ್ಟು ಭಯಂಕರವಾದುದು.)

**ಸಂತಃ ಪ್ರಾಣಾನಪಿ ತ್ಯಕ್ತ್ವಾ ಪರಾರ್ಥಂ ಕುರ್ವತೇ ಯಥಾ ।**
**ತಥಾಽಸಂತೋಽಪಿ ಮನುಜಾಃ ಪರಪೀಡಾಸು ತತ್ಪರಾಃ ॥ ೪ ॥**

**ತ್ಯಜತ್ಯಸೂನಯಂ ಲೋಕಸ್ತೃಣವದ್ಯಸ್ಯ ಕಾರಣಾತ್ ।**
**ಪರೋಪಧಾನಸಕ್ತಾಸ್ತೇ ಪರಲೋಕಂ ತಥಾ ಸತಾ ॥ ೫ ॥**

**ನಿಕಾಯೇಷು ನಿಕಾಯೇಷು ಪುರಾ ಬ್ರಹ್ಮಾ ಜಗದ್ಗುರುಃ ।**
**ಅಸತಾಮುಪಘಾತಾಯ ರಾಜಾನಃ ಕೃತವಾನ್ಸ್ವಯಂ ॥ ೬ ॥**

**ಚಾರೈಃ ಪರೀಕ್ಷಯೇದ್ರಾಜಾ ಧೂರ್ತಾನ್ಸಮ್ಯಾರ್ಜಯೇತ್ಸದಾ ।**
**ನಿಗ್ರಹಂ ಚಾಸತಾಂ ಕುರ್ಯಾತ್ಸ ತು ಲೋಕಜಿದುತ್ತಮಃ ॥ ೭ ॥**

---

೪. ಸತ್ಪುರುಷರು ತಮ್ಮ ಪ್ರಾಣಗಳನ್ನಾಗಲೀ ತ್ಯಾಗಮಾಡಿ ಪರರಿಗೆ ಉಪಕಾರಮಾಡುತ್ತಾರೆ. ಅದೇ ಮೇರೆ ದುರ್ಜನರೂ ಸಹ ಪರರ ಹಿಂಸೆಯಲ್ಲೇ ಆಸಕ್ತರಾಗಿರುತ್ತಾರೆ.

೫. ಸತ್ಪುರುಷರಾದವರು ತಮ್ಮಿಂದ ಪರರಿಗೆ ಉಪಕಾರವಾಗುವ ಸಂದರ್ಭವೊದಗಿದರೆ ಆಗ ತಮ್ಮ ಪ್ರಾಣವನ್ನು ಹುಲ್ಲಿಗಿಂತ ಕಡೆಯಾಗಿ ಕಾಣುತ್ತಾರೆ. ಇಂತಹ ಸಜ್ಜನರು ತಮ್ಮ ಈ ಅಮೋಘವಾದ ಪರಹಿತದಿಂದ ಪರಲೋಕವನ್ನು ಸಾಧಿಸುತ್ತಾರೆ.

೬. ದುಷ್ಟರನ್ನು ನಿಗ್ರಹಿಸುವುದಕ್ಕೋಸ್ಕರವೇ ಪೂರ್ವದಲ್ಲಿ ಬ್ರಹ್ಮನು ಪ್ರತಿಯೊಂದು ಗುಂಪಿನ ಪ್ರಾಣಿಗಳಿಗೂ ಒಬ್ಬ ನಿಯಾಮಕ (ರಾಜ) ನನ್ನು ಸೃಷ್ಟಿಮಾಡಿದನು.

೭. ಆದ್ದರಿಂದಲೇ ರಾಜನಾದವನು ಗೂಢಚಾರರಿಂದ ಧೂರ್ತಜನರಾರೆಂಬುದನ್ನು ಗೊತ್ತುಮಾಡಿಕೊಂಡು ಅವರನ್ನು ಹತೋಟಿಗೆ ತರಬೇಕು. ಮತ್ತು ದುಷ್ಟರನ್ನೂ ನಿಗ್ರಹ (ಶಿಕ್ಷೆ) ಮಾಡಬೇಕು. ಇಂತಹ ರಾಜನೇ ಉತ್ತಮನೆಂದೂ, ಲೋಕಜಿತನೆಂದೂ ಹೇಳಿಸಿಕೊಳ್ಳುವನು.

**ಧಾನ್ಯಸಂರಕ್ಷಣಾರ್ಥಾಯ ನಿರ್ಮಾಷ್ಟಾ ಕಕ್ಷಮುದ್ಧರನ್ ।**
**ಯಥಾ ವರ್ಧಯತೇ ಧಾನ್ಯಂ ವರ್ಧನೀಯಾಸ್ತಥಾ ಪ್ರಜಾಃ ॥ ೮ ॥**

**ನಿಗ್ರಹೇಣಾಸತಾಂ ರಾಜ್ಞಾ ಸತಾಂ ಚ ಪರಿಪಾಲನೈಃ ।**
**ಏತಾವದೇವ ಕರ್ತವ್ಯಂ ರಾಜ್ಞಾ ಸ್ವರ್ಗಮಭೀಪ್ಸತಾ ॥ ೯ ॥**

**ರಾಜಕೃತ್ಯಂ ಹಿ ಲೋಕೇಷು ನಾಸ್ತ್ಯನ್ಯಜ್ಜಗತೀಪತೇ ।**
**ಅಸತಾಂ ನಿಗ್ರಹಾದೇವ ಸತಾಂ ಚ ಪರಿಪಾಲನಾತ್ ॥ ೧೦ ॥**

**ರಾಜಾನುಶಾಸಿತಾ ತೇಷಾಮಸತಾಂ ಶಾಸಿತಾ ಭವಾನ್ ।**
**ತೇನ ತ್ವಮಧಿಕೋ ದೇವ ದೇವೇಭ್ಯಃ ಪ್ರತಿಭಾಸಿ ಮೇ ॥ ೧೧ ॥**

---

೮. ಧಾನ್ಯವನ್ನು ಅಭಿವೃದ್ಧಿಮಾಡುವುದಕ್ಕಾಗಿ ವ್ಯವಸಾಯಗಾರನು ಒಣಗಿದ ಕಾಡು (ಭೂಮಿ) ಪ್ರದೇಶವನ್ನು ಹದಗೊಳಿಸಿ, ಉತ್ತು ಕಾಳನ್ನು ಬಿತ್ತಿ, ಹೇಗೆ ಧಾನ್ಯವನ್ನು ಅಭಿವೃದ್ಧಿಮಾಡುವನೋ, ಅದೇ ಮೇರೆ ರಾಜನೂ ಸಹ ತನ್ನ ರಾಜ್ಯದಲ್ಲಿ ಪ್ರಜಾಸಂಖ್ಯೆಯನ್ನು ಅಭಿವೃದ್ಧಿಗೊಳಿಸಬೇಕು.

೯. ಸ್ವರ್ಗ ರಾಜ್ಯವನ್ನು ಸಾಧಿಸಲೆಳಸುವ ರಾಜನು ದುಷ್ಟನಿಗ್ರಹದಿಂದಲೂ, ಶಿಷ್ಟಪರಿಪಾಲನೆಯಿಂದಲೂ ಯಶಸ್ಸನ್ನು ಸಂಪಾದಿಸಬೇಕು. ಸ್ವರ್ಗಕಾಮನಾದ ರಾಜನ ಕೆಲಸವು ಇಷ್ಟೇ ಸರಿ.

೧೦. ಅದರಂತೆ ಭೂಲೋಕವನ್ನು ಗೆಲ್ಲುವ ಆಶೆಯುಳ್ಳ ರಾಜನೂ ಸಹ ಅಸಜ್ಜನರ ನಿಗ್ರಹವನ್ನೂ, ಸಜ್ಜನರ ಪರಿಪಾಲನೆಯನ್ನೂ ಮಾಡಲೇಬೇಕು. ರಾಜನು ಇದಕ್ಕಿಂತ ಹೆಚ್ಚಿಗೆ ಕೆಲಸವನ್ನೇನೂ ಮಾಡಬೇಕಾಗಿಲ್ಲ.

೧೧. ರಾಜನಾದವನು ದುಷ್ಟನಿಗ್ರಹ ಶಿಷ್ಟಪರಿಪಾಲನೆಯನ್ನು ಮಾಡುವವನಾದರೆ, ನೀನು ದುಷ್ಟರನ್ನು ಮಾತ್ರ ಶಿಕ್ಷೆಮಾಡುತ್ತೀಯೆ. ಆದುದರಿಂದ ರಾಜರಿಗಿಂತಲೂ ನೀನೇ ಹೆಚ್ಚು. ಅಷ್ಟೇ ಅಲ್ಲ. ಎಲ್ಲಾ ದೇವತೆಗಳಿಗಿಂತಲೂ ನೀನೇ ಹೆಚ್ಚಾದವನೆನಿಸಿಕೊಂಡಿರುವೆಯಯ್ಯಾ ! ಯಮಧರ್ಮರಾಯ.

**ಜಗತ್ತು ಧಾರ್ಯತೇ ಸದ್ಭಿಃ ಸತಾಮಗ್ರ್ಯಸ್ತಥಾ ಭವಾನ್ ।**
**ತೇನ ತ್ವಾಮಭಿಯಾನ್ತ್ಯಾ ಮೇ ಕ್ಲಮೋ ದೇವ ನ ವಿದ್ಯತೇ　　॥ ೧೨ ॥**

**ಯಮ ಉವಾಚ**

**ತುಷ್ಟೋಽಸ್ಮಿ ತೇ ವಿಶಾಲಾಕ್ಷಿ ವಚನೈರ್ಧರ್ಮಸಂಹಿತೈಃ ।**
**ವಿನಾ ಸತ್ಯವತಃ ಪ್ರಾಣಾನ್ವರಂ ವರಯ ಮಾ ಚಿರಂ　　॥ ೧೩ ॥**

**ಸಾವಿತ್ರ್ಯುವಾಚ**

**ಸಹೋದರಾಣಾಂ ಭ್ರಾತೄಣಾಂ ಕಾಮಯಾಮಿ ಶತಂ ವಿಭೋ ।**
**ಅನಪತ್ಯಃ ಪಿತಾ ಪ್ರೀತಿಂ ಪುತ್ರಲಾಭಾತ್ಪ್ರಯಾತು ಮೇ　　॥ ೧೪ ॥**

**ಯಮ ಉವಾಚ**

**ಕೃತೇನ ಕಾಮೇನ ನಿವರ್ತ ಭದ್ರೇ**
**ಭವಿಷ್ಯತೀದಂ ಸಕಲಂ ತವೋಕ್ತಂ**

---

೧೨. ಈ ಪ್ರಪಂಚವು ಸಾಧುಗಳಿಂದಲೇ ಧರಿಸಲ್ಪಟ್ಟಿದೆ. ಅಂತಹ ಸಾಧು ಸಮೂಹಗಳಿಗೆಲ್ಲಾ ನೀನು ಅಗ್ರೇಸರನು, ಅಂತಹ ಸಜ್ಜನಾಗ್ರೇಸರನಾದ ನಿನ್ನ ಹಿಂದೆ ಬರುವ ನನಗೆ ಎಂದೆಂದಿಗೂ ಆಯಾಸವಾಗುವುದಿಲ್ಲವೆಂದು ನೀನು ನಿಜವಾಗಿ ನಂಬಬೇಕಯ್ಯಾ ! ಯಮಧರ್ಮರಾಯ !

೧೩. ಸಾವಿತ್ರಿಯ ಈ ಮಾತನ್ನು ಕೇಳಿ ಯಮನು ಹೇಳುತ್ತಾನೆ :— ಎಲೌ ವಿಶಾಲಾಕ್ಷಿಯೇ ! ಧರ್ಮಸಮ್ಮತವಾದ ನಿನ್ನ ಮಾತುಗಳನ್ನು ಕೇಳಿ ನನಗೆ ಬಹು ಸಂತೋಷವಾಗಿದೆಯಮ್ಮಾ ! ಸತ್ಯವಂತನ ಪ್ರಾಣವೊಂದರ ಹೊರತಾಗಿ ಬೇರೆ ಯಾವ ವರವನ್ನಾದರೂ ಕೇಳಿಕೋ ! ಕೂಡಲೇ ನಡೆಸಿಕೊಡುತ್ತೇನೆ.

೧೪. ಸಾವಿತ್ರಿಯು ಕೇಳುತ್ತಾಳೆ :— ನನ್ನ ತಂದೆಗೆ ಗಂಡುಮಕ್ಕಳಿಲ್ಲ. ನಾನೊಬ್ಬಳೇ ಹೆಣ್ಣುಮಗಳು. ನನಗೆ ನೂರು ಜನ ತಮ್ಮಂದಿ (ಸಹೋದರರು) ರು ಹುಟ್ಟುವಂತೆ ವರವನ್ನು ಕೊಡಬೇಕು. ನನಗೆ ನೀನು ಕೊಡುವ ನಿನ್ನ ಈ ವರಬಲ ದಿಂದ ನಮ್ಮ ತಂದೆಗೆ ಗಂಡುಮಕ್ಕಳಾಗಿ ಅವನು ಸಂತೋಷವನ್ನು ಹೊಂದಲಿ.

೧೫. ಯಮನು ಹೇಳುತ್ತಾನೆ :—ಓ ಸಾವಿತ್ರಿ ! ನೀನು ಕೇಳಿದ ಈ ವರವು ಕೂಡಲೆ ಸಿದ್ಧಿಹೊಂದಲಿ. ನಿನ್ನ ಮಾತೆಲ್ಲಾ ನಿಜವಾಗಲಿ. ನೀನಿನ್ನು ಹಿಂತಿರುಗಿ

**ಮನೋಪರೋಧಃ ತವ ಚ ಕ್ಲಮಃ ಸ್ಯಾತ್**
**ತಥಾಽಧುನಾ ತೇನ ತವ ಬ್ರವೀಮಿ** **॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯ ಖಂಡೇ ಮಾರ್ಕಂಡೇಯ ವಜ್ರಸಂವಾದೇ ಸಾವಿತ್ರ್ಯುಪಾಖ್ಯಾನೇ ದ್ವಿತೀಯ ವರಲಾಭೋ ನಾಮ ಅಷ್ಟತ್ರಿಂಶತ್ತಮೋಽಧ್ಯಾಯಃ**

---

ಹೋಗು. ಈಗಲೂ ನಿನಗೆ ಮತ್ತೊಂದು ಬಾರಿ ಸಾರಿ ಸಾರಿ ಹೇಳುತ್ತೇನೆ. ನೀನು ನನ್ನೊಡನೆ ಬರಬೇಡ. ನಿನಗೆ ಬಹಳ ಆಯಾಸವಾಗುವುದು. ಹಿಂತಿರುಗೆಂದು ಯಮನು ಸಾವಿತ್ರಿಯೊಡನೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರ ಸಂವಾದರೂಪವಾದ ದ್ವಿತೀಯಖಂಡದಲ್ಲಿ ಸಾವಿತ್ರೀ ಚರಿತ್ರೆಯಲ್ಲಿ ಎರಡನೆಯ ವರಲಾಭವೆಂಬ ಹೆಸರಿನ ಮೂವತ್ತೆಂಟನೆಯ ಅಧ್ಯಾಯ ಮುಗಿಯಿತು.

॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕೋನ ಚತ್ವಾರಿಂಶೋಽಧ್ಯಾಯಃ

### ಸಾವಿತ್ರ್ಯುವಾಚ

ಧರ್ಮೋ ಹಿ ದೈವತಂ ಸ್ತ್ರೀಣಾಂ ಪತಿರೇವ ಪರಾಯಣಂ।
ಅನುಗಮ್ಯಃ ಸ್ತ್ರಿಯಾ ಸಾಧ್ವ್ಯಾ ಪತಿಃ ಪ್ರಾಣಧನೇಶ್ವರಃ ॥ ೧ ॥

ಧರ್ಮಾರ್ಜನೇ ಸುರಶ್ರೇಷ್ಠ ಕುತೋ ಗ್ಲಾನಿಃ ಕುತಃ ಕ್ಲಮಃ।
ತ್ವತ್ಪಾದಮೂಲಮೇವೇದಂ ಪರಮಂ ಧರ್ಮಕಾರಣಂ ॥ ೨ ॥

ಧರ್ಮಾರ್ಜನಂ ಸದಾ ಕಾರ್ಯಂ ಪುರುಷೇಣ ವಿಜಾನತಾ।
ತಲ್ಲಾಭಃ ಸರ್ವಲಾಭೇಭ್ಯೋ ಯತೋ ದೇವ ವಿಶಿಷ್ಯತೇ ॥ ೩ ॥

---

### ಮೂವತ್ತೊಂಭತ್ತನೆಯ ಅಧ್ಯಾಯವು

೧. ಸಾವಿತ್ರಿಯು ಯಮನನ್ನು ಕುರಿತು ಹೇಳುತ್ತಾಳೆ:— ಅಯ್ಯಾ! ಯಮಧರ್ಮರಾಯನೇ! ಕೇಳು. ಸ್ತ್ರೀಯರಿಗೆ ಪತಿಯೇ ದೇವರು. ಪತಿಯೇ ಧರ್ಮವು. ಪತಿಯೇ ಪರಮಗತಿಯು. ಪತಿಯೇ ಪ್ರಾಣಧನೇಶ್ವರನು. ಆದ್ದರಿಂದ ಪತಿವ್ರತೆಯಾದ ಹೆಂಗಸು ತನ್ನ ಗಂಡನ ಗತಿಯನ್ನನುಸರಿಸುವುದೇ ಧರ್ಮವು.

೨. ಎಲೈ ದೇವೋತ್ತಮನಾದ ಯಮಧರ್ಮರಾಯನೇ! ಧರ್ಮಾರ್ಜನೆ ಮಾಡುವುದಕ್ಕಾಗಿ ಶ್ರಮವನ್ನೂ, ಬಳಲಿಕೆಯನ್ನೂ ಸಹಿಸಲೇಬೇಕು. ಹಾಗಲ್ಲದೆ ಶ್ರಮಕ್ಲೇಶವೆಂದು ಹೆದರಿದರೆ ಆಗುತ್ತದೆಯೇ? ಸಕಲ ಧರ್ಮಕಾರಣವೂ ನಿನ್ನ ಪಾದದ ಬುಡವನ್ನೇ ಆಶ್ರಯಿಸಿಕೊಂಡಿರುವುದು,

೩. ಬುದ್ಧಿವಂತರಾದವರು ಸರ್ವದಾ ಧರ್ಮಾರ್ಜನೆಯಲ್ಲೇ ಆಸಕ್ತರಾಗಿರಬೇಕು. ಎಲ್ಲ ವಿಧವಾದ ಲಾಭಗಳಿಗಿಂತಲೂ ಧರ್ಮಲಾಭವೇ ಸರ್ವೋತ್ತಮವೆಂದು ಭಾವಿಸಬೇಕು.

ಧರ್ಮಶ್ಚಾರ್ಥಶ್ಚ ಕಾಮಶ್ಚ ತ್ರಿವರ್ಗಂ ಜೀವತಃ ಫಲಂ ।
ಧರ್ಮಹೀನಸ್ಯ ಕಾಮಾರ್ಥೌ ವಂಧ್ಯಾಸುತಸಮಾವುಭೌ ॥ ೪ ॥

ಧರ್ಮಾದರ್ಥಸ್ತಥಾ ಕಾಮೋ ಧರ್ಮಾಲ್ಲೋಕದ್ವಯಂ ತಥಾ ।
ಧರ್ಮ ಏಕೋಽನುಯಾತ್ಯೇನಂ ಯತ್ರ ಕುತ್ರ ಚ ಗಾಮಿನಂ ॥ ೫ ॥

ಶರೀರೇಣ ಸಮಂ ನಾಶಂ ಸರ್ವಮನ್ಯದ್ಧಿ ಗಚ್ಛತಿ ।
ಏಕೋ ಹಿ ಜಾಯತೇ ಜನ್ತುರೇಕ ಏವ ವಿಪದ್ಯತೇ ॥ ೬ ॥

ಧರ್ಮಸ್ತಮನುಯಾತ್ಯೇಕೋ ನ ಸುಹೃನ್ನ ಚ ಬಾಂಧವಾಃ ।
ರೂಪಸೌಭಾಗ್ಯಲಾವಣ್ಯಂ ಸಂಪದ್ಧರ್ಮೇಣ ಲಭ್ಯತೇ ॥ ೭ ॥

---

೪. ಪ್ರಪಂಚದಲ್ಲಿ ಬದುಕಿರುವ ಸಮಸ್ತ ಜನರೂ ಧರ್ಮ, ಅರ್ಥ, ಕಾಮಗಳೆಂಬ ತ್ರಿವರ್ಗವನ್ನೂ ಸಾಧಿಸಿದರೆ ಅದೇ ಜೀವಿತಫಲವೆಂದು ತಿಳಿಯಬೇಕು. ಧರ್ಮಹೀನನಾದವನಿಗೆ ಕಾಮಾರ್ಥಗಳೆರಡೂ ಬಂಜೆಯ ಮಕ್ಕಳಿಗೆ ಸರಿಸಮವೆನಿಸಿಕೊಳ್ಳುವುವು.

೫. ಅರ್ಥಸಾಧನೆಯಾಗಬೇಕಾದರೆ ಧರ್ಮವನ್ನು ಮಾಡಲೇಬೇಕು. ಅರ್ಥವಿಲ್ಲದೆ ಯಾವ ಕಾರ್ಯವೂ ಪೂರ್ತಿಯಾಗಲಾರದು. ಧರ್ಮಾಚರಣೆಯಂ ಮಾಡದವನಿಗೆ ಇಹಪರಗಳೆರಡೂ ನಿಷ್ಫಲವಾಗುವುವು. ಮನುಷ್ಯನು ಎಲ್ಲೆಲ್ಲಿ ಹೋದರೂ ಅವನು ಮಾಡಿದ ಧರ್ಮವೊಂದೇ ಅವನ ಹಿಂದೆ ಬರುವುದೇ ಹೊರ್ತು ಮತ್ತೊಂದೂ ಅವನ ಹಿಂದೆ ಬರಲಾರದು.

೬. ಶರೀರವು ನಾಶವಾಗಿಹೋದಾಗ ಅದರ ಜತೆಯಲ್ಲಿ ಇನ್ನಾವ ಪದಾರ್ಥಗಳೂ ಹೋಗುವುದಿಲ್ಲ. ಪ್ರಾಣಿಯು ಹುಟ್ಟುವಾಗಲೂ ಒಂದೇ ಹುಟ್ಟುತ್ತದೆ. ಸಾಯುವಾಗಲೂ ಒಂದೇ ಸಾಯುತ್ತದೆ.

೭. ಆದರೆ ಆ ಪ್ರಾಣಿಯು ಬದುಕಿದ್ದಾಗ ಮಾಡಿದ ಧರ್ಮವು ಮಾತ್ರ ಅದರ ಸೂಕ್ಷ್ಮಶರೀರವನ್ನನುಸರಿಸಿ ಹೋಗುವುದೇ ಹೊರತು ಸ್ನೇಹಿತರಾಗಲೀ ನಂಟರಾಗಲೀ ಅದರೊಡನೆ ಹೋಗಲಾರರು.

ಬ್ರಹ್ಮೇಂದ್ರೋಪೇಂದ್ರಶರ್ವೇಂದ್ರಯಮಾರ್ಕಾಗ್ನ್ಯನಿಲಾಂಭಸಾಂ ।
ವಸ್ವಶ್ವಿಧನದಾದ್ಯಾನಾಂ ಯೇ ಲೋಕಾಃ ಸರ್ವಕಾಮದಾಃ ॥ ೮ ॥

ಧರ್ಮೇಣ ತಾನವಾಪ್ನೋತಿ ಪುರುಷಃ ಪುರುಷಾಂತಕ ।
ಮನೋಹರಾಣಿ ದ್ವೀಪಾನಿ ವರ್ಷಾಣಿ ಸುಮುಖಾನಿ ಚ ॥ ೯ ॥

ಪ್ರಯಾಂತಿ ಧರ್ಮೇಣ ನರಾಸ್ತಥೈವಾಮರಕಾಮಿತಾಃ ।
ನಂದನಾದೀನಿ ಮುಖ್ಯಾನಿ ದೇವೋದ್ಯಾನಾನಿ ಯಾನಿಚ ॥ ೧೦ ॥

ತಾನಿ ಪುಣ್ಯೇನ ಲಭ್ಯಂತೇ ನಾಕಪೃಷ್ಠಂ ತಥಾ ನರೈಃ ।
ವಿಮಾನಾನಿ ವಿಚಿತ್ರಾಣಿ ತಥೈವಾಪ್ಸರಸಃ ಶುಭಾಃ ॥ ೧೧ ॥

---

೮. ನಮ್ಮ ಕಣ್ಣಿಗೆ ಕಾಣುವ ಸೌಂದರ್ಯ, ಸೌಭಾಗ್ಯ, ಲಾವಣ್ಯಗಳೂ, ಸಂಪತ್ತುಗಳೂ ಸಹ ಧರ್ಮದಿಂದ ಲಭಿಸಿದವೆಂದು ತಿಳಿದುಕೊಳ್ಳಬೇಕು. ಓ! ನರಾಂತಕನೆನಿಸಿದ ಯಮನೇ! ಬ್ರಹ್ಮ, ಇಂದ್ರ, ಉಪೇಂದ್ರ, ಶಿವ, ಯಮ, ಸೂರ್ಯ, ಅಗ್ನಿ, ವಾಯು, ಜಲ, ಭೂಮಿ, ಹಣ, ಕುಬೇರನೇ ಮುಂತಾದ ಪದವಿಗಳೂ, ಅವರ ಸಕಲ ಇಷ್ಟಾರ್ಥಪ್ರದಗಳಾದ ಲೋಕಗಳೂ ಸಹ ಧರ್ಮದಿಂದ ಸಾಧಿಸಿದುವುಗಳೆಂದೇ ತಿಳಿಯಬೇಕು.

೯. ಮನೋಹರವಾದ ದ್ವೀಪಗಳೂ, ಸುಮುಖವಾದ ವರ್ಷಗಳೂ, ನಾನಾ ವಿಧವಾದ ಶರೀರಗಳೂ, ಮನುಷ್ಯದೇಹದಲ್ಲಿದ್ದಾಗ ಸಂಪಾದಿಸಿದ ಧರ್ಮದ ಫಲಗಳೆಂದೇ ಭಾವಿಸಬೇಕು.

೧೦. ನಂದನವನದಂತಹ ಉದ್ಯಾನವನಗಳು, ದೇವೋದ್ಯಾನಗಳು, ಇವುಗಳೆಲ್ಲಾ ಪುಣ್ಯದಿಂದ ಲಭ್ಯವಾದುವುಗಳು. ಪುಣ್ಯವಂತರು ಸ್ವರ್ಗಲೋಕದಲ್ಲಿಯೇ ವಾಸಮಾಡುತ್ತಾರೆ.

೧೧. ಈ ಲೋಕದಲ್ಲಿ ಪುಣ್ಯವನ್ನು ಗಳಿಸಿದ ಜನರಿಗೆ ವಿಚಿತ್ರ ವಿಮಾನಗಳಲ್ಲಿ ಸಂಚರಿಸುವ ಯೋಗವು ಲಭಿಸುತ್ತದೆ. ಅವರಿಗೆ ದೇವಲೋಕದ ಅಪ್ಸರಸ್ತ್ರೀಯರು ಸ್ವಾಧೀನರಾಗುತ್ತಾರೆ. ಪುಣ್ಯವಂತರು ತಾವು ಮಾಡಿದ ಪುಣ್ಯಫಲರೂಪವಾಗಿ ತೇಜೋಮಯವಾದ ದೇಹವನ್ನು ಸಂಪಾದಿಸುತ್ತಾರೆ.

ತೈಜಸಾನಿ ಶರೀರಾಣಿ ಸದಾ ಪುಣ್ಯವತಾಂ ಫಲಂ ।
ರಾಜ್ಯಂ ನೃಪತಿಪೂಜಾ ಚ ಕಾಮಸಿದ್ಧಿಸ್ತಥೇಪ್ಸಿತಾ ॥ ೧೨ ॥

ಉಪಸ್ಕರಾಣಿ ಮುಖ್ಯಾನಿ ಫಲಂ ಪುಣ್ಯಸ್ಯದೃಶ್ಯತೇ ।
ರುಕ್ಮವೈಡೂರ್ಯದಂಡಾನಿ ಚಂದ್ರಾಂಶುಸದೃಶಾನಿ ಚ ॥ ೧೩ ॥

ಚಾಮರಾಣಿ ಸುರಾಧ್ಯಕ್ಷ ಭವಂತಿ ಶುಭಕರ್ಮಣಾಂ ।
(ಪೂರ್ಣೇಂದುಮಂಡಲಾಭೇನ ರಕ್ತಾಂಶುಕಸಿತೇನ ಚ ॥ ೧೪ ॥

ಧಾರ್ಯತಾಂ ಯಾನ್ತಿ ಛತ್ರೇಣ ನರಃ ಪುಣ್ಯೇನ ಕರ್ಮಣಾ ।)
ಜಯಶಂಖಸ್ವನಾದೇವ ಸೂತಮಾಗಧನಿಸ್ವನಂ ॥ ೧೫ ॥

ವರಾಸನಂ ಸಭೃಂಗಾರಂ ಫಲಂ ಪುಣ್ಯಸ್ಯ ಕರ್ಮಣಃ ।
ವರಾನ್ನಪಾನಂ ಗೀತಂ ಚ ನೃತ್ಯಮಾಲ್ಯಾನುಲೇಪನಂ ॥ ೧೬ ॥

---

೧೨. ನಾವು ಈ ಭೂಲೋಕದಲ್ಲಿ ಪುಣ್ಯವಂತರನ್ನು ಕಂಡುಹಿಡಿಯಬೇಕಾದರೆ ಅವರ ರಾಜಭೋಗ, ರಾಜಸನ್ಮಾನ, ಅವರ ಇಷ್ಟಾರ್ಥ ಸಿದ್ಧಿಗಳು, ಅವರ ಗುಡಿಗೋಪುರ ಗುಡಾರಗಳು ಇವುಗಳಿಂದ ಕಂಡು ಹಿಡಿಯಬಹುದು.

೧೩. ಚಿನ್ನದ ಒಡವೆಗಳು, ವಜ್ರವೈಡೂರ್ಯಾದಿ ಭೂಷಣಗಳು, ಚಂದ್ರ ಕಿರಣದಂತೆ ಶೋಭಿಸುವ ಛತ್ರಚಾಮರಗಳು, ಪೂರ್ಣೇಂದುಮಂಡಲ ಸದೃಶವಾದ ಸೌಂದರ್ಯ, ಚಿತ್ರ ವಿಚಿತ್ರ ವಸನ ಲಾಭ, ಇತ್ಯಾದಿಗಳೆಲ್ಲವೂ ಪುಣ್ಯಕರ್ಮಗಳಿಂದ ಲಭ್ಯವಾದ ಫಲವೆಂದು ಊಹಿಸಬೇಕು.

೧೪-೧೫. ಜಯಜಯಕಾರಗಳು, ಶಂಖಭೇರೀ ನಿನಾದಗಳು, ಸೂತಮಾಗಧರ ಸ್ತೋತ್ರ ಶಬ್ದಗಳು ಇವುಗಳ ವೈಭವಗಳೆಲ್ಲಾ ಪುಣ್ಯಕರ್ಮಗಳಿಂದ ಲಭ್ಯವಾದ ಫಲಗಳೆಂದು ತಿಳಿಯಬೇಕು.

೧೬. ಶ್ರೇಷ್ಠವಾದ ಆಸನಗಳು (ಕುರ್ಚಿ, ಸೋಫಾ, ಇತ್ಯಾದಿ) ಮತ್ತು ಇತರ ಭೋಗಾರ್ಹವಾದ ಕನ್ನಡಿ, ಬೀರು, ಕಂದೀಲು, ಗ್ಲೋಬು, ಚಿತ್ರಪಟಗಳು ಇವೇ ಮೊದಲಾದ ಪದಾರ್ಥಗಳೂ ಸಹ ಪುಣ್ಯಕರ್ಮವನ್ನು ಮಾಡಿದುದರ ಫಲಗಳು.

ರತ್ನವಸ್ತ್ರಾಣಿ ಮುಖ್ಯಾನಿ ಫಲಂ ಪುಣ್ಯಸ್ಯ ಕರ್ಮಣಃ ।
ರೂಪೌದಾರ್ಯಗುಣೋಪೇತಾಃ ಸ್ತ್ರಿಯಶ್ಚಾತಿಮನೋಹರಾಃ ॥ ೧೭ ॥

ವಾಸಃ ಪ್ರಾಸಾದಪೃಷ್ಠೇಷು ಭವಂತಿ ಶುಭಕರ್ಮಣಾಂ ।
ಸುವರ್ಣಕಿಂಕಿಣೀಮಿಶ್ರಚಾಮರಾಃ ಪೀಠಧಾರಿಣಃ ॥ ೧೮ ॥

ವಹಂತಿ ತುರಗಾ ದೇವ ನರಂ ಪುಣ್ಯೇನ ಕರ್ಮಣಾ ।
ಹೇಮಕಕ್ಷ್ಯೈಃ ಸಮಾತಂಗೈಶ್ಚಲತ್ಪರ್ವತಸನ್ನಿಭೈಃ ॥ ೧೯ ॥

ಖೇಲಾಂಘ್ರಿಪದವಿನ್ಯಾಸೈರ್ಯಾಂತಿ ಪುಣ್ಯೇನ ಕರ್ಮಣಾ ।
ಸರ್ವಕಾಮಪ್ರದೇ ದೇವೇ ಸರ್ವಾಪದ್ದುರಿತಾಪಹೇ ॥ ೨೦ ॥

---

೧೭. ಒಳ್ಳೇ ಚೊಕ್ಕ ಭೋಜನ, ಒಳ್ಳೊಳ್ಳೇ ಪಾನೀಯ ವಸ್ತುಗಳು, ಗೀತ ನೃತ್ಯಾದಿಗಳು, ಪರಮ ಶ್ರೇಷ್ಠವಾದ ಸುವಾಸನಾ ಪುಷ್ಪಗಳು, ಪರಿಮಳ ಗಂಧಲೇಪನ, ರತ್ನಾಭರಣಗಳು, ಬಹು ಬೆಲೆ ಬಾಳುವ ವಸ್ತ್ರಗಳು, ರೂಪಾದಾರ್ಯ ಗುಣೋಪೇತ ರಾಗಿಯೂ, ಮನೋಹರಾಕಾರರಾಗಿಯೂ ಇರುವ ಸುಂದರಿಯರು, ಇತ್ಯಾದಿಭೋಗ್ಯ ಸಾಮಗ್ರಿಗಳೆಲ್ಲವೂ ಅತಿಶಯ ಪುಣ್ಯಕರ್ಮದಿಂದ ದೊರೆಯುವ ಫಲಗಳಾಗಿವೆ.

೧೮. ಒಳ್ಳೊಳ್ಳೇ ಪ್ರಾಸಾದ (ಬಂಗಲಿ, ಮಹಡಿ, ಮ್ಯಾರ್ಷ ಇತ್ಯಾದಿ) ಗಳಲ್ಲಿ ವಾಸಮಾಡುತ್ತಾ ಸೋಫಗಳಮೇಲೆ ಸುಖವಾಗಿ ಕುಳಿತು ಚಿನ್ನದ ಕಿರುಗಂಟೆಗಳಿಂದ ಕೂಡಿರುವ ಚಾಮರಗಳಿಂದ ಬೀಸಿಸಿಕೊಳ್ಳಬೇಕಾದರೆ ಪುಣ್ಯಕರ್ಮಗಳನ್ನು ಯಥೇಚ್ಛವಾಗಿ ಮಾಡಿರಬೇಕು.

೧೯. ಒಳ್ಳೇ ಕುದುರೆಗಳ ಮೇಲೆ ಕುಳಿತು ಸವಾರಿ ಮಾಡಬೇಕಾದರೂ, ಓಡಾಡುವ ಪರ್ವತಗಳಂತಿರುವ ಮದ್ದಾನೆಗಳ ಮೇಲೆ ಚಿನ್ನದ ಅಂಬಾರಿಗಳನ್ನು ಹಾಕಿಸಿ ಅದರ ಮೇಲೆ ಕುಳಿತು ಸಂಚರಿಸಬೇಕಾದರೂ ಪುಣ್ಯವನ್ನು ಮಾಡಿರಬೇಕು.

೨೦-೨೧. ಜಗ್ಗುಹಾಕಿಕೊಂಡು ಠೀವಿಯಿಂದ ನಡೆಯಬೇಕಾದರೆ ಅದೂ ಒಂದು ಪುಣ್ಯವಿಶೇಷಫಲವಯ್ಯಾ! ಓ! ಯಮಧರ್ಮರಾಯ! ಸಕಲೇಷ್ಟಾರ್ಥ ಪ್ರದಾಯಕನಾದ, ಸಕಲ ಪಾಪಪರಿಹಾರಕನಾದ ಪರಮಾತ್ಮನಲ್ಲಿ ಭಕ್ತಿ ಹುಟ್ಟ ಬೇಕಾದರೂ ಜನ್ಮಾಂತರಗಳಲ್ಲಿ ಬಹಳ ಸುಕೃತ ಕರ್ಮಗಳನ್ನು ಮಾಡಿರಬೇಕು.

ವಹಂತಿ ಭಕ್ತಿಂ ಪುರುಷಾ ಸ್ಸದಾ ಪುಣ್ಯೇನ ಕರ್ಮಣಾ ।
ತಸ್ಯ ದ್ವಾರಾಣಿ ಯಜನಂ ತಪೋ ದಾನಂ ದಯಾ ಕ್ಷಮಾ ॥ ೨೧ ॥

ಬ್ರಹ್ಮಚರ್ಯಂ ಚ ಸತ್ಯಂ ಚ ತೀರ್ಥಾನುಸರಣಂ ಶುಭೇ ।
ಸ್ವಾಧ್ಯಾಯಸೇವಾ ಸಾಧೂನಾಂ ಸಹವಾಸಃ ಸುರಾರ್ಚನಂ ॥ ೨೨ ॥

ಗುರೂಣಾಂ ಚೈವ ಶುಶ್ರೂಷಾ ಬ್ರಾಹ್ಮಣಾನಾಂ ಚ ಪೂಜನಂ ।
ಇಂದ್ರಿಯಾಣಾಂ ಜಯಶ್ಚೈವ ಮಾರ್ದವಂ ಹ್ರೀರಮತ್ಸರಂ ॥ ೨೩ ॥

ತಸ್ಮಾದ್ಧರ್ಮಃ ಸದಾ ಕಾರ್ಯೋ ನಿತ್ಯಮೇವ ವಿಜಾನತಾ ।
ನ ಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯ ನ ವಾ ಕೃತಂ ॥ ೨೪ ॥

---

ಈ ಸುಕೃತದ ಬಾಗಿಲುಗಳಾವುವೆಂದರೆ :—ಯಜ್ಞಾದಿಕರ್ಮಾಚರಣೆ, ತಪಸ್ಸು, ದಾನ, ದಯೆ, ಮತ್ತು ಕ್ಷಮೆ ;

೨೨. ಬ್ರಹ್ಮಚರ್ಯವನ್ನು ಪಾಲಿಸುವಿಕೆ, ಸತ್ಯವಚನ, ತೀರ್ಥಯಾತ್ರೆಗಳನ್ನು ಮಾಡುವಿಕೆ, ಅಧ್ಯಯನ (ಜಪಸ್ತೋತ್ರ) ಮಾಡೋಣ, ಸಾಧುಗಳ ಸಹವಾಸದಲ್ಲಿರೋಣ, ನಿತ್ಯವೂ ದೇವತಾರ್ಚನೆ ಮಾಡೋಣ ;

೨೩. ಗುರುಗಳ ಶುಶ್ರೂಷೆ, ಬ್ರಾಹ್ಮಣರ ಪೂಜೆ, ಇಂದ್ರಿಯ ನಿಗ್ರಹ, ಮೃದುಸ್ವಭಾವ, ಪಾಪಕರ್ಮದಲ್ಲಿ ನಾಚಿಕೆ, ಒಬ್ಬರ ಮೇಲೂ ಹೊಟ್ಟೇಕಿಚ್ಚು ಪಡದೆ ಇರುವುದು ; ಇತ್ಯಾದಿ ಸತ್ಕರ್ಮಗಳೆಲ್ಲವೂ ಪುಣ್ಯಮಾರ್ಗದ ಬಾಗಿಲುಗಳೆಂದು ತಿಳಿಯಬೇಕು.

೨೪. ಬುದ್ಧಿವಂತರಾದ ಜನರು ಇದನ್ನೆಲ್ಲಾ ಚೆನ್ನಾಗಿ ತಿಳಿದು ಸರ್ವದಾ ಧರ್ಮಕಾರ್ಯಗಳಲ್ಲೇ ಆಸಕ್ತರಾಗಿರಬೇಕು. ಮೃತ್ಯುವು ಹೆಡಬಾಗಿಲಲ್ಲಿ ನಿಂತಾಗ ಇವನು ಈ ಕೆಲಸ ಮಾಡಿದಾನೆ, ಇನ್ನು ಇಷ್ಟು ಕೆಲಸ ಬಾಕಿಯೆಂಬುದನ್ನು ವಿಚಾರಿಸಿ ಅವನಿಗೆ ಕಾಲಾವಕಾಶವನ್ನು ಕೊಡುವುದಿಲ್ಲ.

**ಬಾಲವಿವಾಚರೇದ್ಧರ್ಮಮನಿತ್ಯಂ ದೇವ ಜೀವಿತಂ ।**
**ಕೋ ಹಿ ಜಾನಾತಿ ಕಸ್ಯಾದ್ಯ ಮೃತ್ಯುಃ ಕೇನ ಭವಿಷ್ಯತಿ　　॥ ೨೫ ॥**

**ಪಶ್ಯತೋಽಪ್ಯಸ್ಯ ಲೋಕಸ್ಯ ಮರಣಂ ಪುರತಃ ಸ್ಥಿತಂ ।**
**ಅಮರಸ್ಯೇವ ಚರಿತಮತ್ಯಾಶ್ಚರ್ಯಂ ಸುರೋತ್ತಮ　　॥ ೨೬ ॥**

---

೨೫. ಅಯ್ಯಾ! ಯಮಧರ್ಮರಾಯನೇ! ಚಿಕ್ಕ ಹುಡುಗನೇ ಆದಾಗ್ಯೂ ಬದುಕಿರುವವರೆವಿಗೆ ಪ್ರತಿದಿನವೂ ಧರ್ಮವನ್ನು ಆಚರಿಸಲೇಬೇಕು. ಈ ಜೀವಿತ (ಆಯುಷ್ಯ) ವು ಅನಿತ್ಯ (ಅಸ್ಥಿರ) ವಾದುದು. ಯಾರಿಗೆ ಯಾವ ಹೊತ್ತಿನಲ್ಲಿ ಏನು ಕಾರಣದಿಂದ ಮೃತ್ಯುವು ಪ್ರಾಪ್ತಿಯಾಗುವುದೆಂಬುದನ್ನು ತಿಳಿಯಲು ಯಾರಿಗೂ ಸಾಧ್ಯವೇ ಇಲ್ಲ.

(ಎಡವಿ ಸತ್ತುದನ್ನೂ, ಹೃದಯಚಲನವುನಿಂತು ಸತ್ತುದನ್ನೂ, ನೀರಿಗೆ ಮುಳುಗಿ ಸತ್ತುದನ್ನೂ, ಮನೆ ಹತ್ತಿ ಬೆಂಕಿಗೆ ಸಿಕ್ಕಿ ಸತ್ತುದನ್ನೂ, ಅನ್ನವು ಗಂಟಲಿಗೆ ಸಿಕ್ಕಿಕೊಂಡು ಸತ್ತುದನ್ನೂ, ಒಂದಾವರ್ತಿ ಶೀನುವಾಗ ಪ್ರಾಣಹೋದುದನ್ನೂ, ಇನ್ನೂ ಎಷ್ಟೆಷ್ಟೋ ವಿಧದಲ್ಲಿ ಮರಣ ಹೊಂದಿದ ಜನರನ್ನೂ ನಾವು ಕೇಳುತ್ತಿದ್ದೇವೆ. ನಿತ್ಯವೂ ನೋಡುತ್ತಿದ್ದೇವೆ. ವೃತ್ತಾಂತ ಪತ್ರಿಕೆಗಳಲ್ಲಿ ಓದುತ್ತಲೇ ಇದೇವೆ. ಇಷ್ಟಾದರೂ ನಮಗೆ ವಿಚಾರಶಕ್ತಿ ಮಾತ್ರ ಇಲ್ಲ. ಈ ತತ್ತ್ವವನ್ನು ಪ್ರತಿಕ್ಷಣವೂ ಪ್ರತಿ ಪ್ರಾಣಿಯೂ ವಿಚಾರಮಾಡಿ ಧರ್ಮಾಚರಣೆ ಮಾಡುವುದಾದರೆ ಕಲಿಯು ಕೃತವಾಗುವುದು. ಭೂಮಿಯು ಸ್ವರ್ಗವಾಗುವುದು. ಮುಖ್ಯವಾಗಿ ಮರಣಭಯವೆಂಬುದು ಅವರಿಗೆ ಇಲ್ಲವೇ ಇಲ್ಲ. (ಅವರು ಇಚ್ಛಾಮರಣಿಗಳು.) ಮೃತ್ಯುವನ್ನವರು ಮನೆಗೆ ಬಂದ ಅತಿಥಿಯಂತೆ ನಿರೀಕ್ಷಿಸುತ್ತಾರೆ. ಪ್ರತಿ ಪ್ರಾಣಿಗೂ ಜನನ ಮರಣ ಭಯವಿದ್ದೇ ಇರುವುದು. ಅದರ ಪರಿಹಾರೋಪಾಯವನ್ನೇ ಸಾವಿತ್ರಿಯು ಯಮನೊಡನೆ ನಿರೂಪಿಸಿರುತ್ತಾಳೆಯೆಂದು ಈ ಅಧ್ಯಾಯದಲ್ಲಿ ಮುಖ್ಯವಾಗಿ ತಿಳಿದು ಅದರಂತೆ ಲೋಕವು ಧರ್ಮಮಾರ್ಗದಲ್ಲಿ ಪ್ರವೃತ್ತವಾಗಲೆಂದು ಕೋರುತ್ತೇನೆ.)

೨೬. ಎಲೈ ಧರ್ಮಪುರುಷನೇ! ಪ್ರತಿ ದಿನವೂ ಸತ್ತ ಜನರನ್ನು (ಹೆಣವನ್ನು) ಕಟ್ಟಿ ಮಸಣಕ್ಕೆ ಹೊತ್ತುಕೊಂಡು ಹೋಗುತ್ತಿರುವುದನ್ನು ನಾವು ದಾರಿದಾರಿಯಲ್ಲೆಲ್ಲಾ ಕಣ್ಣುಬಿಟ್ಟು ನೋಡುತ್ತಿರುವೆವಾದರೂ ನಾನು ಮಾತ್ರ ಎಂದಿಗೂ ಸಾಯದೇ ಹೀಗೆಯೇ ಗೂಟ ಹೊಡೆದುಕೊಂಡು ಬದುಕಿಯೇ ಇರುತ್ತೇನೆಂದು ಲೋಕವು (ಜನವು) ತಿಳಿಯುತಲಿದೆಯಲ್ಲಾ! ಇದಕ್ಕಿಂತ ಇನ್ನಾವ ಆಶ್ಚರ್ಯ ಪ್ರಸಂಗವಿದೆ? ಹೇಳಯ್ಯಾ!

ಯುವತ್ವಾಪೇಕ್ಷಯಾ ಬಾಲೋ ವೃದ್ಧತ್ವಾಪೇಕ್ಷಯಾ ಯುವಾ ।
ಮೃತ್ಯೋರುತ್ಸಂಗಮಾರೂಢಃ ಸ್ಥವಿರಃ ಕಿಮಪೇಕ್ಷತೇ ॥ ೨೭ ॥
ಭುವಃ ಶೈಲಂ ಸಮಾರೂಢಃ ತತೋ ವೃಕ್ಷಾಗ್ರಮಾಶ್ರಿತಃ ।
ತತ್ರಾಪ್ಯವಿಂದತಸ್ತ್ರಾಣಂ ಮೃತ್ಯೋರ್ಭೀತಸ್ಯ ಕಾ ಗತಿಃ ॥ ೨೮ ॥
ನ ಭಯಂ ಮರಣಾದ್ದೇವ ಪ್ರಾಣಿನಾಮಧಿಕಂ ಕ್ವಚಿತ್ ।
ತತ್ರಾಪಿ ನಿರ್ಭಯಾಃ ಸಂತಃ ಸದಾ ಸುಕೃತಕಾರಿಣಃ ॥ ೨೯ ॥

ಯಮ ಉವಾಚ

ತುಷ್ಟೋಽಸ್ಮಿ ತೇ ವಿಶಾಲಾಕ್ಷಿ ವಚನೈರ್ಧರ್ಮಸಂಗತೈಃ ।
ವಿನಾ ಸತ್ಯವತಃ ಪ್ರಾಣಾನ್ವರಂ ವರಯ ಮಾ ಚಿರಂ ॥ ೩೦ ॥

---

೨೭. ಚಿಕ್ಕ ಹುಡುಗನು ತಾನು ಯುವಕನಾಗಬೇಕೆಂದು ಅಪೇಕ್ಷಿಸುತ್ತಿರುತ್ತಾನೆ. ಯುವಕನು ವಾರ್ಧಿಕ್ಯಾವಸ್ಥೆಯನ್ನು ಬಹುಜಾಗ್ರತೆ ಹೊಂದಿ ಬಹು ಬಯಕೆಗಳನ್ನು ಅಪೇಕ್ಷಿಸುತ್ತಿರುತ್ತಾನೆ. ವಯಸ್ಸು ಕಳೆದು ತೀರಹಣ್ಣಾದ ಮುದುಕನು ಏನು ಅಪೇಕ್ಷಿಸಿದರೆ ತಾನೇ ಏನು?

೨೮. ಎಲ್ಲರಿಗೂ ಅಂದರೆ ಈಗಲೋ ಆಗಲೋ ಸಾಯಲಿಕ್ಕೆ ಸಿದ್ಧನಾದ ಮನುಷ್ಯನಿಗೂ ಸಹ ಬದುಕಿರಬೇಕೆಂಬ ಅಪೇಕ್ಷೆಯು ತುಂಬಿ ಹೇಗಾದರೂ ಮೃತ್ಯುವಿನ ದವಡೆಯಿಂದ ತಪ್ಪಿಸಿಕೊಳ್ಳಬೇಕೆಂಬ ಆಶೆಯಿದೆಯಾದರೂ, ಬದುಕಿಕೊಳ್ಳುತ್ತೇನೆಂದು ಪರ್ವತಾಗ್ರದ ತುದಿಗೆ ಏರಿಹೋದಾಗ್ಗೂ ಮರದ ತುದಿಯ ಮೇಲೆ ಹೋಗಿ ಕುಳಿತಾಗ್ಗೂ ಅಲ್ಲಿಯೂ ಮೃತ್ಯುವಿನಿಂದ ಬಿಡುಗಡೆ ಹೊಂದಲಾರನು. ಮೃತ್ಯುಭೀತನಿಗೆ ಏನೂ ಗತಿಯಿಲ್ಲ.

೨೯. ಮರಣಭಯಕ್ಕಿಂತ ಬೇರೆ ಭಯವೆಂಬುದು ಇಲ್ಲವೇ ಇಲ್ಲ, ಪ್ರಾಣಗಳಿಗಿಂತ ಹೆಚ್ಚಾದ, ಬೇರೇ ಅಪೇಕ್ಷಿತ ವಸ್ತುವು ಮತ್ತೊಂದಿಲ್ಲ. ಹೀಗಿರುವಲ್ಲಿ ಸುಕೃತಶಾಲಿಗಳಾದವರು ಮಾತ್ರ ಪ್ರಾಣಗಳನ್ನು ತೃಣಗಣಾಯಮಾನವಾಗಿ ಕಾಣುವರಲ್ಲದೆ ಮರಣವಿಷಯದಲ್ಲಿ ಎಳ್ಳಷ್ಟೂ ಭಯಪಡುವುದೇ ಇಲ್ಲ.

೩೦. ಸಾವಿತ್ರಿಯು ಹೇಳಿದ ಈ ಧರ್ಮೋಪನ್ಯಾಸವನ್ನು ಕೇಳಿ ಯಮನು ಹೇಳುತ್ತಾನೆ ;—ಎಲೈ ವಿಶಾಲಾಕ್ಷಿಯಾದ ಸಾವಿತ್ರಿಯೇ! ಧರ್ಮಸಂಗತವಾದ ನಿನ್ನ ಮಾತುಗಳನ್ನು ಕೇಳಿ ಬಹಳ ಸಂತೋಷವುಂಟಾಯಿತು. ಸತ್ಯವಂತನ ಪ್ರಾಣವಿನಹ ಬೇರೆ ಇನ್ನೇನಾದರೂ ವರವನ್ನು ಕೊಡುತ್ತೇನೆ, ಕೇಳಿಕೋ, ಎಂದು ಹೇಳಿದನು.

**ಸಾವಿತ್ರ್ಯುವಾಚ**

**ವರಯಾಮಿ ತ್ವಯಾ ದತ್ತಂ ಪುತ್ರಾಣಾಂ ಶತಮೌರಸಂ ।**
**ಅನಪತ್ಯಸ್ಯ ಲೋಕೇಷು ಗತಿಃ ಕಿಲ ನವಿದ್ಯತೇ ॥ ೩೧ ॥**

**ಯಮ ಉವಾಚ**

**ಕೃತೇನ ಕಾಮೇನ ನಿವರ್ತ ಭದ್ರೇ ಭವಿಷ್ಯತೀದಂ ಸಕಲಂ ತ್ವಯೋಕ್ತಂ ।**
**ಮಮೋಪರೋಧಶ್ಚ ತವ ಕ್ಲಮಃ ಸ್ಯಾತ್ತಥಾಽಧುನಾ ತೇನ ತವ ಬ್ರವೀಮಿ**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ**
**ಮಾರ್ಕಂಡೇಯ ವಜ್ರಸಂವಾದೇ ಸಾವಿತ್ರ್ಯುಪಾಖ್ಯಾನೆ ತೃತೀಯ**
**ವರಲಾಭೋ ನಾಮ ಏಕೋನಚತ್ವಾರಿಂಶೋಽಧ್ಯಾಯಃ**

---

೩೧. ಆದಕ್ಕೆ ಸಾವಿತ್ರಿಯು ಹೇಳಿದುದೇನೆಂದರೆ :—ಓ ಮಹಾನುಭಾವನಾದ ಧರ್ಮರಾಜನೇ! ನನ್ನ ಹೊಟ್ಟೆಯಲ್ಲಿ ನೂರುಮಂದಿ ಔರಸಪುತ್ರರು ಹುಟ್ಟುವಂತೆ ಅನುಗ್ರಹಮಾಡಯ್ಯಾ! ಮಕ್ಕಳಿಲ್ಲದವರಿಗೆ ಲೋಕದಲ್ಲಿ ಏನೇನೂ ಗತಿಯಿಲ್ಲವಾದ್ದರಿಂದ ಇದೊಂದು ವರವನ್ನು ಕರುಣಿಸುವಂತೆ ಬೇಡಿಕೊಳ್ಳುತ್ತೇನೆ.

೩೨. ಯಮನು ಸಾವಿತ್ರಿಗೆ ಹೇಳಿದುದೇನೆಂದರೆ :—ನೀನು ನನ್ನನ್ನು ಕೇಳಿಕೊಂಡ ಪ್ರಕಾರ ನಿನಗೆ ನೂರುಮಂದಿ ಮಕ್ಕಳಾಗುವಂತೆ ವರವನ್ನು ಕೊಟ್ಟಿದೇನೆ. ನನ್ನ ಮಾತನ್ನು ನೀನು ನಂಬಿ ಇನ್ನಾದರೂ ಹಿಂತಿರುಗಿ ಹೋಗು. ನಿನಗೆ ಬಹಳ ಬಳಲಿಕೆಯಾಗುವುದಾದುದರಿಂದ ನನ್ನ ಮಾತನ್ನು ಈಗಲಾದರೂ ಕೇಳೆಂದು ಯಮಧರ್ಮರಾಜನು ಸಾವಿತ್ರಿಯೊಡನೆ ಹೇಳಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ದ್ವಿತೀಯ ಖಂಡದಲ್ಲಿ ಸಾವಿತ್ರೀಚರಿತ್ರೆಯಲ್ಲಿ ಮೂರನೇವರಲಾಭವೆಂಬ
ಹೆಸರಿನ ಮೂವತ್ತೊಂಭತ್ತನೆಯ ಅಧ್ಯಾಯ ಮುಗಿಯಿತು.

॥ ಶ್ರೀ ॥

---

## ಅಥ

# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ

## ಚತ್ವಾರಿಂಶತ್ತಮೋಽಧ್ಯಾಯಃ

---

### ಸಾವಿತ್ರ್ಯುವಾಚ

ಸರ್ವಧರ್ಮವಿಧಾನಜ್ಞಃ ಸರ್ವಧರ್ಮಪ್ರವರ್ತಕಃ ।
ತ್ವಮೇವ ಜಗತಾಂ ನಾಥಃ ಪ್ರಜಾಸಂಯಮನೋ ಯಮಃ ॥ ೧ ॥

ಕರ್ಮಣಾಮಾನುರೂಪ್ಯೇಣ ಯಸ್ಮಾದ್ಯಮಯಸಿ ಪ್ರಜಾಃ ।
ತಸ್ಮಾತ್ತ್ವಮುಚ್ಯಸೇ ದೇವ ಯಮ ಇತ್ಯೇವ ನಾಮತಃ ॥ ೨ ॥

---

## ನಲವತ್ತನೆಯ ಅಧ್ಯಾಯವು.

೧. ಸಾವಿತ್ರಿಯು ಯಮನೊಡನೆ ಮತ್ತೂ ಹೇಳುತ್ತಾಳೆ.—ಎಲೈ ಯಮ ಧರ್ಮರಾಜನೆ! ನೀನು ಸಕಲ ಧರ್ಮವಿಧಾನಗಳನ್ನೂ ತಿಳಿದವನು. ಸಕಲಧರ್ಮ ಪ್ರವರ್ತಕನಾಗಿಯೂ ಇರತಕ್ಕವನು. ಸಕಲ ಪ್ರಪಂಚಕ್ಕೂ ನೀನೇ ಒಡೆಯನು. ಪ್ರಜೆಗಳನ್ನು ಸಂಯಮನ (ಹಿಡಿತದಲ್ಲಿಟ್ಟಿರುವ) ಶಕ್ತಿಯಿಂದಿಟ್ಟಿರುವುದರಿಂದ ನಿನಗೆ ಯಮನೆಂದು ಹೆಸರು ಬಂದಿದೆ,

೨. ಪ್ರಜೆಗಳು ತಾವು ತಾವು ಮಾಡಿದ ಪುಣ್ಯ-ಪಾಪಕರ್ಮಗಳನ್ನನುಸರಿಸಿ ನೀನು ಅವರಿಗೆ ಫಲವನ್ನು ಕೊಡುತ್ತಿರುವೆ. ಇದಕ್ಕೆ ನಿಯಮನವೆಂದೂ ಹೇಳು ವುದರಿಂದ ಈ ನಿಯಾಮಕನಾದ ನಿನಗೆ ಯಮನೆಂದು ಹೆಸರು ಸಲ್ಲುವುದು ನ್ಯಾಯ ವಾಗಿಯೇ ಇದೆ.

ಧರ್ಮೇಣೇಮಾಃ ಪ್ರಜಾಃ ಸರ್ವಾ ಯಥಾ ರಂಜಯಸೇ ಪ್ರಭೋ ।
ತಸ್ಮಾತ್ತೇ ಧರ್ಮರಾಜೇತಿ ನಾಮ ಸತ್ಯಂ ನಿಗದ್ಯತೇ ॥ ೩ ॥

ಸುಕೃತಂ ದುಷ್ಕೃತಂ ಚೋಭೇ ಪುರೋಧಾಯ ಯಥಾ ಜನಾಃ ।
ತ್ವತ್ಸಕಾಶಮಥಾಯಾಂತಿ ತಸ್ಮಾತ್ತ್ವಂ ಮೃತ್ಯುರುಚ್ಯಸೇ ॥ ೪ ॥

ಸರ್ವೇಷಾಮಥ ಭೂತಾನಾಂ ಯಸ್ಮಾದಂತಕರೋ ಭವಾನ್ ।
ತಸ್ಮಾತ್ತ್ವಮನ್ತಕಃ ಪ್ರೋಕ್ತಃ ಸರ್ವದೇವೈರ್ಮಹಾದ್ಯುತೇ ॥ ೫ ॥

ವಿವಸ್ವತಸ್ತ್ವಂ ತನಯಃ ಪ್ರಥಮಃ ಪರಿಕೀರ್ತಿತಃ ।
ತಸ್ಮಾದ್ವೈವಸ್ವತೋ ನಾಮ್ನಾ ಸರ್ವದೇವೇಷು ಕಥ್ಯಸೇ ॥ ೬ ॥

ಕಾಲಂ ಕಲಾದ್ಯಂ ಕಲಯನ್ಸರ್ವೇಷಾಂ ತ್ವಂ ಹಿ ತಿಷ್ಠಸಿ ।
ತಸ್ಮಾತ್ಕಾಲೇತಿ ತೇ ನಾಮ ಪ್ರೋಚ್ಯತೇ ತತ್ವದರ್ಶಿಭಿಃ ॥ ೭ ॥

---

೩. ನೀನು ಸಕಲ ಪ್ರಾಣಿಗಳನ್ನೂ ಅದಾವಕಾರಣದಿಂದ ಧರ್ಮಬುದ್ಧಿಯಲ್ಲಿ ನಿರತರಾಗುವಂತೆ ರಂಜನಮಾಡುತ್ತಿರುವೆಯೋ, ಈ ಕಾರಣದಿಂದ ನಿನಗೆ ಧರ್ಮರಾಜನೆಂಬ ಯಥಾರ್ಥವಾದ ನಾಮವು ಸಲ್ಲುವುದು ಸಹಜವಾಗಿಯೇ ಇದೆ.

೪. ಜನರು ಈ ಲೋಕದಲ್ಲಿ ಮಾಡಿದ ಪುಣ್ಯಪಾಪಕರ್ಮಗಳನ್ನು ಮಾತ್ರ ತಮ್ಮ ಮುಂದೆ ಬಿಟ್ಟುಕೊಂಡು ನಿನ್ನ ಸನ್ನಿಧಿಗೆ ಬರುವರಾದ್ದರಿಂದ ನಿನಗೆ ಮೃತ್ಯುವೆಂಬ ಹೆಸರು ಬಂದಿದೆ.

೫. ಸಕಲ ಭೂತ (ಪ್ರಾಣಿ) ಗಳಿಗೂ ನೀನು ಕೊನೆಗಾಲವನ್ನು ಕಾಣಿಸುವನಾದ್ದರಿಂದ ನಿನಗೆ ಅಂತಕನೆಂಬ ಹೆಸರು ಬಂದಿದೆ.

೬. ಮೊದಲು ಮೊದಲು ವಿವಸ್ವತಮನುವಿಗೆ ನೀನು ಮಗನಾಗಿ ಹುಟ್ಟಿದೆಯಾದ್ದರಿಂದ ಸಕಲ ದೇವತೆಗಳೂ ನಿನ್ನನ್ನು ವೈವಸ್ವತನೆಂದು ಕರೆಯುತ್ತಾರೆ.

೭. ಕಾಲವನ್ನೂ ಕಲಾದಿ (ಕಾಲಾವಯವಗಣನೆ) ಗಳನ್ನೂ ಸಕಲ ಪ್ರಾಣಿಗಳ ಆಯುರ್ದಾಯ ಪ್ರಕಾರ ನೀನು ಲೆಕ್ಕಮಾಡುತ್ತಾ ಕಾಲಗಳೆಯುವನಾದ್ದರಿಂದ ತತ್ವದರ್ಶಿಗಳಾದವರು ನಿನ್ನನ್ನು ಕಾಲನೆಂದು ಕರೆಯುತ್ತಾರೆ.

**ಆಯುಷ್ಯೇ ಕರ್ಮಣಿ ಕ್ಷೀಣೇ ಗೃಹ್ಣಾಸಿ ಪ್ರಸಭಂ ಜನಂ ।**
**ತಸ್ಮಾತ್ತ್ವಂ ಕಥ್ಯಸೇ ಲೋಕೇ ಸರ್ವಪ್ರಾಣಹರೇತಿ ವೈ ॥ ೮ ॥**

**ತವ ಪ್ರಸಾದಾದ್ದೇವೇಶ ಧರ್ಮೇ ತಿಷ್ಠಂತಿ ಜಂತವಃ ।**
**ತವ ಪ್ರಸಾದಾದ್ದೇವೇಶ ಸಂಕರೋ ನೈವ ಜಾಯತೇ ॥ ೯ ॥**

**ಸತಾಂ ಸದಾ ಗತಿರ್ದೇವ ತ್ವಮೇವ ಪರಿಕೀರ್ತಿತಃ ।**
**ಜಗತೋಽಸ್ಯ ಜಗನ್ನಾಥ ಮರ್ಯಾದಾಪರಿಪಾಲಕಃ ॥ ೧೦ ॥**

**ಪಾಹಿ ಮಾಂ ತ್ರಿದಶಶ್ರೇಷ್ಠ ದುಃಖಿತಾಂ ಶರಣಾಗತಾಂ ।**
**ಪಿತರೌ ಚ ತಥೈವಾಸ್ಯ ರಾಜಪುತ್ರಸ್ಯ ದುಃಖಿತೌ ॥ ೧೧ ॥**

---

೮. ಅವರವರ ಕರ್ಮಾನುಸಾರವಾಗಿ ಆಯುಸ್ಸು ಕಳೆದುಹೋದ ಮರುಕ್ಷಣ ದಲ್ಲಿಯೇ ನೀನು ಬಲಾತ್ಕಾರವಾಗಿ ಜನರ ಜೀವ (ಪ್ರಾಣ-ಮನಸ್ಸು) ವನ್ನೂ ಎಳೆದು ಕೊಂಡು ಹೋಗುತ್ತಿರುವ ನಿನಗೆ ಸರ್ವಪ್ರಾಣಹರನೆಂದೂ ಹೆಸರುಬಂದಿದೆ.

೯. ಎಲೈ ಮಹಾನುಭಾವನಾದ ಯಮನೇ! ನಿನ್ನ ಅನುಗ್ರಹದಿಂದಲೇ ಪ್ರಜೆಗಳು ಧರ್ಮನಿರತರಾಗಿರುತ್ತಾರೆ. (ಮೃತ್ಯುಭಯದಿಂದ). ಮತ್ತು ನಿನ್ನ ಅನುಗ್ರಹದಿಂದ ಜಾತಿಸಂಕರವಾಗುವುದಿಲ್ಲ. (ಮರಣಭಯವಿಲ್ಲದಿದ್ದರೆ ಲೋಕ ವೆಲ್ಲವೂ ಕಲುಬೆರಕೆಯಾಗಿ ಜಾತಿನೀತಿಯಿಲ್ಲದೆ ಕೆಟ್ಟು ಹಾಳಾಗುವುದೆಂದು ತಾತ್ಪರ್ಯ)

೧೦. ಸತ್ಪುರುಷರನ್ನು ಕಾಪಾಡುವುದರಲ್ಲಿ ಬಹಳ ಸಮರ್ಥನೆಂದು ನೀನು ಲೋಕೋತ್ತರವಾದ ಕೀರ್ತಿಯನ್ನು ಸಂಪಾದಿಸಿಕೊಂಡಿರುತ್ತೀಯೆ. ನೀನು ಈ ಸಕಲ ಪ್ರಪಂಚದ ಮರ್ಯಾದೆಯನ್ನೂ ಪರಿಪಾಲನೆ ಮಾಡುವವನಾಗಿದ್ದೀಯೆ.

೧೧. ಎಲೈ ಯಮಧರ್ಮರಾಜನೆ! ನಾನು ಬಹಳ ದುಃಖದೆಸೆಯಲ್ಲಿ ಬಿದ್ದಿದ್ದೇನೆ. ನೀನೇ ಗತಿಯೆಂದು ನಿನ್ನನ್ನು ಶರಣುಹೊಂದಿದ್ದೇನೆ. ಈಗ ಮೃತನಾಗಿ ಬಿದ್ದಿರುವ ಈ ರಾಜಕುಮಾರನ ತಾಯಿತಂದೆಗಳು ಅಪಾರವಾದ ದುಃಖಸಾಗರದಲ್ಲಿ ಮುಳುಗಿದ್ದಾರೆ.

## ಯಮ ಉವಾಚ

ಸ್ತುತೇನ ಭಕ್ತ್ಯಾ ಧರ್ಮಜ್ಞೇ ಮಯಾ ತುಷ್ಟೇನ ಸತ್ಯವಾನ್ ।
ತವ ಭರ್ತಾ ವಿಮುಕ್ತೋಽಯಂ ಲಬ್ಧಕಾಮಾ ವ್ರಜಾಬಲೇ ॥ ೧೨ ॥

ರಾಜ್ಯಂ ಕೃತ್ವಾ ತ್ವಯಾ ಸಾರ್ಧಂ ವತ್ಸರಾಶೀತಿಪಂಚಕಂ ।
ನಾಕಪೃಷ್ಠಮಥಾರುಹ್ಯ ತ್ರಿದಶೈಸ್ಸಹ ರಂಸ್ಯತೇ ॥ ೧೩ ॥

ಸ್ತೋತ್ರೇಣಾನೇನ ಧರ್ಮಜ್ಞೇ ಕಲ್ಯಮುತ್ಥಾಯ ಯಶ್ಚ ಮಾಂ ।
ಕೀರ್ತಯಿಷ್ಯತಿ ತಸ್ಯಾಪಿ ದೀರ್ಘಮಾಯುರ್ಭವಿಷ್ಯತಿ ॥ ೧೪ ॥

---

೧೨. ಯಮನು ಹೇಳುತ್ತಾನೆ.—ಎಲೌ ಸಾವಿತ್ರಿಯೇ! ನೀನು ನನ್ನನ್ನು ಈ ವಿಶೇಷವಾದ ಸ್ತೋತ್ರದಿಂದ ಹೊಗಳಿದುದು ನನಗೆ ಬಹು ಸಂತೋಷವುಂಟಾಗಿದೆ. ಈ ಸಂತೋಷದ ಫಲವಾಗಿ ನಿನ್ನ ಗಂಡನ ಪ್ರಾಣಗಳನ್ನು ಉಳಿಸಿಕೊಡುತ್ತೇನೆ. ನಿನ್ನ ಗಂಡನನ್ನು ಬಿಗಿದು ಕಟ್ಟಿರುವ ಕಾಲಪಾಶವನ್ನು ಬಿಚ್ಚಿಬಿಟ್ಟಿದೇನೆ. ನಿನ್ನ ಕೋರಿಕೆಯಂತೆ ಈ ನಿನ್ನ ಗಂಡನಿಂದ ನಿನಗೆ ನೂರು ಮಕ್ಕಳಾಗುತ್ತಾರೆ. ಇನ್ನು ಮನೆಗೆ ನಿರ್ಭಯಳಾಗಿ ಹೋಗು.

೧೩. ನನ್ನ ವರಬಲದಿಂದ ಬದುಕಿರುವ ನಿನ್ನ ಗಂಡನು ನಿನ್ನೊಡನೆ ಭೋಗ ಭಾಗ್ಯಗಳನ್ನನುಭವಿಸುತ್ತಾ ನಾಲ್ಕು ನೂರುವರ್ಷ ಕಾಲ ರಾಜ್ಯಭಾರವನ್ನು ಮಾಡಿ ಆ ಬಳಿಕ ನಿನ್ನೊಡನೆ ಸ್ವರ್ಗವನ್ನಾರೋಹಿಸಿ ಅಲ್ಲಿ ದೇವತೆಗಳೊಡನೆ ಸೇರಿ ಸ್ವರ್ಗ ಸುಖಗಳನ್ನೂ ಸಹ ಸೂರೆಗೊಳ್ಳುತ್ತಾನೆ.

೧೪. ಎಲೌ ಸಾವಿತ್ರಿಯೇ! ಲೋಕೋಪಕಾರಕ್ಕಾಗಿ ಇನ್ನೊಂದು ವರವನ್ನು ಕೊಡುತ್ತೇನೆ. ಅದೇನೆನ್ನುವಿಯೋ ಹೇಳುವೆನು, ಕೇಳು:—ಪ್ರತಿದಿವಸವೂ ಬೆಳಗ್ಗೆ ಎದ್ದಕ್ಷಣವೇ ಪೂರ್ವೋಕ್ತಪ್ರಕಾರವಾಗಿ ನೀನು ನನ್ನನ್ನು ಮಾಡಿದ ಈ ಸ್ತೋತ್ರ ವನ್ನು ಯಾವ ಮನುಷ್ಯರು ಬಾಯಿಯಲ್ಲಿ ಉಚ್ಚಾರಣೆ ಮಾಡುತ್ತಾ ನನ್ನನ್ನು ಸ್ಮರಿ ಸುತ್ತಾರೋ, ಅಂಥವರಿಗೂ ಸಹ ನಾನು ದೀರ್ಘಾಯುಷ್ಯವನ್ನು ನಿನ್ನ ಗಂಡನಿಗೆ ಈಗ ಕೊಟ್ಟಂತೆ ಕೊಡುತ್ತೇನಮ್ಮಾ! (ನೀನು ಮಾಡಿದ ಈ ಸ್ತೋತ್ರದಿಂದ ಲೋಕೋಪಕಾರವಾಯಿತೆಂದು ತಾತ್ಪರ್ಯ.)

## ಪುಷ್ಕರ ಉವಾಚ

**ಏತಾವದುಕ್ತ್ವಾ ಭಗವಾನ್ಯಮುಸ್ತು ।**
**ವಿಮುಚ್ಯ[7]ತಂ ರಾಜಸುತಂ ಮಹಾತ್ಮಾ ॥**
**ಅದರ್ಶನಂ ತತ್ರ ಜಗಾಮ ರಾಮ ।**
**ಕಾಲೇನ ಸಾರ್ಧಂ ಸಹ ಮೃತ್ಯು ನಾ ಚ ॥ ೧೫ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ ವಜ್ರಸಂವಾದೇ ಸಾವಿತ್ರ್ಯುಪಾಖ್ಯಾನೇ ಚತ್ವಾರಿಂಶತ್ತಮೋಽಧ್ಯಾಯಃ**

---

೧೫. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ.—ಎಲೈ ಪರಶುರಾಮನೆ! ಕೇಳು. ಇಷ್ಟು ಮಾತನ್ನಾಡಿದ ಬಳಿಕ ಯಮನು ಆ ಸತ್ಯವಂತನನ್ನು ಬದುಕಿಸಿಕೊಟ್ಟಿದ್ದೇನೆಂದು ಹೇಳುತ್ತಿರುವಷ್ಟರಲ್ಲಿಯೇ ಅವನ ರೂಪ ಕಣ್ಮರೆಯಾಯಿತು. ಈರೀತಿ ಅವನು ಅದೃಶ್ಯನಾಗಿ ತನ್ನ ಜತೆಯಲ್ಲಿ ಬಂದಿದ್ದ ಕಾಲಮೃತ್ಯುವನ್ನು ಕರೆದುಕೊಂಡು ತನ್ನ ಲೋಕಕ್ಕೆ ಪ್ರಯಾಣಮಾಡಿದನು.

ಇಲ್ಲಿಗೆ ವಿಷ್ಣುಧರ್ಮೋತ್ತರಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ ದ್ವಿತೀಯ ಖಂಡದಲ್ಲಿ ಸಾವಿತ್ರೀ ಚರಿತ್ರೆಯೆಂಬ ಹೆಸರಿನ ನಲವತ್ತನೆಯ ಅಧ್ಯಾಯ ಮುಗಿಯಿತು.



॥ ಶ್ರೀಃ ॥

# ಅಥ
# ವಿಷ್ಣುಧರ್ಮೋತ್ತರಮಹಾಪುರಾಣೇ ದ್ವಿತೀಯಖಂಡೇ
## ಏಕಚತ್ವಾರಿಂಶತ್ತಮೋಽಧ್ಯಾಯಃ

**ಪುಷ್ಕರ ಉವಾಚ**

**ಸಾವಿತ್ರೀ ಚ ತತಃ ಸಾಧ್ವೀ ಜಗಾಮ ವರವರ್ಣಿನೀ ।**
**ಯಥಾಯಥಾ ಗತೇನೈವ ಯತ್ರಾಸೌ ಸತ್ಯವಾನ್ಮೃತಃ ॥ ೧ ॥**

**ಸಾ ಸಮಾಸಾದ್ಯ ಭರ್ತಾರಂ ತಸ್ಯೋತ್ಸಂಗಗತಂ ಶಿರಃ ।**
**ಕೃತ್ವಾ ನಿವೇಶ ತನ್ವಂಗೀ ಲಂಬಮಾನೇ ದಿವಾಕರೇ ॥ ೨ ॥**

---

## ನಲವತ್ತೊಂದನೆಯ ಅಧ್ಯಾಯವು

೧. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ.—ಕೇಳಯ್ಯಾ! ಪರಶುರಾಮ! ಮುಂದೆ ನಡೆದ ಕಥೆಯನ್ನು ಹೇಳುತ್ತೇನೆ. ಮಹಾಪತಿವ್ರತೆಯಾದ ಪ್ರಾತಃಸ್ಮರಣೀಯಳಾದ ಸಾವಿತ್ರೀದೇವಿಯು ಯಮನು ಅದೃಶ್ಯನಾದೊಡನೆಯೇ ತಾನು ಬರುವಾಗ ಯಾವ ಯಾವ ದಾರಿಯಲ್ಲಿ ಬಂದಳೋ ಆ ದಾರಿಯನ್ನನುಸರಿಸಿ ತನ್ನ ಗಂಡನ ದೇಹವು ಪತನವಾಗಿ ಎಲ್ಲಿ ಬಿದ್ದಿತ್ತೋ ಆ ಸ್ಥಳಕ್ಕೆ ಹಿಂತಿರುಗಿ ಬಂದು ಸೇರಿದಳು.

೨. ಅಷ್ಟು ಹೊತ್ತಿಗೆ ಸಾಯಂಕಾಲದ ಸಮಯವಾಗಿತ್ತು. ಸೂರ್ಯನು ಪಶ್ಚಿಮದಿಕ್ಕಿನಲ್ಲಿ ಮುಳುಗುವುದರಲ್ಲಿದ್ದನು. ಅಂತಹ ಆ ಇಳಿಹೊತ್ತಿನಲ್ಲಿ ಸಾವಿತ್ರಿಯು ಗಂಡನ ಹೆಣದ ಬಳಿಗೆ ಬಂದು ಆ ಹೆಣದ ತಲೆಯನ್ನು ಎತ್ತಿ ತನ್ನ ತೊಡೆಯಮೇಲೆ ಮಲಗಿಸಿಕೊಂಡಳು.

**ಸತ್ಯವಾನಪಿ ನಿರ್ಮುಕ್ತೋ ಧರ್ಮರಾಜ್ಞಾ ಶನೈಃ ಶನೈಃ**
**ಉನ್ಮೀಲಯತಿ ತೇ ನೇತ್ರೇ ಪ್ರಸ್ಯಂದತ ಚ ಭಾರ್ಗವ ॥ ೩ ॥**

**ತತಃ ಪ್ರತ್ಯಾಗತಃ ಪ್ರಾಣಃ ಪ್ರಿಯಾಂ ವಚನಮಬ್ರವೀತ್ ।**
**ಕ್ವಾಸೌ ಪ್ರಯಾತಃ ಪುರುಷೋ ಯೋ ಮಾ ಮಾಕೃಷ್ಯ ಗಚ್ಛತಿ ॥ ೪ ॥**

**ಜಾನಾಮಿ ನ ವರಾರೋಹೇ ಕಶ್ಚಾಸೌ ಪುರುಷಃ ಶುಭೇ ।**
**ವನೇಸ್ಮಿಂಶ್ಚಾರುಸರ್ವಾಂಗಿ ಸುಪ್ತಸ್ಯ ಚ ಚಿರಂ ಗತಂ ॥ ೫ ॥**

---

೩. ಆಷ್ಟುಹೊತ್ತಿಗೆ ಕಾಲಪಾಶದಿಂದ ಬಿಡುಗಡೆ ಹೊಂದಿದ್ದ ಸತ್ಯವಂತನ ಪ್ರಾಣಗಳು ಅದೃಶ್ಯರೂಪದಿಂದ ಹಿಂತಿರುಗಿ ಬಂದು (ಈಗ ಪ್ರಪಂಚದಲ್ಲಿ ಹರಡಿರುವ ಸಿನೀಮಾ ಟಾಕೀಸ್‌ಗಳಲ್ಲಿ ಇಂತಹ ದೃಶ್ಯಗಳನ್ನೆಲ್ಲಾ ಕಣ್ಣೆದುರಿಗೆ ತೋರಿಸುತ್ತಿರುವರು. ಸಾವಿತ್ರೀಚರಿತ್ರೆಯೂ ಸಿನೀಮಾ ಪ್ರಪಂಚದಲ್ಲಿ ಪ್ರಕಟವಾಗಿರುವುದರಿಂದ ಆ ನೋಟವನ್ನು ನೋಡಿರಿ. ಈ ಅದ್ಭುತ ಪರೋಕ್ಷದೃಶ್ಯಗಳು ಪ್ರತ್ಯಕ್ಷವಾಗಿರುವುವು.) ಸತ್ಯವಂತನ ದೇಹವನ್ನು ಪ್ರವೇಶಿಸಿದ್ದುದರಿಂದ ಸಾವಿತ್ರಿಯು ಪತಿಯ ಶಿರಸ್ಸನ್ನು ತೊಡೆಯಮೇಲೆ ಇಟ್ಟುಕೊಂಡೊಡನೆಯೇ ಆ ದೇಹವು ಪ್ರಾಣವಾಯುವಿನಿಂದ ಪೂರಿತವಾಗಿ ಚಲಿಸಲಾರಂಭಿಸಿತು. ಆ ಕೂಡಲೇ ಸತ್ಯವಂತನ ಎರಡು ಕಣ್ಣುಗಳೂ ತೆರೆಯಲ್ಪಟ್ಟುವು. ಮತ್ತು ಸಾವಿತ್ರಿಯನ್ನು ನೋಡಿದುವು.

೪. ಸತ್ಯವಂತನ ದೇಹವನ್ನು ಬಿಟ್ಟುಹೋಗಿದ್ದ ಪ್ರಾಣಗಳು ಪುನಃ ಕೂಡಿಕೊಂಡ ಕೂಡಲೇ ಸತ್ಯವಂತನು ಸಾವಿತ್ರಿಯನ್ನು ಕುರಿತು ಈರೀತಿ ಪ್ರಶ್ನೆಮಾಡಿದನು :—ಎಲೌ ಪ್ರಿಯೆಯೇ! ನನ್ನನ್ನು ಎಳೆದುಕೊಂಡು ಹೋಗುತ್ತಿದ್ದಾ ಪುರುಷನು ಈಗೆಲ್ಲಿ ಹೋದನು ?

೫. ಎಲೌ ಮಂಗಳಾಂಗಿಯೇ! ಅವನಾರೆಂಬುದನ್ನೂ ಸಹ ನಾನು ತಿಳಿಯೆನು. ನಾವು ಈ ವನಕ್ಕೆ ಬಂದು ಬಹಳ ಹೊತ್ತಾಯಿತು. ನಾನು ಮಲಗಿಕೊಂಡೂ ಸಹ ಬಹಳ ಹೊತ್ತಾಯಿತು.

**ಉಪವಾಸಪರಿಕ್ಲಾಂತಾ ಕರ್ಶಿತಾ ಭವತೀ ಮಯಾ ।**
**ಅಸ್ಮಾದ್ದುರ್ಹೃದಯೇನಾದ್ಯ ಪಿತರೌ ದುಃಖಿತೌ ತಥಾ ॥ ೬ ॥**

**ದ್ರಷ್ಟುಮಿಚ್ಛಾಮ್ಯಹಂ ಸುಭ್ರು ಗಮನೇ ತ್ವರಿತಾ ಭವ ।**

**ಸಾವಿತ್ರ್ಯುವಾಚ**

**ಆದಿತ್ಯೋಽಸ್ತಮನುಪ್ರಾಪ್ತೋ ಯದಿ ತೇ ರುಚಿತಂ ಪ್ರಭೋ ॥ ೭ ॥**

**ಆಶ್ರಮಂತು ಪ್ರಯಾಸ್ಯಾವಃ ಶ್ವಶುರೌ ತಪ್ಯತೋ ಮಮ ।**
**ಯಥಾವೃತ್ತಂ ಚ ತತ್ರೈವ ತವ ವಕ್ಷ್ಯಾಮ್ಯಥಾಶ್ರಮೆ ॥ ೮ ॥**

**ಪುಷ್ಕರ ಉವಾಚ**

**ಏತಾವದುಕ್ತ್ವಾ ಭರ್ತಾರಂ ಸಹಭರ್ತ್ರಾ ಯಯೌ ತದಾ ।**
**ಆಸನಾದಾಶ್ರಮಂ ಚೈವ ಸಹ ಭರ್ತ್ರಾ ನೃಪಾತ್ಮಜ ॥ ೯**

---

೬. ನಿನ್ನನ್ನೂ ಸಹ ನಾನು ಹಸಿವಿನಿಂದ ಬಳಲಿಸುತ್ತಾ ಈ ವನಕ್ಕೆ ಕರೆದು ಕೊಂಡು ಬಂದೆನು. ಇದೂ ಅಲ್ಲದೆ ದುಷ್ಟನಾದ ನನ್ನ ದೆಸೆಯಿಂದ ನನ್ನ ಮಾತಾ ಪಿತೃಗಳೂ ಸಹ ಬಹಳ ದುಃಖಕ್ಕೆ ಗುರಿಯಾಗಿರುವರು.

೭. ಇನ್ನು ನಾನು ಸ್ವಲ್ಪವೂ ವಿಳಂಬಮಾಡದೆ ಮನೆಗೆ ಹೋಗಬೇಕಾಗಿದೆ. ನೀನೂ ಸಹ ಜಾಗ್ರತೆಯಾಗಿ ಹೊರಡು. ಹೀಗೆ ಹೇಳಿದ ಪತಿಯು ಮಾತನ್ನು ಕೇಳಿ ಸಾವಿತ್ರಿಯು ಹೇಳುತ್ತಾಳೆ:—ನಾಥ! ಸಾಯಂಕಾಲವಾದುದು ನಿಜ, ನಿನ್ನ ಇಷ್ಟ ದಂತೆ ಆಶ್ರಮಕ್ಕೆ ಹೊರಡೋಣ. ಅತ್ತೆಮಾವಂದಿರು ತಪಿಸುತ್ತಿರುವರು.

೮. ಈಗ ನೀನು ಕೇಳಿದ ಪುರುಷನಾರೆಂಬ ವಿಷಯವನ್ನೂ ಅವನ ಚರಿತ್ರೆ ಯನ್ನೂ ಆಶ್ರಮಕ್ಕೆ ತಲುಪಿದ ಬಳಿಕ ಅವಕಾಶಮಾಡಿಕೊಂಡು ವಿಸ್ತಾರವಾಗಿ ಹೇಳುವೆನು.

೯. ಪುಷ್ಕರನು ಪರಶುರಾಮನನ್ನು ಕುರಿತು ಹೇಳುತ್ತಾನೆ.—ಮುಂದಿನ ಕಥೆ ಯನ್ನು ಕೇಳಯ್ಯಾ! ಭೃಗುಕುಲಲಲಾಮ! ಇಷ್ಟು ಮಾತನ್ನಾಡಿದ ಬಳಿಕ ಸಾವಿತ್ರಿಯು ಕೂಡಲೆ ಗಂಡನೊಡನೆ ಹೊರಟವಳಾಗಿ ಅವನೊಡನೆ ಆಶ್ರಮಕ್ಕೆ ತಲುಪಿದಳು.

ಏತಸ್ಮಿನ್ನವಕಾಶೇ ತು ಲಬ್ಧಚಕ್ಷುರ್ಮಹೀಪತಿಃ ।
ದ್ಯುಮತ್ಸೇನಃ ಸಭಾರ್ಯಸ್ತು ಪರ್ಯತಪ್ಯತ ಭಾರ್ಗವ ॥ ೧೦ ॥

ಸಾವಿತ್ರ್ಯಪಿ ವರಾರೋಹಾ ಸಹ ಸತ್ಯವತಾ ತದಾ ।
ವವಂದೇ ತತ್ರ ರಾಜಾನಂ ಸಭಾರ್ಯಂ ಭೃಗುನಂದನ ॥ ೧೧ ॥

ಪರಿಷ್ವಕ್ತಸ್ತದಾ ಪಿತ್ರಾ ಸತ್ಯವಾನ್ರಾಜನಂದನಃ ।
ಅಭಿವಾದ್ಯ ತತಃ ಸರ್ವಾನ್ವನೇ ತಸ್ಮಿಂಸ್ತಪೋಧನಾ ॥ ೧೨ ॥

ಉವಾಸ ತಾಂ ತದಾ ರಾತ್ರಿಮೃಷಿಭಿಃ ಸಹ ಧರ್ಮವಿತ್ ।
ಸಾವಿತ್ರ್ಯಪಿ ಜಗಾದಾಥ ಯಥಾ ವೃತ್ತಮನಿಂದಿತಾ ॥ ೧೩ ॥

ವ್ರತಂ ಸಮಾಪಯಾಮಾಸ ತಸ್ಯಾಮೇವ ತದಾ ನಿಶಿ ।
ತತಸ್ತು ರಾಮ ರಾತ್ರ್ಯಂತೇ ಶಾಲ್ವೇಭ್ಯಸ್ತಸ್ಯ ಭೂಪತೇಃ ॥ ೧೪ ॥

---

೧೦. ಈರೀತಿ ಸಾವಿತ್ರಿಸತ್ಯವಂತರಿಬ್ಬರೂ ಆಶ್ರಮಕ್ಕೆ ಬಂದು ತಲಪುವುದರೊಳಗಾಗಿಯೇ ಯಮನ ವರದಂತೆ ದ್ಯುಮತ್ಸೇನನಿಗೆ ಎರಡು ಕಣ್ಣೂ ಕಾಣಿಸಲಾರಂಭವಾಗಿತ್ತು. ಈರೀತಿ ಲಬ್ಧನೇತ್ರನಾದಾ ರಾಜನು ಹೆಂಡತಿಯೊಡನೆ ಮಾತನಾಡುತ್ತಾ ಮಗನೂ ಸೊಸೆಯೂ ಬರದೆ ಇದ್ದುದಕ್ಕಾಗಿ ಬಹಳ ವ್ಯಥೆಪಡುತ್ತಿದ್ದನು.

೧೧. ಇಷ್ಟರೊಳಗಾಗಿ ಆಶ್ರಮಕ್ಕೆ ಬಂದು ತಲಪಿದ ಸಾವಿತ್ರಿಯು ತನ್ನ ಪತಿಯೊಡನೆ ಅತ್ತೆಮಾವಂದಿರ ಕಾಲುಗಳಿಗೆ ಸಾಷ್ಟಾಂಗವಾಗಿ ಪ್ರಣಾಮಮಾಡಿದಳು.

೧೨. ತನಗೆ ನಮಸ್ಕರಿಸಿದ ಸತ್ಯವಂತನನ್ನು ತಂದೆಯು ಸಂತೋಷಭರಿತನಾಗಿ ನೋಡುತ್ತಾ ಅವನನ್ನು ಗಾಢಾಲಿಂಗನಮಾಡಿಕೊಂಡನು. ಆ ಬಳಿಕ ಸಾವಿತ್ರಿಯು ತನಗೂ ಯಮನಿಗೂ ನಡೆದ ಧರ್ಮಸಂವಾದವನ್ನು ಸ್ವಲ್ಪವೂ ಬಿಡದೆ ಆ ಋಷಿಸಂಘದಲ್ಲಿ ನಿರೂಪಿಸಿದಳು.

೧೩-೧೪. ಆ ರಾತ್ರಿಗೆ ಸರಿಯಾಗಿ ಆರಂಭಮಾಡಿದ್ದ ವ್ರತವೂ ಸಂಪೂರ್ಣವಾಯಿತು. ಆ ಮಾರನೆಯ ದಿನ ಬೆಳಗಾಗುವ ಹೊತ್ತಿಗೆ ಸರಿಯಾಗಿ ಸಾಲ್ವದೇಶದಿಂದ ಬಂದ ಜನರು ದ್ಯುಮತ್ಸೇನನನ್ನು ರಾಜ್ಯಕ್ಕೆ ಬಂದು ರಾಜ್ಯಭಾರವನ್ನು ವಹಿಸಿಕೊಳ್ಳಬೇಕೆಂದು ಕರೆಯುವುದಕ್ಕೆ ಬಂದರು.

ಆಜಗಾಮ ಜನಃ ಸರ್ವೋ ರಾಜ್ಯಾರ್ಥಾಯ ನಿಮಂತ್ರಣೇ ।
ಆಜ್ಞಾಪಯಾಮಾಸ ತದಾ ತಥಾ ಪ್ರಕೃತಿಶಾಸನಂ ॥ ೧೫ ॥

ವಿಚಕ್ಷುಷಸ್ತೇ ನೃಪತೇ ಯೇನ ರಾಜ್ಯಂ ಪುರಾ ಹೃತಂ ।
ಅಮಾತ್ಯೈಃ ಸಹ ಭೋಕ್ತ್ರವ್ಯಂ ರಾಜ್ಯಮಸ್ತು ಪುರೇ ನೃಪ ॥ ೧೬ ॥

ಏತಚ್ಛ್ರುತ್ವಾ ಯಯೌ ತತ್ರ ಬಲೇನ ಚತುರಂಗಿಣಾ ।
ಲೇಭೇ ಚ ಸಕಲಂ ವಾಕ್ಯಂ ಧರ್ಮರಾಜ್ಞೋ ಮಹಾತ್ಮನಃ ॥ ೧೭ ॥

ಭ್ರಾತೄಣಾಂ ಚ ಶತಂ ಲೇಭೇ ಸಾವಿತ್ರ್ಯಪಿ ವರಾಂಗನಾ ।
ಏವಂ ಪತಿವ್ರತಾ ಸಾಧ್ವೀ ಪಿತೃಪಕ್ಷಂ ನೃಪಾತ್ಮಜಾ ॥ ೧೮ ॥

---

೧೫-೧೬. ನಿಷ್ಕಂಟಕವಾದ ರಾಜ್ಯವನ್ನು ವಹಿಸಿಕೊಂಡು ವಿಚಕ್ಷಣರಾದ ಮಂತ್ರಿಗಳೊಡನೆ ಕೂಡಿ ರಾಜ್ಯಪರಿಪಾಲನೆ ಮಾಡಬೇಕೆಂಬ ಪ್ರಕೃತಿಶಾಸನವನ್ನು ಕೇಳಿದವನಾಗಿ ದ್ಯುಮತ್ಸೇನನು ತನಗೆ ಕಣ್ಣು ಬಂದುದಕ್ಕೂ, ಆ ಕೂಡಲೆ ರಾಜ್ಯವೂ ಸಹ ಲಬ್ಧವಾದುದಕ್ಕೂ, ಹಿಂದಿನ ರಾತ್ರಿ ಸಾವಿತ್ರಿಯ ಬಾಯಿಯಿಂದ ಕೇಳಿದ ಯಮ ಧರ್ಮರಾಜನ ವರಗಳ ಅದ್ಭುತ ಮಹಿಮೆಗೂ ಪರಮಾಶ್ಚರ್ಯಪಡುತ್ತಾ ಆನಂದ ಪಡುತ್ತಿದ್ದನು.

೧೭. ಇಷ್ಟರೊಳಗೆ ಆಶ್ರಮದ ಬಳಿಗೆ ರಾಜನನ್ನು ಕರೆದುಕೊಂಡು ಹೋಗಲು ಚತುರಂಗಬಲ ಬಂದೇಬಿಟ್ಟಿತು. ಜನರ ಮಾತನ್ನು ಕೇಳಿ, ಸಾವಿತ್ರಿಯ ಕಥೆಯನ್ನು ಕೇಳಿ, ಚತುರಂಗಬಲವೂ ಬಂದುದನ್ನು ನೋಡಿ ರಾಜನು ಪರವಶನಾಗಿ ಆ ಸೈನ್ಯದ ಜತೆಯಲ್ಲಿ ಊರಿಗೆ ಪ್ರಯಾಣಮಾಡಿದನು. ಇದೆಲ್ಲವೂ ತನ್ನ ಸೊಸೆಯು ಧರ್ಮ (ಯಮ)ರಾಜನಿಂದ ಪಡೆದುಕೊಂಡು ಬಂದ ವರದ ಮಹಿಮೆಯೆಂಬುದು ದ್ಯುಮತ್ಸೇನನಿಗೆ ತಿಳಿಯದೆ ಹೋಗಲಿಲ್ಲ

೧೮. ಯಮಧರ್ಮರಾಜನ ವರವು ಫಲಿಸಿತು. ಸಾವಿತ್ರಿಗೆ ನೂರುಮಂದಿ ತಮ್ಮಂದಿರು ಹುಟ್ಟಿದರು. ಈ ರೀತಿಯಾಗಿ ಮಹಾಪತಿವ್ರತೆಯಾದ ಆ ಸಾವಿತ್ರಿಯು ತಂದೆಯ ವಂಶವನ್ನುದ್ಧಾರ ಮಾಡಿದಳು.

**ಉಜ್ಜಹಾರ ವರಾರೋಹಾ ಭರ್ತೃಪಕ್ಷಂ ತಥೈವ ಚ**
**ಮೋಚಯಾಮಾಸ ಭರ್ತಾರಂ ಮೃತ್ಯುಪಾಶವಶೀಕೃತಂ ॥ ೧೯ ॥**

**ತಸ್ಮಾತ್ಸಾಧ್ವ್ಯಃ ಸ್ತ್ರಿಯಃ ಪೂಜ್ಯಾಃ ಸತತಂ ದೇವವಜ್ಜನೈಃ ।**
**ತಾಸಾಂ ರಾಮಪ್ರಸಾದೇನ ಧಾರ್ಯತೇ ವೈ ಜಗತ್ತ್ರಯಂ ॥ ೨೦ ॥**

**ತಾಸಾಂ ನ ವಾಕ್ಯಂ ಭವತೀಹ ಮಿಥ್ಯಾ**
**ನ ಜಾತು ಲೋಕೇಷು ಚರಾಚರೇಷು ॥**
**ತಸ್ಮಾತ್ಸದಾ ತಾಃ ಪರಿಪೂಜನೀಯಾಃ ।**
**ಕಾಮಾನ್ಸಮಗ್ರಾನಭಿಕಾಮಯಾನೈಃ ॥ ೨೧ ॥**

**ಇತಿ ಶ್ರೀ ವಿಷ್ಣುಧರ್ಮೋತ್ತರೇ ದ್ವಿತೀಯಖಂಡೇ ಮಾರ್ಕಂಡೇಯ**
**ವಜ್ರಸಂವಾದೇ ಸಾವಿತ್ರ್ಯುಪಾಖ್ಯಾನೇ**
**ಏಕಚತ್ವಾರಿಂಶತ್ತಮೋಽಧ್ಯಾಯಃ**

---

೧೯. ತಂದೆಯ ವಂಶವನ್ನು ಮಾತ್ರವೇ ಅಲ್ಲ. ಗಂಡನ ವಂಶವನ್ನೂ ಸಹ ಆ ಪತಿವ್ರತೆಯು ಉದ್ಧಾರಮಾಡಿದಳು. ಮೃತ್ಯುಪಾಶದಿಂದ ಕಟ್ಟಿ ಬಿಗಿಯಲ್ಪಟ್ಟಿದ್ದ ಗಂಡನನ್ನೂ ಸಹ ಮೃತ್ಯುಪಾಶದಿಂದ ಬಿಡಿಸಿಕೊಂಡು ಬಂದ ಆ ಪರಮಪತಿವ್ರತಾ ಶಿರೋಮಣಿಯು ಪ್ರಾತಃಸ್ಮರಣೀಯಳೆಂದು ಹೇಳಲು ಸಂದೇಹವೇನಿದೆ ?

೨೦. ದೇವರನ್ನು ಜನರು ಹೇಗೆ ಪೂಜೆಮಾಡುವರೋ ಅದೇ ಮೇರೆ ಪತಿವ್ರತಾ ಶಿರೋಮಣಿಯರನ್ನು ಪೂಜೆಮಾಡಬೇಕು. ಪರಶುರಾಮ ! ಕೇಳು. ಅವರ ಅನುಗ್ರಹ ದಿಂದಲೇ ಮೂರು ಲೋಕವೂ ಸ್ಥಿರವಾಗಿ ನಿಂತಿದೆಯೆಂದು ಸಕಲರೂ ಭಾವಿಸಬೇಕು.

೨೧. ಚರಾಚರದಿಂದೊಡಗೂಡಿದೀ ಪ್ರಪಂಚದಲ್ಲಿ ಪತಿವ್ರತೆಯರ ಬಾಯಿ ಯಿಂದ ಹೊರಟ ಮಾತು ಯಾವಾಗಲೂ ಎಂದೆಂದಿಗೂ ಸುಳ್ಳಾಗುವುದೇ ಇಲ್ಲ. ಸಕಲ ಮನೋರಥಗಳನ್ನೂ ಬಯಸುವ ಮನುಷ್ಯರು ಈ ಕಾರಣದಿಂದಲೇ ಪತಿವ್ರತೆಯರ ಅನುಗ್ರಹಕ್ಕೆ ಪಾತ್ರರಾಗುವುದೊಳ್ಳೆಯದೆಂದು ನಿನಗೆ ಇಷ್ಟೊಂದು ವಿಚಾರವನ್ನು ಹೇಳಿರುವೆನೆಂದು ಪುಷ್ಕರನು ಪರಶುರಾಮದೇವರಿಗೆ ನಿರೂಪಿಸಿದನೆಂಬಲ್ಲಿಗೆ,

ವಿಷ್ಣುಧರ್ಮೋತ್ತರ ಪುರಾಣದ ಮಾರ್ಕಂಡೇಯ ವಜ್ರಸಂವಾದರೂಪವಾದ
ಎರಡನೆಯ ಖಂಡದಲ್ಲಿ ಸಾವಿತ್ರೀ ಚರಿತ್ರೆಯೆಂಬ ಹೆಸರಿನ
ನಲವತ್ತೊಂದನೆಯ ಅಧ್ಯಾಯ ಮುಗಿಯಿತು.